## ಲೇಖಕರಿಗೆ ಸೂಚನೆಗಳು

೧. ಲೇಖನಗಳು ಕರ್ನಾಟಕ ಅಧ್ಯಯನಗಳಿಗೆ ಸಂಬಂಧಿಸಿರಬೇಕು ಅಥವಾ ಕರ್ನಾಟಕ ಅಧ್ಯಯನಗಳಿಗೆ ಹೊಸ ಆಯಾಮ ನೀಡಬಲ್ಲ ತಾತ್ವಿಕ ಚಿಂತನೆಗಳನ್ನು ಒಳಗೊಂಡಿರಬೇಕು.

೨. ಅನುವಾದಿತ ಲೇಖನವಾಗಿದ್ದಲ್ಲಿ ಸಂಬಂಧಪಟ್ಟವರ ಅನುಮತಿಯನ್ನು ಪಡೆದಿರಬೇಕು.

೩. ಲೇಖನಗಳನ್ನು ಹಾಳೆಯ ಒಮ್ಮಗ್ಗುಲಲ್ಲಿ ಅಂದವಾಗಿ ಬರೆದಿರಬೇಕು.

೪. 'ಲೇಖನಗಳು' ೫ ರಿಂದ ೧೦ ಪುಟಗಳ ಒಳಗೆ ಹಾಗೂ 'ಹೊಳಹು'ಗಳು ೧ ರಿಂದ ೨ ಪುಟಗಳ ಒಳಗೆ ಇರಬೇಕು.

೫. ಲೇಖನಗಳಲ್ಲಿ ಬರುವ ಉಲ್ಲೇಖಗಳಿಗೆ ಸಂಬಂಧಿಸಿದಂತೆ ಟಿಪ್ಪಣಿಗಳನ್ನು ನೀಡುವಾಗ, ಕೆಳಕಂಡ ಮಾದರಿ ಅನುಸರಿಸಿದರೆ ಒಳ್ಳೆಯದು. ಲೇಖನದ ಒಳಗೆ: ಲೇಖಕರ ಸಂಕ್ಷಿಪ್ತ ಹೆಸರು, ಕೃತಿವರ್ಷ, ಪುಟಸಂಖ್ಯೆ -ಈ ಕ್ರಮದಲ್ಲಿ. ಉದಾ: (ಚಿಮೂ: ೧೯೯೩:೫೪) ಲೇಖನದ ಕೊನೆಗೆ: ಲೇಖಕ, ವರ್ಷ, ಕೃತಿ, ಪ್ರಕಾಶನ, ಊರು -ಈ ಕ್ರಮದಲ್ಲಿ ಉದಾ: ಚಿದಾನಂದಮೂರ್ತಿ ಎಂ. (೧೯೯೩) ಹೊಸತು ಹೊಸತು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಲೇಖನಗಳ ಒಳಗಿನ ಅಭಿಪ್ರಾಯಗಳು ಆಯಾ ಲೇಖಕರವು. ವಿಶ್ವವಿದ್ಯಾಲಯದವಲ್ಲ.

೭. ಲೇಖನಗಳನ್ನು ಪತ್ರಿಕೆಯ ಆಶಯಕ್ಕೆ ಅನುಗುಣವಾಗಿ ಆಯ್ದು ಪ್ರಕಟಿಸಲಾಗುವುದು. ಅಪ್ರಕಟಿತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಆದ್ದರಿಂದ ಲೇಖಕರು ಲೇಖನದ ನಕಲನ್ನು ಇಟ್ಟುಕೊಳ್ಳುವುದು.

೮. ಲೇಖನಗಳನ್ನು ಕಳಿಸುವ ವಿಳಾಸ: ಸಂಪಾದಕ<br>'ಕನ್ನಡ ಅಧ್ಯಯನ' ಪತ್ರಿಕೆ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ<br>ವಿದ್ಯಾರಣ್ಯ - ೫೮೩ ೨೭೬.

| | |
|---|---|
| ಚಂದಾ ವಿವರ : | ವಾರ್ಷಿಕ ಚಂದಾ: ರೂ. ೫೦.೦೦<br>ಐದು ವರ್ಷಗಳಿಗೆ: ರೂ. ೨೦೦.೦೦ |
| ಚಂದಾ ಕಳಿಸುವ ವಿಳಾಸ : | ನಿರ್ದೇಶಕರು, ಪ್ರಸಾರಾಂಗ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ<br>ವಿದ್ಯಾರಣ್ಯ - ೫೮೩ ೨೭೬ |

# ಕನ್ನಡ ಅಧ್ಯಯನ

ಚಳಿ ಸಂಚಿಕೆ

ಸಂಪಾದಕ

**ರಹಮತ್ ತರೀಕೆರೆ**





ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ

**KANNADA ADHYAYANA** (Quartely) Vol. VI-2
Ed. by Dr. Rahamath Tarikere
Published by The Director, Prasaranga,
Kannada University, Hampi, Vidyaranya - 583 276

Pages : XI + 122

ತ್ರೈಮಾಸಿಕ ಪತ್ರಿಕೆ, ಸಂಪುಟ ೬, ಸಂಚಿಕೆ ೨ (ಅಕ್ಟೋಬರ್, ನವೆಂಬರ್, ಡಿಸೆಂಬರ್ ೧೯೯೯)





ಬಿಡಿ ಪ್ರತಿ ಬೆಲೆ : ರೂ. ೧೫.೦೦
ವಾರ್ಷಿಕ ಚಂದಾ : ರೂ. ೫೦.೦೦
ಪಂಚವಾರ್ಷಿಕ ಚಂದಾ : ರೂ. ೨೦೦.೦೦

ಮುಖಪುಟ : ಕೆ.ಕೆ. ಮಕಾಳಿ

**ಪ್ರಕಾಶಕರು**
ಪ್ರೊ. ಎ.ವಿ. ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ೫೮೩ ೨೭೬

**ಡಿ.ಟಿ.ಪಿ.**
ಸಂಧ್ಯಾ ಕಂಪ್ಯೂಟರ್ ಗ್ರಾಫಿಕ್ಸ್, ಹೊಸಪೇಟೆ

**ಮುದ್ರಕರು**
ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್, ಗದಗ

ಸೊಲ್ಲು

# 'ಕನ್ನಡದ ಮನಸ್ಸು'

ಸಂಪಾದಕ

'ಕನ್ನಡದ ಮನಸ್ಸು' ಎಂಬ ಮಾತನ್ನು ಆಗಾಗ ಕೇಳುತ್ತಿರುತ್ತೇವೆ. ನಿಜವಾಗಿ ಹಾಗೆಂದರೆ ಏನು? ಈ ಪರಿಕಲ್ಪನೆಯನ್ನು ಬಹಳ ಸಡಿಲವಾದ ಅರ್ಥಗಳಲ್ಲಿ ಬಳಸಲಾಗುತ್ತಿದೆ. ಕನ್ನಡವನ್ನು ಅದರ ಅಭಿವ್ಯಕ್ತಿ ಸಾಮರ್ಥ್ಯ ಹೆಚ್ಚಾಗುವಂತೆ ಪಳಗಿಸಿದ ಬಸವಣ್ಣ, ಪಂಪ, ಕುಮಾರವ್ಯಾಸ, ಬೇಂದ್ರೆ ಮುಂತಾದ ಲೇಖಕರನ್ನು ಕುರಿತೂ ಈ ಮಾತನ್ನೂ ಹೇಳಲಾಗುತ್ತದೆ; ನವೆಂಬರ್ ತಿಂಗಳಲ್ಲಿ ಕನ್ನಡಾಭಿಮಾನದ ಭಾಷಣ ಮಾಡುವವರನ್ನು ಕುರಿತೂ ಉಪ ಯೋಗಿಸಲಾಗುತ್ತದೆ. ಆದರೆ ಸಂಸ್ಕೃತಿ ಚಿಂತನೆಯಲ್ಲಿ ಈ ಪರಿಕಲ್ಪನೆಯನ್ನು ನಿರ್ದಿಷ್ಟವಾದ ಹಾಗೂ ಸೂಕ್ಷ್ಮವಾದ ಅರ್ಥದಲ್ಲಿ ಬಳಸುವಂತೆ ಅದಕ್ಕೊಂದು ವ್ಯಾಖ್ಯಾನವನ್ನು ನೀಡಬೇಕಾದ ಅಗತ್ಯವಿದೆ ಎಂದು ತೋರುತ್ತದೆ. ಇಲ್ಲದಿದ್ದರೆ, ಸೋದರ ಭಾಷೆಗಳ ಹಾಗೂ ಭಾಷಿಕರ ಮೇಲೆ ಬೆಂಕಿಕಾರುವ ಮೂಲಕ ಕನ್ನಡಪ್ರೇಮವನ್ನು ತೋರುವ ಉಗ್ರಾಭಿಮಾನಿಗಳಿಗೂ, ಭಾಷೆಯನ್ನು ತಮ್ಮ ಪ್ರತಿಭೆ ಕಲ್ಪಕಶಕ್ತಿಗಳಿಂದ ಬಳಸುತ್ತ ಅದರ ಜೀವಂತಿಕೆಯನ್ನು ಹೆಚ್ಚಿಸುವ ಜನಸಮುದಾಯ ಹಾಗೂ ಲೇಖಕರಿಗೂ ವ್ಯತ್ಯಾಸವೇ ಇರುವುದಿಲ್ಲ.

ಭಾಷೆಯನ್ನು ಕುರಿತು ಅದನ್ನು ಬಳಸುವವರ ಮನೋಭಾವವನ್ನು ಪರಿಶೀಲಿಸಿದರೆ ಯಾವುದು ಕನ್ನಡದ ಮನಸ್ಸು ಯಾವುದು ಅಲ್ಲ ಎಂಬುದು ತಿಳಿಯುತ್ತದೆ. ಕೆಲವರು- ತಮ್ಮ ಮನೆಮಾತು ಕನ್ನಡ ಆಗಿದ್ದರೂ- ಆಳದಲ್ಲಿ ಸಂಸ್ಕೃತ ಇಲ್ಲವೇ ಇಂಗ್ಲೀಶಿನ ಪರವಾಗಿ ಯೋಚಿಸುತ್ತಾರೆ. ಇದಕ್ಕೆ ಕೇವಲ ಭಾವನಾತ್ಮಕವಾದ ಕಾರಣಗಳಿರುವುದಿಲ್ಲ. ಮಧ್ಯಮ ವರ್ಗದ ಜನರ ಸಾಮಾಜಿಕ ಆರ್ಥಿಕ ಲೆಕ್ಕಾಚಾರಗಳೂ ಇರುತ್ತವೆ. ಇಂಗ್ಲಿಶಿನಲ್ಲಿ 'ತಪ್ಪು' ಮಾಡಿದ್ದಕ್ಕೆ ನಾಚಿಕೆ ಪಡುವುದು 'ತಪ್ಪು' ಮಾಡಿದವರಿಗೆ ಅಪಹಾಸ್ಯ ಮಾಡುವುದು, ಈ ಮನೋಭಾವದ ಒಂದು ಸರಳ ಆಯಾಮ ಮಾತ್ರ. ಸಾಂಸ್ಕೃತಿಕವಾಗಿ ಇದಕ್ಕೆ ಸಂಕೀರ್ಣ ರೂಪಗಳಿರುತ್ತವೆ. ಕನ್ನಡದ ಸಾಧನೆ ಎನ್ನುವಂಥದ್ದು ಏನಾದರು ಇದ್ದರೆ, ಅದು ಖಂಡಿತ

ಕಡವಾಗಿ ಬಂದಿದ್ದು ಎಂದು ಈ ಮನೋಭಾವ ಭಾವಿಸುತ್ತದೆ. 'ಕನ್ನಡದ ಕಾಳಿದಾಸ', 'ಕನ್ನಡದ ಶೇಕ್ಸ್ ಪಿಯರ್', 'ಕನ್ನಡದ ವರ್ಡ್ಸ್‌ವರ್ತ್' ಮುಂತಾದ ನಾಮಕರಣಗಳು ಹುಟ್ಟುವುದು ಆಗಲೇ. ಶ್ರೀ ಅವರ 'ಇಂಗ್ಲಿಷ್ ಗೀತಗಳು' 'ಇಂಗ್ಲೀಶಿನಿಂದ ಮಾಡಿದ ಅನುವಾದಗಳು' ಎಂಬ ಗ್ರಹಿಕೆಯನ್ನು ಗಮನಿಸಬೇಕು. ಇಂಥ ಸರಳೀಕರಣಗೊಂಡ ಗ್ರಹಿಕೆಗೆ ಅನುವಾದಕರು ಮೂಲವನ್ನು ಎಷ್ಟು ಅನುಸರಿಸಿದ್ದಾರೆ, ಎಲ್ಲೆಲ್ಲಿ ಮೂಲದಿಂದ ದೂರ ಹೋಗಿದ್ದಾರೆ ಎಂಬ ಪರಿಶೀಲನೆಯಷ್ಟೆ ಮುಖ್ಯವಾಗಿರುತ್ತದೆ; 'ಮೂಲ'ವನ್ನು ಮೀರಿದ್ದ ರಿಂದ ಆ ಪದ್ಯಕ್ಕೆ ಏನು ಹೊಸತನ ಬಂದಿದೆ ಎಂಬುದಲ್ಲ. ಶೇಕ್ಸ್ ಪಿಯರನ ಇಲ್ಲವೆ ಕಾಳಿದಾಸನ ನಾಟಕಗಳ ಅನುವಾದ/ರೂಪಾಂತರಗಳನ್ನು ಕುರಿತು ಚರ್ಚೆ ನಡೆಯುವಾಗಲೂ, ಇದೇ ಮನೋಭಾವ ಕೆಲಸ ಮಾಡುವುದುಂಟು.

ಇದೊಂದು ಬಗೆಯಲ್ಲಿ ವಸಾಹತೀಕರಣಗೊಂಡ ಮನಸ್ಥಿತಿ ; ಈ ಮನಸ್ಥಿತಿ ಆಳಿದ ಅಥವಾ ಆಳುತ್ತಿರುವ ಸಂಸ್ಕೃತಿಗಳಿಗೆ ತನ್ನನ್ನು ತೆತ್ತುಕೊಳ್ಳುವಂಥದು. ಈ ಮನಸ್ಥಿತಿಗೆ ಎಂದೂ ತನ್ನ ಭಾಷೆಯಲ್ಲಿ ಸ್ವಂತದನ್ನು ಸೃಷ್ಟಿಸಲು ಅಥವಾ ಹಾಗೆ ಸೃಷ್ಟಿಯಾದುದನ್ನು ಗುರುತಿಸಲು ಸಾಧ್ಯವಾಗುವುದಿಲ್ಲ. ವಸಾಹತುಶಾಹಿಯಿಂದ (ಅದು ಇಂಗ್ಲೀಶೆ ಆಗಬೇಕಿಲ್ಲ) ಆಳಿಸಿಕೊಂಡ ದೇಶದಲ್ಲಿ ಇಂತಹ ಆತ್ಮನಿರಾಕರಣೆಯ ಮನೋಭಾವ ಆಳವಾಗಿ ಬೇರು ಬಿಟ್ಟಿರುತ್ತದೆ.

ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿ ಅವರು ವಚನಗಳನ್ನು ಕುರಿತು ಮಾಡಿರುವ ವಿಶ್ಲೇಷಣೆ ('ಬಸವರತ್ನರತ್ನಾಕರ') ಇದಕ್ಕೆ ಒಳ್ಳೇ ಉದಾಹರಣೆ. ಅವರು ಕನ್ನಡದ ವಚನಗಳನ್ನು ಒಂದೊಂದಾಗಿ ಪರಿಶೀಲಿಸುತ್ತ, ಅವು ಹೇಗೆ ಉಪನಿಷತ್ತಿನ ಪ್ರಭಾವದಲ್ಲಿ ರಚನೆಯಾಗಿವೆ ಎಂಬುದನ್ನು ಹೇಳುತ್ತಾ ಹೋಗುತ್ತಾರೆ. ಮೂಲತ: ಸಂಸ್ಕೃತ ಪಂಡಿತರಾಗಿದ್ದ ಶಾಸ್ತ್ರಿಯವರಿಗೆ ೧೨ನೇ ಶತಮಾನದ ಕರ್ನಾಟಕ ಹಾಗೂ ಕನ್ನಡದ ವಿಶಿಷ್ಟ ಸಂದರ್ಭವು ಹೇಗೆ ವಚನಗಳನ್ನು ಸೃಷ್ಟಿಸಿತು ಎಂಬ ಬಗ್ಗೆ ಯೋಚಿಸಲು ಸಾಧ್ಯವೇ ಆಗುವುದಿಲ್ಲ. ಪಡೆದುಕೊಳ್ಳುವ ನೆಲೆಯಲ್ಲಿರುವ ಭಾಷೆ ಅಥವಾ ಸಂಸ್ಕೃತಿಯು, ಏನು ಕೊಟ್ಟರೂ ಕೃತಜ್ಞತೆಯಿಂದ ತೆಗೆದುಕೊಳ್ಳುತ್ತದೆ ಎಂಬ ನೆಲೆಯಲ್ಲಿ ನೋಡುವುದು ಇಲ್ಲಿನ ಧೋರಣೆ. ಆದರೆ ಪಡೆದುಕೊಳ್ಳುವ ಭಾಷೆ ಮತ್ತು ಸಂಸ್ಕೃತಿಗಳನ್ನು ಹೀಗೆ ಏಕಮುಖದಲ್ಲಿ ನೋಡಲು ಆಗುವುದಿಲ್ಲ. ಅವು 'ಪಡೆದು'ಕೊಂಡಿದ್ದನ್ನು ತಮ್ಮ ಅಗತ್ಯಕ್ಕೆ ತಕ್ಕಂತೆ ಮಾರ್ಪಡಿಸಿ ಕೊಳ್ಳುತ್ತವೆ. 'ಹೊರ'ಗಿನದನ್ನು ತಮ್ಮದನ್ನಾಗಿ ಮಾಡಿಕೊಳ್ಳಲು ವಿಚಿತ್ರ ಹೋರಾಟ ಮಾಡುತ್ತವೆ. ಪಡೆದದ್ದು ಸರಿಯಾಗಿ ಹೊಂದಾಣಿಕೆಯಾಗದೆ ಹೋದರೆ, ವೈರುಧ್ಯಗಳನ್ನು ಉಳಿಸಿಕೊಂಡು ತಲ್ಲಣ ಪಡುತ್ತವೆ. ಬಹಳ ಸಲ, ಬಡಕಲಾದ ಹಂದರವನ್ನು ಹೊರಗಿನಿಂದ ಪಡೆದುಕೊಂಡು, ಅದಕ್ಕೆ ಅಪಾರವಾದ ಸೃಜನಶೀಲತೆಯನ್ನು ಜೀವಂತಿಕೆಯನ್ನು ಸಂಸ್ಕೃತಿ ವಿಶಿಷ್ಟತೆಯನ್ನು ಸೇರಿಸುತ್ತವೆ. ಈ ತಲ್ಲಣ, ಹೋರಾಟ, ಗೆಲುವುಗಳನ್ನೆಲ್ಲ, ಸಾಂಸ್ಕೃತಿಕ

ಸೂಕ್ಷ್ಮತೆಯಿಂದ ಅರಿಯಬೇಕು: ಪಂಪನು 'ವಿಕ್ರಮಾರ್ಜುನ ವಿಜಯ'ವನ್ನು ಬರೆಯಲು 'ವ್ಯಾಸ ಮುನೀಂದ್ರ ರುಂದ್ರ ವಚನಾಮೃತ ವಾರ್ಧಿ'ಯನ್ನು ಈಸುತ್ತ ಪಟ್ಟ ಕಷ್ಟ, ತೋರಿದ ಪ್ರತಿಭೆ, ಸಾಧಿಸಿದ ಯಶಸ್ಸುಗಳನ್ನು ಕಾಣುವಂತಾಗಬೇಕು. ಇದನ್ನು ಕಾಣಲು ಸಾಧ್ಯವಾಗುವುದನ್ನೇ ನಾನು 'ಕನ್ನಡದ ಮನಸ್ಸು' ಎಂದು ಕರೆಯುತ್ತೇನೆ.

ಕೆ.ಕೃಷ್ಣಮೂರ್ತಿ ಅವರ ಅನುವಾದಗಳಲ್ಲಿ ಕೂಡ ಈ ಸಮಸ್ಯೆಯಿದೆ. ಸಂಸ್ಕೃತದಿಂದ ಅನೇಕ ಕೃತಿಗಳನ್ನುಅನುವಾದಿಸಿ ಅವರು ಉಪಕಾರ ಮಾಡಿದ್ದಾರೆ.ಇದನ್ನು ಕೃತಜ್ಞತೆಯಿಂದ ನೆನೆಯಬೇಕು. ಆದರೆ ಅನುವಾದ ಮಾಡುವಾಗ ಅವರ ಮನಸ್ಸಿನಲ್ಲಿ, ಹೊಟ್ಟೆ ತುಂಬಿದ ಮನೆಯವರು ಹಸಿದವರಿಗೆ ಕರುಣೆಯಿಂದ ಅನ್ನ ಹಾಕುವ ಧೋರಣೆಯೇ ಕೆಲಸ ಮಾಡುತ್ತದೆ ಅನಿಸುತ್ತದೆ. ಐಎಂಎಫ್‌ನವರು ಬಡದೇಶಗಳಿಗೆ ಸಾಲ ಕೊಡುವ ಭಂಗಿಯಿದು. ಶ್ರೀವಿಜಯನ 'ಕವಿರಾಜಮಾರ್ಗ'ವನ್ನು ಸಂಪಾದನೆ ಮಾಡುವಲ್ಲಿ ಕೃಷ್ಣಮೂರ್ತಿ ಅವರು ತೋರುವ ಸ್ವಭಾವದಲ್ಲಿಯೂ ಇದು ಗೋಚರವಾಗುತ್ತದೆ. 'ಕವಿರಾಜಮಾರ್ಗ'ದ ಪದ್ಯವನ್ನು ಹೊಸಗನ್ನಡಕ್ಕೆ ಅನುವಾದಿಸುವಾಗ, ಅವರಿಗೆ ಯಾವುದು ದಂಡಿಯ 'ಕಾವ್ಯಾದರ್ಶ'ದಿಂದ ತೆಗೆದುಕೊಂಡಿದ್ದು ಎನ್ನುವುದನ್ನು ತೋರಿಸುವುದರಲ್ಲೇ ಹೆಚ್ಚು ಆಸಕ್ತಿ. ಕನ್ನಡದ ಯಾವ ಚಾರಿತ್ರಿಕ ಇಕ್ಕಟ್ಟುಗಳಲ್ಲಿ ಕವಿರಾಜಮಾರ್ಗಕಾರ ಬರೆಯುತ್ತಿದ್ದಾನೆ ಎಂಬ ಬಗ್ಗೆ ಅಲ್ಲ.

ಡಿ.ಆರ್. ನಾಗರಾಜ ಅವರ ಇತ್ತೀಚಿನ 'ಅಲ್ಲಮಪ್ರಭು ಮತ್ತು ಶೈವಪ್ರತಿಭೆ' ಕೃತಿ ಈ ನೆಲೆಯ ಪ್ರಯತ್ನವೆಂದು ಅನಿಸುತ್ತದೆ. ಇದು ಕನ್ನಡದ ಒಬ್ಬ ದೇಶೀಯ ಲೇಖಕನನ್ನು ಜಾಗತಿಕವಾದ ಅಥವಾ ಅಖಿಲ ಭಾರತೀಯ ಸಾಧಕರ ಕಣ್ಣಲ್ಲಿ ನೋಡುವುದಿಲ್ಲ. ಬದಲಾಗಿ, ರೂಢಿಯಲ್ಲಿರುವ ಜನಪ್ರಿಯ ವಿಧಾನವನ್ನು ಉಲ್ಟಾಮಾಡಿ ನೋಡುತ್ತದೆ. ಅಂದರೆ ಭಾರತದ ದೊಡ್ಡ ತತ್ವಜ್ಞಾನಿಗಳೆಂದು ಹೆಸರಾದ ಅಭಿನವಗುಪ್ತ ಮುಂತಾದ ದಾರ್ಶನಿಕರನ್ನು ಹಾಗೂ ಅವರ ಕಾಶ್ಮೀರಶೈವ ದರ್ಶನವನ್ನು ಅಲ್ಲಮನ ಕಣ್ಣಲ್ಲಿ ನೋಡುತ್ತದೆ. ದಾಸಗುಪ್ತ ಎನ್ನುವವರು ಕನ್ನಡ ಮತ್ತು ಕರ್ನಾಟಕಗಳ ಚಾರಿತ್ರಿಕ ಸಂದರ್ಭವನ್ನು ಲೆಕ್ಕಿಸದೆ ಅಖಿಲ ಭಾರತೀಯ ಸಾಧಾರಣೀಕರಣಗಳಲ್ಲಿ ವಚನಕಾರರನ್ನು ಗುಡಿಸಿಹಾಕಿರುವುದನ್ನು ನಿರಾಕರಿಸುವ ಮೂಲಕ, ಈ ಕೆಲಸ ಮಾಡುತ್ತದೆ.

ಭಾಷೆಯ ಕ್ಷೇತ್ರದಲ್ಲಿ ಕೆಲಸ ಮಾಡುವ ಬಹಳ ವಿದ್ವಾಂಸರಲ್ಲಿ ಎದ್ದು ಕಾಣುವ ಕಾಯಿಲೆ ಎಂದರೆ, ದೇಶೀ ಶಬ್ದಗಳ ಮೂಲವನ್ನು, ಕ್ಲಾಸಿಕಲ್ ಭಾಷೆಗಳಲ್ಲಿ ಹುಡುಕುವುದು. ಆ ಭಾಷೆಗಳ ವರ್ಣಮಾಲೆ, ವ್ಯಾಕರಣ, ವಾಕ್ಯರಚನೆಗಳನ್ನು ತಂದು ದೇಶೀ ಭಾಷೆಗಳಿಗೆ ಹೇರುವುದು. ಯಾವುದೇ ಜೀವಂತ ಭಾಷೆಯೊಂದು ಅನ್ಯಭಾಷೆಗಳಿಂದ ಸ್ವೀಕಾರ ಮಾಡಿದರೂ ಅದಕ್ಕೆ ಮೂಲಭೂತವಾದ ಒಳ ಅಗತ್ಯ ಮತ್ತು ಒಂದು ಅನನ್ಯತೆ ಇರುತ್ತದೆ ಎಂದು ತಿಳಿಯದ ಮನಸ್ಸುಗಳು ಮಾತ್ರ ಇಂಥ ಹೇರಿಕೆ ಮಾಡುತ್ತವೆ. ಇಂಥ ಹೇರಿಕೆಗಳನ್ನು ಕನ್ನಡದ

ಮನಸ್ಸುಗಳು ಅನೇಕ ಬಗೆಯಲ್ಲಿ ಪ್ರತಿರೋಧ ಮಾಡಿವೆ. ಅದು ವಚನಕಾರರು ಇರಬಹುದು. ವೈಯಾಕರಣಗಳಿರಬಹುದು; ಕನ್ನಡಕ್ಕೆ ಅದರದೇ ಆದ ಅಕ್ಷರಮಾಲೆ ಪದ ಹಾಗೂ ವಾಕ್ಯರಚನೆ ವಿಧಾನ, ಲಯ ಇದೆ; ಇದಕ್ಕೂ ಆ ಭಾಷಿಕ ಸಂಸ್ಕೃತಿಗೂ ಸಂಬಂಧ ಇದೆ ಎಂದು ಪ್ರತಿಪಾದಿಸುವ ಕೆಲಸವನ್ನು ವೈಯಾಕರಣಗಳೂ ಭಾಷಾವಿಜ್ಞಾನಿಗಳೂ ಮಾಡಿದ್ದಕ್ಕೆ ಬಹು ದೀರ್ಘ ಚರಿತ್ರೆಯಿದೆ. 'ಕನ್ನಡಕ್ಕೆ ಬೇಕು ಕನ್ನಡದ್ದೇ ಆದ ವ್ಯಾಕರಣ' ಎಂಬ ಘೋಷಣೆ ಮಾಡಿ ಡಿ ಎನ್ ಶಂಕರಭಟ್ಟರು ಬರೆದ ಪುಸ್ತಕವು ('ಕನ್ನಡ ಶಬ್ದರಚನೆ' ೧೯೯೯) ಇತ್ತೀಚಿನ ಒಂದು ಉದಾಹರಣೆ.

ಆದರೆ ಯಾವ 'ಹೊರ' ಪ್ರಭಾವಗಳಿಲ್ಲದೆ ಕನ್ನಡದ ಸ್ವಾಂತಿಕೆಯನ್ನು ಸಾಧಿಸಲು ಹೋದ ಪ್ರಯತ್ನಗಳು ವೈಯಕ್ತಿಕ ಸಾಹಸಗಳಾಗಿ ಪ್ರಯೋಗಗಳಾಗಿ ಒಂಟಿಯಾಗಿ ನಿಂತವು. ಸಮುದಾಯದ ಮನ್ನಣೆಯನ್ನು ಪಡೆಯಲಿಲ್ಲ; ಇದು ಕೂಡ ಇನ್ನೊಂದು ಸತ್ಯವನ್ನು ರುಜುವಾತು ಪಡಿಸುತ್ತದೆ. ಅಂಡಯ್ಯ ('ಕಬ್ಬಿಗರ ಕಾವ'), ಮುಳಿಯ ತಿಮ್ಮಪ್ಪಯ್ಯ ('ಸೊಬಗಿನ ಬಳ್ಳಿ'), ಕೊಳಂಬೆ ಪುಟ್ಟಣ್ಣಗೌಡ('ಕಾಲೂರ ಚೆಲುವೆ' 'ಅಚ್ಚಕನ್ನಡ ನುಡಿಕೋಶ') ಇವರ ಪ್ರಯತ್ನಗಳು ಕನ್ನಡದ ಮನಸ್ಸಾದರೂ ಕನ್ನಡದ ರಕ್ತದೊಳಗೆ ಸೇರಿಹೋಗಲಿಲ್ಲ.

ಈ ಹಿನ್ನೆಲೆಯಲ್ಲಿಯೇ, ಈ ಸಂಚಿಕೆಯಲ್ಲಿ ಪ್ರಕಟವಾಗಿರುವ ಶ್ರೀಯವರ 'ಕನ್ನಡ ಮಾತು ತಲೆಯೆತ್ತುವ ಬಗೆ' ಲೇಖನವನ್ನು ಗಮನಿಸಬೇಕು. ೧೯೧೧ರಲ್ಲಿ ಶ್ರೀಯವರು ಮಾಡಿದ ಈ ಉಪನ್ಯಾಸದಲ್ಲಿ ಕೆಲಸ ಮಾಡಿರುವುದು ಕನ್ನಡದ ಮನಸ್ಸು, ಸಂಸ್ಕೃತದ ಸಂಪ್ರದಾಯದ ಹಿಡಿತದಿಂದ ಕನ್ನಡವನ್ನು ತಪ್ಪಿಸಲು ಈ ನಿಲುವನ್ನು ತೆಗೆದುಕೊಳ್ಳುವುದು ಅವರಿಗೆ ಚಾರಿತ್ರಿಕವಾಗಿ ಅಗತ್ಯವಾಗಿತ್ತು. ನಮ್ಮ ಈ ಹಿರಿಯರನೇಕರು ಇಂಗ್ಲೀಶು ಸಂಸ್ಕೃತಗಳಲ್ಲಿ ಅಪಾರ ಪ್ರಭುತ್ವ ಹೊಂದಿದ್ದವರು. ಆದರೆ ನಾಡಿನ ವಿಶಾಲ ಜನಸಮುದಾಯಕ್ಕೆ ಯಾವ ಭಾಷೆಯಲ್ಲಿ ಸಾಹಿತ್ಯ ಬರೆಯಬೇಕು, ಶಿಕ್ಷಣ ಆಡಳಿತ ನೀಡಬೇಕು ಎಂಬ ಪ್ರಶ್ನೆ ಬಂದಾಗ, ತಮ್ಮ ಸುತ್ತ ಪರಿಸರದಲ್ಲಿ ಬದುಕಿರುವ ಜೀವಂತ ಭಾಷೆಯ ಪರವಾದ ನಿಲುವನ್ನು ತೆಗೆದುಕೊಂಡರು. ಎ ಆರ್ ಕೃಷ್ಣಶಾಸ್ತ್ರಿ ಅವರ ಹೈದರಾಬಾದು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಭಾಷಣದಲ್ಲಿ ಇಂಥದೇ ನಿಲುವಿತ್ತು. ಸಮ್ಮೇಳನದ ನಂತರ 'ಶಾಸ್ತ್ರಿಯವರು ಸಂಸ್ಕೃತವನ್ನು ನಿಕೃಷ್ಟ ಮಾಡಿದರು' ಎಂಬ ಆರೋಪ ಎದುರಿಸಬೇಕಾಯಿತು. ಶ್ರೀಯವರ ಮೇಲೂ ಈ ಟೀಕೆ ಇತ್ತು. ಇವರೆಲ್ಲ ಮಾಡಿದ 'ತಪ್ಪು' ಎಂದರೆ, ಜನರ ಭಾಷೆ ಸಮುದಾಯದ ಚಟುವಟಿಕೆಗಳ ಮುಂಚೂಣಿಯಲ್ಲಿ ಇರಬೇಕೆಂಬುದು ನಿಷ್ಠುರವಾಗಿ ಹೇಳಿದ್ದು; ಸಮುದಾಯದ ಭಾಷೆಗಳ ಜಡತೆಗೂ ಅವುಗಳ ಆಧುನಿಕ ಮುನ್ನಡೆಯನ್ನು ತಡೆ ಹಿಡಿದಿರುವುದಕ್ಕೂ ಕಾರಣವಾಗಿರುವ ಕ್ಲಾಸಿಕಲ್ ಭಾಷೆಗಳನ್ನು, ಅವುಗಳಿಗಿರುವ ಪೂಜ್ಯಭಾವನೆಯನ್ನು ಲೆಕ್ಕಿಸದೆ, [illegible]. ಜನಭಾಷೆಗೆ ಹೊಸತನ ನೀಡುತ್ತದೆ ಎಂಬ

ಕಾರಣಕ್ಕಾಗಿ ಅವರು 'ಪರಕೀಯ' ಭಾಷೆಯಾದ ಇಂಗ್ಲೀಶನ್ನು ಅಪ್ಪಿಕೊಳ್ಳಲು ಕೂಡ ಹಿಂಜರಿಯದಿದ್ದದು. ಇಂಗ್ಲೀಶಿನಿಂದ ಕನ್ನಡದ ದೇಶೀಭಾಷೆಗಳಿಗೆ ಆದ - ಈಗ ಬೇರೆ ರೂಪಾಂತರಗಳಲ್ಲಿ ಆಗುತ್ತಿರುವ - ಲಾಭ ಮತ್ತು ನಷ್ಟಗಳ ಲೆಕ್ಕವನ್ನು ಬೇರೆಯಾಗಿಯೇ ಮಾಡಬೇಕು, ನಿಜ. ಆದರೆ ಯಾವತ್ತೂ ಜನಭಾಷೆಗಳು ತಮ್ಮ ಅಸ್ತಿತ್ವದ ಹೋರಾಟಗಳನ್ನು ಎದುರಾಳಿಯೊಂದರ ಕ್ರಿಯೆಗೆ ತೋರುವ ಪ್ರತಿಕ್ರಿಯೆಗಳ ಮೂಲಕವೇ ಮಾಡಬೇಕಾದ ವಿಧಿಯನ್ನು ಮತ್ತೆಮತ್ತೆ ಎದುರಿಸುತ್ತಲೇ ಇವೆ. ಈಗಿನ ಸಂದರ್ಭದಲ್ಲೂ ಇದು ನಿಜ.



# ಪರಿವಿಡಿ

ಲೇಖನಗಳು

# ಕನ್ನಡದಿಂದ ಇಂಗ್ಲೀಶಿಗೆ ಅನುವಾದ: ಕೆಲವು ಚಿಂತನೆಗಳು

● ಓ.ಎಲ್. ನಾಗಭೂಷಣಸ್ವಾಮಿ

ಕನ್ನಡ ದಲಿತ ಸಾಹಿತ್ಯವನ್ನು ಇತರ ಭಾರತೀಯ ಭಾಷೆಗಳಿಗೆ ಅನುವಾದ ಮಾಡಬಹುದಾದಷ್ಟು ಸುಲಭವಾಗಿ ಇಂಗ್ಲೀಶ್‌ಗೆ ಮಾಡುವುದಕ್ಕೆ ಸಾಧ್ಯ ಇಲ್ಲ. ಎರಡನೇದು ನಮ್ಮಲ್ಲಿ ಈ ಪ್ರಶ್ನೆಯನ್ನು ಪರಿಶೀಲಿಸಬೇಕಾದ ಅಗತ್ಯ ಇದೆ. ಕನ್ನಡದ ಕೃತಿಗಳನ್ನು ಇಂಗ್ಲೀಶ್‌ಗೆ ಅನುವಾದ ಮಾಡಬೇಕು ಅನ್ನುವ ಅಪೇಕ್ಷೆ ಮತ್ತು ಒತ್ತಾಯ ಯಾತಕ್ಕೋಸ್ಕರ ಬರ್ತದೆ ಅನ್ನೋದು,-'ಮಗ್ಗೆಯ ಮಾಯಿದೇವ' ಅನ್ನುವ ಒಬ್ಬ ಕನ್ನಡದ ಲೇಖಕ ಕನ್ನಡದ Textನ್ನು ಬಳಸಿಕೊಂಡು ಒಂದು ಶಾಸ್ತ್ರಕೃತಿಯನ್ನು ಸಂಸ್ಕೃತದಲ್ಲಿ ಬರೆದ. ಆಶ್ಚರ್ಯವಾಗುತ್ತೆ ಅಲ್ವಾ? ವಚನ ಅನ್ನೋ Textನ್ನು ಸಂಸ್ಕೃತದಲ್ಲಿ ಬರಿಯೋಕೆ ಹೊರಟಿರೋದು. ಬಹುಶಃ ಬ್ರಿಟಿಶರು ಬರೋದಕ್ಕಿಂತ ಮುಂಚೆ ಸಂಸ್ಕೃತಕ್ಕೆ ನಮ್ಮಲ್ಲಿ ಯಾವ ಅಧಿಕಾರದ ಭಾಷೆಯ ಸ್ಥಾನ ಇತ್ತೋ ಅಂದರೆ ಸಂಸ್ಕೃತದಲ್ಲಿ ವಿಚಾರಗಳನ್ನು ವ್ಯಕ್ತಪಡಿಸದೇ ಇದ್ದರೆ, ಒಂದು ರೀತಿಯ ಅಖಿಲ ಭಾರತೀಯ ಮನ್ನಣೆ ಮತ್ತು ಸ್ವೀಕಾರ ಸಾಧ್ಯ ಇಲ್ಲಾ ಅನ್ನೋ ನಂಬಿಕೆ ಇತ್ತೋ, ಅದೇ ರೀತಿಯ ನಂಬಿಕೆ ಮತ್ತು ಭಾವನೆ ಇಂಗ್ಲೀಷನ್ನು ಕುರಿತು ನಮಗೆ ಇಂದು ಇದೆ ಅನ್ನಿಸ್ತದೆ. ನಾನು ಕೇವಲ ಕನ್ನಡ ಲೇಖಕನಾಗಿದ್ರೆ ಸಾಲ್ದು. ನಾನು ಕನ್ನಡದಲ್ಲಿ ಬರೆದಿದ್ದೇನೆ ಅಂತ, ಕನ್ನಡದ ಓದುಗರ್ಗೆ ನನ್ನ ಬಗ್ಗೆ ಹೆಮ್ಮೆ ಅನ್ನಿಸ್ಬೇಕು. ಇತರ ಭಾರತೀಯ ಭಾಷೆಯ ಲೇಖಕರಿಗೆ ಕನ್ನಡದ ಲೇಖಕ ಒಬ್ಬ ಬರ್ದಿದ್ದಾನೆ ಅಂತ ಗೊತ್ತಾಗಬೇಕು. ಆದರೆ ವಿದೇಶಿ ಭಾಷೆಗಳಲ್ಲೂ ಕೂಡ ಇದು ಬರ್ಬೇಕು ಅನ್ನುವ ಅಪೇಕ್ಷೆ. ನಮಗೆ ಸದ್ಯಕ್ಕೆ ಇಂಗ್ಲೀಶ್ ಒಂದು ಮಾತ್ರ ಹಾಗೆ ಅಧಿಕಾರಸ್ಥ ಭಾಷೆಯಾಗಿರೋದ್ರಿಂದ, ನಮ್ಮ ನಮ್ಮ ಸ್ಥಳೀಯ ಭಾಷೆಗಳ ಮನ್ನಣೆಯನ್ನು, ಮಹತ್ವವನ್ನು ಹೆಚ್ಚಿಸಿಕೊಳ್ಳಬೇಕು ಅನ್ನುವ ಸಾಂಸ್ಕೃತಿಕ ಅಪೇಕ್ಷೆ ಕೂಡ ಹುಟ್ಟಿಸ್ತಾ ಇರಬಹುದು; ನಮ್ಮ ಕೃತಿಗಳನ್ನ ಇಂಗ್ಲೀಶ್‌ಗೆ ಭಾಷಾಂತರ ಮಾಡಿಸ್ಕೋಬೇಕು ಅನ್ನುವ ಒತ್ತಾಯ ಹುಟ್ಟಿಸ್ತಾ ಇರಬಹುದು. ಇದು ಅಗತ್ಯವೇ ಅನ್ನೋದು ಬೇರೆಯ ಕಡೆಗೆ ಎಳ್ಕೊಂಡ್ಹೋಗೋ ಪ್ರಶ್ನೆ. ದಲಿತ ಲೇಖಕರು ಬರೀತ ಇರೋದು ತಮ್ಮ ಜನಾಂಗದ ನೋವು, ನಲಿವು, ಸುಖ, ದುಃಖ, ಕೋಪ, ಉದ್ವೇಗ ಇತ್ಯಾದಿಗಳನ್ನು ವ್ಯಕ್ತಪಡಿಸುವುದಕ್ಕೆ.

ಯಾರಿಗೆ ಅಂದ್ರೆ ಬಹುಶಃ ಅಕ್ಷರ ವಂಚಿತರಾದ ತಮ್ಮ ಜನರಿಗೆ ಅಲ್ಲ! ಅಕ್ಷರ ಓದೋಕೆ ಬರುತ್ತಾ ಇರುವ ಕನ್ನಡಿಗರಿಗೆ. ಅವರ ಉದ್ದೇಶ ಅಖಿಲ ಭಾರತೀಯ ಮನ್ನಣೆ ಪಡೆಯುವುದು ಆಗಿರಲಿಲ್ಲ. ಈಗ ನಾವು ಇನ್ನೊಂದು ತಮಾಶೆಯನ್ನ ಗಮನಿಸಬೇಕಾಗುತ್ತೆ: ಒಂದು ಭಾಷೆಯಲ್ಲಿ ಬಂದ ಎಲ್ಲಾ ಬರವಣಿಗೆಯನ್ನು ಮತ್ತೊಂದು ಭಾಷೆಗೆ ಅನುವಾದ ಮಾಡುವುದಕ್ಕೆ ಸಾಧ್ಯವಿಲ್ಲ. ಒಂದು ಉದಾಹರಣೆಯ ಮುಖಾಂತರ ಇದನ್ನು ಸ್ಪಷ್ಟಪಡಿಸ್ತೇನೆ. ನನಗೆ ಕಾಡು ಅಲೆಯುವ ಹುಚ್ಚು ಇದೆ. ಸಹ್ಯಾದ್ರಿ ಕಾಡುಗಳಲ್ಲಿ ಟ್ರೆಕ್ಕಿಂಗ್ ಹೋಗ್ತಾ ಇದ್ದಾಗ ಮೊದಲು ಮೊದಲಿಗೆ ಕೆಲವು ಬಗೆಯ ಪರಾವಲಂಬಿ ಗಿಡಗಳಿರುತ್ತವೆ. ಒಂದು ಮರಕ್ಕೆ ಹಬ್ಬಿಕೊಂಡು ಬೆಳೆಯೋ ಬಳ್ಳಿ ಇರಬಹುದು, ಅದರ ಮೇಲೆ ಚಿಪ್ಪಿನಾಕಾರವಾಗಿ ಬೆಳೆಯುವಂಥ ಗಿಡಗಳಿರಬಹುದು. ಅವು ಕೆಲವು ನೆಲದ ಮೇಲೆ ಒಣಗಿ ಉದುರಿ ಬಿದ್ದಿರ್ತಾ ಇದ್ವು. ಆ ಕಾಡ್ನಲ್ಲಿ, ಆ ಬಿಸಿಲಿನಲ್ಲಿ, ಆ ಹುಲ್ಲಿನ ಮೇಲೆ ನಡೀತಿದ್ದಂತಹ ಮನಃಸ್ಥಿತಿಯಲ್ಲಿ ಆ ಗಿಡದ ಚೂರು, ಆ ಗಿಡದ ಟೊಂಗೆ, ಪರಾವಲಂಬಿ ಸಸ್ಯ ಬಹಳ ಸುಂದರವಾಗಿ ಕಾಣ್ತಾ ಇತ್ತು. ಮನೆಗೆ ತೊಕೊಂಡೋಗೋಣ ಅಂತ ತಕ್ಕಂಡ್ಬರ್ತಾ ಇದ್ವಿ. ಬಸ್‌ಗೆ ಹತ್ತುತ್ತಿದಂಗೆ ವಿಕಾರವಾಗಿ ಕಾಣೋಕೆ ಶುರುವಾಗೋದು. ಮನೆಗೆ ತಂದ್ಮೇಲೆ "ಥೂ ಇದು ಯಾಕಾದ್ರೂ ಬಂತೋ, ಮನೇಲಿ ಎಲ್ಲೂ ಹೊಂದ್ಕೊಳ್ಳೋದೇ ಇಲ್ವಲ್ಲ" ಅನ್ನಿಸ್ತಿತ್ತು. ಒಂದ್ಹದಿನೈದು ದಿನ ಆದ್ಮೇಲೆ ಬಿಸಾಕಿ ಬಿಟ್ಟಿದ್ವಿ. ಈ ಉದಾಹರಣೆ ಮೂಲಕ ಏನು ಹೇಳೋಕೆ ಹೊರಟೆ ಎಂದ್ರೆ, ಬೆಳಿಗ್ಗೆಯಿಂದ ಶಿವಪ್ರಕಾಶ್, ಲಕ್ಷ್ಮೀಪತಿ, ಸರಸ್ವತಿ ಇವರೆಲ್ಲಾ ಹೇಳ್ತಿದ್ರಲ್ಲಾ- ಒಂದು ಭಾಷೆಗೆ ನೆನಪುಗಳಿರುತ್ತವೆ, ನೋವುಗಳಿರುತ್ತವೆ. ಒಂದೊಂದು ಪದಕ್ಕೂ ಅದರದೇ ಆದ ಭಾವಕೋಶ ಇರುತ್ತೆ ಅಂತ. ಅದನ್ನೆಲ್ಲಾ ಬಳಸ್ಕೊಂಡು ಒಂದು ನೆಲದಲ್ಲೇ ಬಲವಾಗಿ ಬೇರು ಬಿಟ್ಟಂತಹ ಗಿಡಾನ, ಅದರ ಎಲ್ಲಾ ಚೆಲುವಿನೊಂದಿಗೆ, ಮತ್ತೊಂದು ಭಾಷೆಗೆ ತೆಗೆದುಕೊಂಡು ಹೋಗೋದು ಬಹಳ ಕಷ್ಟ: ನಮ್ಮ ಬರವಣಿಗೆ ಅತ್ಯಂತ ಸಂಸ್ಕೃತಿ ನಿಷ್ಠವಾಗಿದ್ದಾಗ, ನೆನಪುಗಳಿಗೆ ಬದ್ಧವಾಗಿದ್ದಾಗ, ನಮ್ಮ ನೆಲಕ್ಕೆ ಅಂಟಿಕೊಂಡಿದ್ದಾಗ. ಅದನ್ನ ಅನಾಮತ್ತಾಗಿ ಬೇರೆ ಭಾಷೆಗೆ ತೆಗೆದ್ಕೊಂಡು ಹೋಗೋದು, ಅದ್ರಲ್ಲೂ ಇಂಗ್ಲೀಶ್‌ನಂತಹ ಪರದೇಶಿ ಭಾಷೆಗೆ ಕಷ್ಟ.

ಎರಡನೇದು ಕೆಲವು ಬಗೆಯ ಕೃತಿಗಳನ್ನು ಅನುವಾದ ಮಾಡೋದು ಸುಲಭ. ದಲಿತ ಪುರಾಣಗಳನ್ನೂ ಇಂಗ್ಲೀಶ್‌ನಲ್ಲೇ ಆಗ್ಲಿ ಯಾವುದೇ ಭಾಷೆಯಲ್ಲಿ ಸುಲಭವಾಗಿ ಹೇಳಬಹುದು. ಯಾಕೆ ಅಂದ್ರೆ ಅವುಗಳಲ್ಲಿ ಕೇವಲ ಆಶಯಗಳಿರುತ್ತವೆ. ಆ ಆಶಯಗಳನ್ನು ಅರ್ಥವಾಗೋ ಭಾಷೆಯಲ್ಲಿ ಹೇಳಬಹುದು. ಆದ್ರೆ ದೇವನೂರು ಮಹಾದೇವರವರ 'ಒಡಲಾಳ' ಅಂಥದ್ದನ್ನ ಅಥವಾ ಸಿದ್ದಯ್ಯನವರ 'ಬಕಾಲ'ದಂಥ ಪದ್ಯವನ್ನ ಇಂಗ್ಲೀಶ್ ಭಾಷೆಯಲ್ಲಿ, ಅದರ ಎಲ್ಲಾ ಭಾವ ಸಾಂಸ್ಕೃತಿಕ ಪರಿವೇಷದೊಂದಿಗೆ ತೆಗೆದುಕೊಂಡು ಹೋಗೋದಿದೆಯಲ್ಲಾ, ಅದು ಬಹುಶಃ ಅಸಾಧ್ಯವಾದ ಕೆಲಸ. ಇನ್ನೊಂದು ಪ್ರಶ್ನೆಯನ್ನು

ನಾನೇ ಕೇಳಿಕೊಂಡಿದ್ದೇನೆ. ನಾನೂ ಅನುವಾದಗಳನ್ನ ಮಾಡಿರುವ ಆಧಾರದಿಂದ ಕೆಲವು ಮಾತನ್ನ ಹೇಳ್ತೇನೆ. ಕೆಲವು ಕನ್ನಡದ ಕತೆಗಳನ್ನ ಇಂಗ್ಲೀಶಿಗೆ, ತಮಿಳಿಗೆ, ಮಲಯಾಳಂಗೆ ಅನುವಾದ ಮಾಡೋ ವರ್ಕ್‌ಶಾಪ್‌ಗಳನ್ನ ನಡೆಸಿದ್ವಿ. ಮುಖ್ಯವಾಗಿ ಕನ್ನಡದಿಂದ ಅನುವಾದ ಗೊಂಡ ಇತ್ತೀಚಿನ ಕೆಲವು ಕತೆಗಳನ್ನು ಓದಿದೆ. ಅನುವಾದ ಪಬ್ಲಿಶ್ ಆದ್ಮೇಲೆ ಅಲ್ಲಿ ಏನು ಅನ್ನಿಸ್ತು ಅಂದ್ರೆ, ಅಲ್ಲಿ ಅಮರೇಶರ ಕತೆ ಇದೆ, ಸಂಧ್ಯಾ ಅವರ ಕತೆ ಇದೆ, ಕಾಳೇಗೌಡ ನಾಗವಾರ ಅವರ ಕತೆ ಇದೆ, ಕರೀಗೌಡರ, ರಾಘವೇಂದ್ರ ಪಾಟೀಲರ ಕತೆಗಳಿವೆ. ನಮ್ಮ ತಲೆಮಾರಿನ ಒಂದೆಂಟ್ಹತ್ತು ಕತೆಗಾರರ ಕತೆಗಳಿವೆ. ಆ ಎಲ್ಲಾ ಕತೆಗಳು ಒಂದೇ ತರಹದ ಕತೆಗಳು ಅನ್ನಿಸಿಬಿಡ್ತಾವೆ, ಇಂಗ್ಲೀಶ್‌ನಲ್ಲಿ ಓದಿದ್ರೆ. ಯಾಕೆ ಅಂದ್ರೆ ನನಗೆ ಗೊತ್ತಿರೋ ಇಂಗ್ಲೀಶ್ ಇದೆಯಲ್ಲಾ, ಅದು ಒಬ್ಬ ಕನ್ನಡಿಗನಿಗೆ ಗೊತ್ತಿರೋ ಇಂಗ್ಲೀಶೇ ಹೊರತು, ನನ್ನೊಳಗೆ ನನ್ನ ಸಂಸ್ಕೃತಿಯ ಭಾಷೆಯಾಗಿ ಹುಟ್ಟಿಕೊಂಡ ಇಂಗ್ಲೀಶ್ ಅಲ್ಲ. ಹಾಗಾದಾಗ ನಾವು ಇಂಗ್ಲೀಶ್‌ನಲ್ಲಿ ಸಂಸ್ಕೃತಿ ಮತ್ತು ನೆನಪಿಗೆ ಅತ್ಯಂತ ನಿಷ್ಠವಾದ ದಲಿತ ಸಾಹಿತ್ಯವನ್ನು ಕನ್ನಡದಿಂದ ಅನುವಾದಗೊಂಡ ನವ್ಯಕತೆ, ಕಾದಂಬರಿಗಳಿಗಿಂತ ಭಿನ್ನವಾಗಿ ಕಾಣೋಲ್ಲ ಅಂತ ನನಗೆ ಅನ್ನಿಸ್ತದೆ. ಅದು ಅತ್ಯಂತ ಅತೃಪ್ತಿ ತರುವ ಕೆಲಸವೂ ಆದೀತು.

ಇನ್ನೊಂದು ಸಂಗತಿಯನ್ನ ಹೇಳಿ ನನ್ನ ಕೆಲವು ಅಬ್‌ಸರ್‌ವೇಷನ್‌ಗಳನ್ನು ಸಮ್ ಅಪ್ ಮಾಡಲು ಪ್ರಯತ್ನ ಮಾಡ್ತೀನಿ. ಪದ್ಮ ಅವರು ಮಾತಾಡ್ತಾ ಕೆಲವು ಮಾತುಗಳನ್ನ ಹೇಳಿದ್ರು. ಬರವಣಿಗೆಯನ್ನ ನಾನು ದಲಿತ ಸಾಹಿತ್ಯ ಅಂತ ವಿಂಗಡಿಸುವುದಕ್ಕಿಂತಲೂ ಅದು ವರ್ತ್‌ವೈಲ್ ಲಿಟರೇಚರ್ ಅಥವಾ ಅಲ್ಲಾ ಅಂತ ನೋಡ್ತೇನೆ ಅದು ಎಕ್ಸೈಟಿಂಗ್ ಎಕ್ಸಪೀರಿಯೆನ್ಸ್ ಅಂತ. ಅವರು ಇನ್ನೊಂದು ಮಾತು ಹೇಳಿದ್ರು. ಅನುವಾದಕ ಮೂಲ ಲೇಖಕನಿಗಿಂತಲೂ ಹೆಚ್ಚು ಪ್ರಮಾಣದ ಕಲಾತ್ಮಕತೆಗಳನ್ನು ಒಳಗೊಂಡ ಲೇಖಕ ಆಗ್ತಾನೆ ಅಂತ. ಅವರ ಅಬ್ಸ್‌ರ್‌ವೇಶನ್‌ಗಳಲ್ಲಿ ಕೆಲವನ್ನು ಒಪ್ತೀನಿ, ಕೆಲವನ್ನ ಒಪ್ಕೋಳೋದಿಕ್ಕೆ ಆಗೋದಿಲ್ಲ. ನನಗೆ ಕೆಲವು ತಿಂಗಳುಗಳ ಹಿಂದೆ ಕೆಲವು ದಲಿತ ಕವಿತೆಗಳನ್ನು ಇಂಗ್ಲೀಶಿಗೆ ಅನುವಾದ ಮಾಡಿಕೊಡಿ ಅಂತ ಒಂದು ಪಬ್ಲಿಕೇಷನ್ ನವರು ಕೇಳಿದ್ರು. ಕವಿತೆಗಳ ಅನುವಾದ ಅದೊಂತರಹ ತೊಡಕಿನ ಕೆಲಸ. ಒಂಥರ ಸುಲಭದ ಕೆಲಸ. ಯಾಕೆಂತ ಹೇಳ್ತೀನಿ. ನನಗೆ ಅನುವಾದಕ್ಕೆ ದೊರೆತ ಎಲ್ಲಾ ದಲಿತ ಕವಿತೆಗಳು ತುಂಬಾ ಸ್ಥೂಲವಾದ ಎಲ್ಲಾ ಮನುಷ್ಯರಿಗೆ ಸಹಜವಾದ ಭಾವನೆಗಳನ್ನ, ಒಂದೇ ರೀತಿಯ ಭಾಷೆಯಲ್ಲಿ ಹೇಳಿಕೊಳ್ಳುವ ಕವಿತೆಗಳಾಗಿರ ಲಿಲ್ಲ. ಅದನ್ನ ಇಂಗ್ಲೀಷಿಗೆ ಅನುವಾದ ಮಾಡೋದು ತುಂಬಾ ಛಾಲೆಂಜಿಂಗ್ ಅಂತ ಅನ್ನಿಸ್ಲಿಲ್ಲ. ಅನುವಾದ ಮಾಡ್ದೆ. ಆದ್ರೆ ಇಂಗ್ಲೀಶಿಗೆ ಅನುವಾದ ಮಾಡಿದ್ಮೇಲೆ ನನಗೆ ಗೊತ್ತಿರೋ ಇಂಗ್ಲೀಶ್ ಸಾಹಿತ್ಯದ ಹಿನ್ನೆಲೆಯಲ್ಲಿ, ಈ ಪದ್ಯಗಳೆಲ್ಲಾ ತುಂಬಾ ಸಾಮಾನ್ಯ ಪದ್ಯಗಳು ಅನ್ನಿಸೋಕೆ ಶುರು ಆಗ್ಬಿಟ್ಟು. ಕತೆಗಳನ್ನು ಅನುವಾದ ಮಾಡೋಕೆ ಕೆಲವು ಸರ್ತಿ ಪ್ರಯತ್ನ ಪಟ್ಟೆ: ಆದ್ರೆ ಅತ್ಯಂತ ನಿರಾಶನಾಗಿ, ಅಸಹಾಯಕನಾಗಿ ಈ ಕತೆಗಳನ್ನು ನನಗೆ ಗೊತ್ತಿರೋ ಇಂಗ್ಲೀಶಿಗೆ ಅನುವಾದ ಮಾಡಿದ್ರೆ, ಅದು ನನಗೆ ನಾನು ಮಾಡಿಕೊಳ್ಳುವ

ಅನ್ಯಾಯ ಮತ್ತು ಕತೆಗಾರರಿಗೆ ಮಾಡುವ ಅನ್ಯಾಯ, ಓದುಗರಿಗೆ ಮಾಡುವ ಅನ್ಯಾಯ ಅಂತ ಅನಿಸ್ತು; ನನ್ನ ಇಂಗ್ಲೀಶ್‌ಗೂ ಮಾಡುವ ಅನ್ಯಾಯ ಅಂತ ಅನ್ನಿಸ್ತು; ಯಾಕೆ ಅಂತ ಹೇಳ್ತೀನಿ. ಈ ಅನುವಾದ ಅನ್ನೋದು, ಅನುವಾದ ಅಂತ ಅನ್ನಿಸೋದು, ಅನುವಾದಕನಿಗೆ ಮತ್ತು ಅನುವಾದವನ್ನು ಕುರಿತು ಚರ್ಚೆಮಾಡುವ ಬುದ್ಧಿಜೀವಿಗಳಿಗೆ ಮಾತ್ರ. ಒಂದೇ ಒಂದು ಭಾಷೆಯನ್ನು ಬಲ್ಲ ಓದುಗನಿಗೆ ಅದು ಮೂಲಕೃತಿಯಾಗಿಯೇ ಕಾಣಿಸಿಕೊಳ್ಳುತ್ತೆ. ನಾನು ಟಾಲ್‌ಸ್ಟಾಯ್‌ನ ಇಂಗ್ಲೀಶ್‌ನಲ್ಲಿ ಓದ್ತಾ ಇದ್ದಾಗ, ಅದು ಯಾರೋ ಮಾಡಿದ ಅನುವಾದ ಅಲ್ಲ; ಟಾಲ್‌ಸ್ಟಾಯ್‌ಯೇ ಬರೆದಿರೋ ಅನುವಾದ ಅನ್ನಿಸ್ತು. ನನಗೆ ಅದೇ ಮೂಲ. ಒಂದೇ ಭಾಷೆಯನ್ನು ಗೊತ್ತಿರುವ ಓದುಗನಿಗೆ, ಆ ಭಾಷೆಯಲ್ಲಿ ಬಂದ ಅನುವಾದವೇ ಮೂಲಕೃತಿಯಾಗಿರುತ್ತೆ. ಹಾಗಿರುವಾಗ ದೇವನೂರ ಮಹದೇವರಂತಹ ಒಬ್ಬ ಕತೆಗಾರನ ಕತೆಯನ್ನ, ಸಿದ್ದಲಿಂಗಯ್ಯನವರಂತಹ ಕವಿಯ ಕಾವ್ಯವನ್ನ, ಒಂದು ಜನರಲ್ ಇಂಡಿಯನ್ ಇಂಗ್ಲೀಶ್ ಅಂತ ಕರೆಯುವಂತಹ ಇಂಗ್ಲೀಶಿಗೆ, ಅದರ ಸಾರಾಂಶ ರೂಪದಂತಹ ಅನುವಾದದಲ್ಲಿ ಕೊಟ್ಟರೆ, ಅದು ನನ್ನ ಭಾಷೆಯ ಮಿತಿ, ನನ್ನ ಜ್ಞಾನದ ಮಿತಿ, ನನ್ನ ಸೃಜನಶೀಲತೆಯ ಮಿತಿ. ಹಾಗೇನೇ "ಇದೇನು? ಇಂತಹ ಸಾಮಾನ್ಯ ಬರವಣಿಗೆ" ಅಂತ ಕನ್ನಡ ಬಾರದ ಇಂಗ್ಲೀಶ್ ಮಾತ್ರ ಬಲ್ಲ ಓದುಗರಿಗೆ ಅನ್ಯಾಯ ಮಾಡ್ದ ಹಾಗೆ ಅನ್ನುತ್ತೆ ಅನ್ನೋ ಹೆದರಿಕೆ. ಅದರ ಜೊತೆಗೆ ಇದು ಅನಿವಾರ್ಯ ಕೂಡಾ ಹೌದು. ಯಾಕೆ ಅಂದ್ರೆ, ಎಷ್ಟೇ ಅತೃಪ್ತಿಕರವಾದರೂ ಇಂಗ್ಲೀಶಿಗೆ ಮಾಡೋದು ಯಾಕೆ ಆಗುತ್ತೆ ಅಂತ ಅಂದ್ರೆ, ನಮಗೆ ಎಲ್ಲಾ ಭಾರತೀಯ ಭಾಷೆಗಳ ಪರಿಚಯ ಇಲ್ಲ. ಇದು ಸರಿಯೋ ತಪ್ಪೋ, ಇಂಗ್ಲೀಶ್ ಒಂದೇ ಇತರ ರಾಜ್ಯಗಳ ನಡುವೆ ಸಂಬಂಧ ಕಲ್ಪಿಸೋಕೆ ಇರುವ ಸೇತುವೆ ಭಾಷೆಯಾದ್ದರಿಂದ, ಇಂಗ್ಲೀಶಿನಲ್ಲಿ ಬರ್ದೇ ಇದ್ರೆ ನನ್ಗೆ ಬೇರೆ ಪ್ರಾಂತ್ಯಗಳ ಸಾಹಿತ್ಯದ ಬರವಣಿಗೆ ಪರಿಚಯ ಆಗೋಲ್ಲ. ಆದ್ರಿಂದ ಇಂಗ್ಲೀಷಿಗೆ ಅನುವಾದ ಮಾಡೋದು ಅಗತ್ಯವೇ ಅನ್ನೋ ಪ್ರಶ್ನೆಯನ್ನ, ನನ್ನ ಕೇಳಿದ್ರೆ, ಕೇವಲ ಕನ್ನಡಿಗನಾಗಿ ನಾನು ಹೇಳಬಹುದು: ನಾನು ಬರ್ದಿರೋದು ಇಂಗ್ಲೀಶ್‌ನಲ್ಲಿ ಓದ್ಲಿ ಅಂತಲ್ಲ; ಕನ್ನಡಿಗರಿಗೋಸ್ಕರ ಅನುವಾದ ಮಾಡ್ತೀನಿ ಅಂತ. ನಮಗೆ ಬೇರೆ ಭಾಷೇದು ಗೊತ್ತಾಗ್ಬೇಕು ಅಂದ್ರೆ, ಅನುವಾದ ಅನಿವಾರ್ಯ. ಸೋ ಈ ಅಸಾಧ್ಯ ಮತ್ತು ಅನಿವಾರ್ಯತೆಯ ಇಕ್ಕಟ್ಟಿನಲ್ಲೇ ನಾವು ಅನುವಾದಗಳನ್ನು ಮಾಡ್ತಾ ಇದ್ದೀವೆ ಅಂತ ಅನ್ನುತ್ತೆ.

ಕೊನೆಯದಾಗಿ ಅನುವಾದವನ್ನು ನಾನು ಯಾಕೆ ಮಾಡ್ತೀನಿ ಅನ್ನೋದ್ರ ಬಗ್ಗೆ ಎರಡೇ ಎರಡು ಮಾತುಗಳನ್ನ ಹೇಳಿ ನನ್ನ ಮಾತುಗಳನ್ನ ಮುಗಿಸ್ತೀನಿ. ಅನುವಾದ ಮಾಡೋಕೆ ಇರೋದು ಎರಡು ಕಾರಣ. ಒಂದು-ನನಗೆ ಆ ಕೃತಿ ಇಷ್ಟ ಆಗುತ್ತೆ ಅಂತ ಅದನ್ನ ಅನುವಾದ ಮಾಡ್ತೀನಿ. ಎರಡ್ನೇದು-ಅನುವಾದಕ್ಕೆ ಒಂದು ಸಾಂಸ್ಕೃತಿಕ ಅಗತ್ಯ ಇರುತ್ತೆ ಅಂತ ಅನುವಾದ ಮಾಡ್ತೀನಿ. ಈ ಎರಡು ಬಿಟ್ರೆ, ಮೂರನೆಯ ಕಾರಣ ಇರೋಕೆ ಸಾಧ್ಯ ಇಲ್ಲ. ನನಗೆ ವೈಯಕ್ತಿಕವಾಗಿ ಖುಷಿಕೊಡೋದೇ ಅನುವಾದದ ಕೆಲಸ ಅಂದ್ರೆ, ನನಗೆ ಗೊತ್ತಿರೋ ಬೇರೆ

ಭಾಷೆಗಳಿಂದ ಕನ್ನಡಕ್ಕೆ ಮಾಡುವ ಅನುವಾದ ಕನ್ನಡದಿಂದ ಇಂಗ್ಲೀಶಿಗೆ ಮಾಡೋ ಅನುವಾದ ನನಗೆ ತುಂಬಾ ಸಂತೋಷ ಕೊಡುವ ಕೆಲಸವೇನೊ ಅಲ್ಲ; ಹೆಚ್ಚೆಂದರೆ ಸ್ವಲ್ಪ ಮಟ್ಟಿಗೆ ಹೆಸರನ್ನು ಹಣವನ್ನು ಜಂಬವನ್ನು, ಕೊಡುವಂತಹ ಕೆಲಸ ಅಷ್ಟೆ. ಅನುವಾದ ಯಾಕೆ ಮಾಡ್ತೀನಿ ಅಂದ್ರೆ, ನಾನು ಅನುವಾದ ಮಾಡ್ತ ಇರೋವಾಗ, ಇನ್ನೊಬ್ಬ ಲೇಖಕ ಇದ್ದಾನಲ್ಲಾ ಅವನ ವಿಚಾರವನ್ನು ನಾನು ಹೇಳ್ತಾ ಇದ್ದೀನಿ ಅಂತ ಅಲ್ಲ; ನಾನೇ ಇದನ್ನ ಕನ್ನಡದಲ್ಲಿ ಬರೀತಾ ಇದ್ದೀನಿ ಅಂತ ಅಂದುಕೊಂಡು ಮಾಡ್ತೀನಿ ಅಂದ್ರೆ, ನಾನೇ ಒಬ್ಬ ಸೃಜನಶೀಲ ಲೇಖಕನಾಗಿ ಮಾಡ್ತಾ ಇರ್ತೀನಿ. ಅನುವಾದ ನನ್ನ ಮಟ್ಟಿಗೆ ಯಾಂತ್ರಿಕ ಅಲ್ಲ; ಪದ್ಮಾ ಅವರು ಅನುವಾದ ಸೈನ್ಸ್ ಅಲ್ಲಾ ಆರ್ಟ್ಸ್ ಅಂದ್ರು. ಅದು ಸೈನ್ಸೂ ಅಲ್ಲಾ ಆರ್ಟೂ ಅಲ್ಲ. ಅನುವಾದ ಅನ್ನೋದು ಕೂಡ ಸೃಜನಶೀಲ ಕ್ರಿಯೆ. ನಾನೇ ಒಂದು ಸ್ವಂತ ವಿಮರ್ಶೆ ಲೇಖನ ಬರದ್ರೆ, ಸ್ವಂತ ಪದ್ಯ ಬರದ್ರೆ, ಕತೆ ಬರದ್ರೆ ಎಷ್ಟು ಖುಷಿಯಾಗುತ್ತೊ ಅಷ್ಟೇ ಖುಶೀ ಅನುವಾದ ಮಾಡ್ಬಾಗ ಕೂಡ ನನ್ಗೆ ಆಗುತ್ತೆ. ಅಂತಹ ಅನುವಾದ ಚೆನ್ನಾಗಿ ಇರುತ್ತೆ, ಇಲ್ಲದಿದ್ರೆ ಇಲ್ಲ.

ನಂತರ ಈ ಅನುವಾದದ ಪ್ರಶ್ನೆಗೆ ಇರೋ ಸಾಂಸ್ಕೃತಿಕ-ರಾಜಕೀಯ ಮುಖಗಳನ್ನು ಕೂಡ ಚರ್ಚಿಸಬೇಕಾದದ್ದು ಹೌದು. ಕೆಲವು ಕಾಲಗಳಲ್ಲಿ ಕೆಲವು ಬಗೆಯ ಸಾಹಿತ್ಯಕ್ಕೆ ಒಂದು ಬಗೆಯ ಬೌದ್ಧಿಕ ಮನ್ನಣೆ ಅಖಿಲಭಾರತ ಅಥವಾ ಅಖಿಲ ಜಗತ್ತಿನ ಮಟ್ಟದಲ್ಲಿ ಪ್ರಾಪ್ತವಾಗ್ತದೆ. ಈಗ ಕಲ್ಚರಲ್ ಪೊಲಿಟಿಕ್ಸ್ ಅಂತ ಮಾತಾಡ್ತಾ ಇರುವ ಕಾಲದಲ್ಲಿ, ಬಹುಮುಖೀ ಚಹರೆಗಳು ಅಥವಾ ಮಲ್ಟಿಪಲ್ ಐಡೆಂಟಿಟಿ ಅಂತ ಮಾತಾಡ್ತಾ ಇರುವ ಕಾಲದಲ್ಲಿ, ಇದುವರೆಗೆ ನಿರಾಕರಣೆಗೆ ಗುರುಯಾಗಿರೊ ಜನರ ಭಾಷಿಕ ಅಭಿವ್ಯಕ್ತಿಗಳನ್ನು ಅಧ್ಯಯನ ಮಾಡುವ ಅಗತ್ಯ ಒತ್ತಾಯ ಕಾಣಿಸಿಕೊಂಡಿರೋ ಸಂದರ್ಭದಲ್ಲಿ, ದಲಿತ ಸಾಹಿತ್ಯದ ಅನುವಾದಕ್ಕೆ ಸಾಂಸ್ಕೃತಿಕ- ರಾಜಕೀಯ ಮಹತ್ವ ಬಂದಿದೆ. ಆದ್ದರಿಂದ ನಾವು ಮಾಡುವ ಅನುವಾದ ಕನ್ನಡಿಗರಿಗಾಗಿ ಅಲ್ಲಾ, ಇತರ ಭಾಷಿಕರಿಗೆ ಇಂಗ್ಲೀಶನ್ನು ಮಾತ್ರ ಬಲ್ಲವರಿಗೆ ಮತ್ತು ಈ ಅನುವಾದವನ್ನು ಅವರು ಥಿಯರಿಗೋಸ್ಕರ ಸಾಂಸ್ಕೃತಿಕ ಅಧ್ಯಯನಕ್ಕೋಸ್ಕರ ಅಥವಾ ಕ್ವಚಿತ್ತಾಗಿ ಸಾಹಿತ್ಯಕ ಕಾರಣಕ್ಕೋಸ್ಕರ ಓದುವವರಿಗೆ ಅಂತ ಅಂದುಕೊಂಡೇ ನಾವು ಅನುವಾದವನ್ನು ಮಾಡ್ತಾ ಇದ್ದೇವೆ-ಅನ್ನೋ ಎಚ್ಚರವನ್ನೂ ಕೂಡ ಇಟ್ಕೋಬೇಕಾಗುತ್ತೆ.

ಬರಹ: **ವೆಂಕಟೇಶಮೂರ್ತಿ ಎಚ್.ಟಿ.**

(ದೆಹಲಿಯ ಕಥಾ ಸಂಸ್ಥೆಯವರು, ಬೆಂಗಳೂರಿನಲ್ಲಿ ೯-೧೦-೯೯ ರಂದು, ಕನ್ನಡ ದಲಿತ ಸಾಹಿತ್ಯದ ಅನುವಾದ ಕುರಿತ ವಿಚಾರ ಸಂಕಿರಣದಲ್ಲಿ ಮಾಡಿದ ಭಾಷಣ.)

ಸಮರ ಸಾರಿದರು. ಚಂಪಾರ ಪತ್ರಿಕಾ ಕರೆಗೆ ಓಗೊಟ್ಟು ಧಾರವಾಡಕ್ಕೆ ಓಡಿ, ದೇವಮಾನವನ ಪ್ರತಿಕೃತಿಯನ್ನು ಕತ್ತೆ ಮೇಲೆ ಕೂಡ್ರಿಸಿ ನಡೆದ ಅದ್ಭುತ ಮೆರವಣಿಗೆಯಲ್ಲಿ ಭಾಗವಹಿಸಿದ್ದು; ತದನಂತರ ಕರ್ನಾಟಕದಾದ್ಯಂತ ಅಬ್ರಹಾಂ ಟಿ. ಕೋವೂರ್‌ರವರು ಕೈಗೊಂಡ ಪ್ರವಾಸದಲ್ಲಿ ಭಾಗವಹಿಸಿದ್ದು; ಬಡತನದ ಕಡುಬೇಗೆಯಲ್ಲಿ ಬೆಂದದ್ದು, ಕರ್ನಾಟಕದ ಗಡಿಗೆ ಅಂಟಿಕೊಂಡಂತಿರುವ ಆಂಧ್ರದ ಮಂದವಾಗಿಲಿಯಂಥ ಶಿಲಾಯುಗದ ಗ್ರಾಮದಲ್ಲಿ ಮಾಸ್ತರಿಕೆ ನೌಕರಿ ದೊರೆತದ್ದು; ತದನಂತರ ಅಲ್ಲಿನ ಜಮೀನ್ದಾರಿ ವ್ಯವಸ್ಥೆಯನ್ನು ವಿರೋಧಿಸಲೆಂದೋ ಅಥವಾ ಅದರ ಪ್ರಭಾವದಿಂದಾಗಿಯೋ ಕಸರತ್ತು ಮಾಡಿ ದೇಹ ಬೆಳೆಸಿದ್ದು - ಇವೆಲ್ಲವನ್ನು ನಿಮ್ಮೆದುರು ಹೇಳಿಕೊಳ್ಳಬೇಕೆನ್ನಿಸುತ್ತದೆ. ತುರ್ತುಪರಿಸ್ಥಿತಿಯನ್ನು ವಿಧಿಸದಿದ್ದಲ್ಲಿ, ಅದರ ಕರಾಳ ಅನುಭವ ನಮಗಾಗದಿದ್ದಲ್ಲಿ, ನನ್ನಂಥ ಅನೇಕರು ಕವಿತೆ ಬರೆಯುತ್ತಿರಲಿಲ್ಲ. `ಕುಮಾರರಾಮ ಸಾಂಗತ್ಯ'ದಲ್ಲಿ ವರ್ಣಿತವಾಗಿರುವ ವೇದಾವತಿ ಅಲಿಯಾಸ್ ಹಗರಿ ಪ್ರಾಂತದ ಹಳ್ಳಿಗಳಲ್ಲಿ ನಾನು ಮಾಸ್ತರಿಕೆ ಮಾಡದಿದ್ದಲ್ಲಿ, ನಾನು ಕಥೆಗಾರನಾಗಲೀ ಕಾದಂಬರೀಕಾರನಾಗಲೀ ಆಗುತ್ತಿರಲಿಲ್ಲ. ಅಲ್ಲಿನ ನಿರ್ಗತಿಕರ ಶೋಚನೀಯ ಬದುಕು ಅಭಿವ್ಯಕ್ತಿಸಲು ನಾನು ಕಥೆ ಕಾದಂಬರಿ ಪ್ರಕಾರದ ಮೂಲಕ, ಹೊಸ ಇನ್ನಿಂಗ್ಸ್ ಆರಂಭಿಸಬೇಕಾಯಿತು. ನಾನು ಈ ಇನ್ನಿಂಗ್ಸ್ ಆರಂಭಿಸಿದ ಸಂದರ್ಭದಲ್ಲಿ, ಆ ಮುಗ್ಧ ಜನರಿಗೆ ಇಂಡಿಯಾದ ಬಗ್ಗೆ, ರಾಜಕೀಯ ಪರಿಸ್ಥಿತಿ ಬಗ್ಗೆ, ಪರಿಕಲ್ಪನೆಯೇ ಇರಲಿಲ್ಲ. ಆ ಭಾಗದ ದಲಿತರಿಗೆ ಅಡುಗೆ ಮಾಡುವುದಾಗಲೀ ಮೈಮುಚ್ಚುವಂತೆ ಬಟ್ಟೆ ತೊಡುವುದರ ಬಗೆಗಾಗಲೀ ಅರಿವೇ ಇರಲಿಲ್ಲ. ಚಂದ್ರನೆಂಬ ದಲಿತನೋರ್ವ ನಾನು ಕೊಟ್ಟ ಅಂಗಿಯನ್ನು ತೊಟ್ಟುಕೊಂಡು, ಜಮೀನ್ದಾರರೆದುರು ಮೇಲ್ವರ್ಗದವರೆದುರು ಅಡ್ಡಾಡುವುದಾಗಲಿಲ್ಲ. ಅವನು ಆ ಅಂಗಿಯನ್ನು ಮಲಗುವಾಗ ತೊಡುತ್ತಿದ್ದ. ಎದ್ದೊಡನೆ ಬಿಚ್ಚಿಡುತ್ತಿದ್ದ. ಬ್ರೆಡ್ ತಿಂದರೆ ಅರಗಿಸಿಕೊಳ್ಳಲರಿಯದ, ಹಣವನ್ನು ಎಣಿಸಲು ಬಾರದ, ಶೂದ್ರ ದಲಿತರಿಂದಲೇ ತುಂಬಿರುವ ಅಂಥ ಹಳ್ಳಿಗಳೊಡನೆ, ನಾನು ತ್ರಿಕರಣಪೂರ್ವಕವಾಗಿ ಒಡನಾಡದಿದ್ದಲ್ಲಿ ಪ್ರಾಯಶ: ಕಥೆಗಾರನಾಗುತ್ತಿರಲಿಲ್ಲ. ಒಂದು ಕೋಳಿ, ಒಂದು ಕ್ವಾರ್ಟರ್ ರಂ, ಒಂದು ಸಾವಿರ ರೂಪಾಯಿ ಕೊಟ್ಟರೆ ಕೊಲೆಮಾಡಲು ಹಿಂಜರಿಯದ ಮಂದಿಯ ಜೊತೆ ಒಡನಾಡದಿದ್ದಲ್ಲಿ, ನಾನು ಕಥೆಗಾರನಾಗುತ್ತಿರಲಿಲ್ಲ. ಸರಕಾರಿ ಶಾಲೆ, ರಸ್ತೆ, ನೀರಿನಂಥ ಪ್ರಾಥಮಿಕ ಸೌಲಭ್ಯಗಳಿಲ್ಲದ ಅಂಥ ಊರುಗಳಲ್ಲಿ, ಕುರಿತೋದದೆ ಇದ್ದರೂ ಬೆಳ್ಳಂಬೆಳಗು ಹಾಡು ಹೇಳುವ ಕವಿಗಳಿಗಾಗಲೀ, ಪುಂಖಾನುಪುಂಖವಾಗಿ ಕಥೆ ಹೇಳುವ ಕಥೆಗಾರರಿಗಾಗಲೀ ಬರವಿಲ್ಲ. ಅಂಥ ಊರುಗಳೇ ನನಗೆ ವಿಶ್ವವಿದ್ಯಾಲಯಗಳಾದವು; ಕೊಕ್ಕಬುಕ್ಕ, ನಾರಾಣಿ, ಡೋಮರಂಥ ಅನಾಗರಿಕರೇ ನನಗೆ ಪ್ರಾಧ್ಯಾಪಕರಾದರು. ಮಂದವಾಗಿಲಿ, ಗೂಳ್ಯಂ, ಹೆಬ್ಬಂಟೆ, ತಾಳೂರು, ಹಾಳೂರು, ಉತ್ತನೂರುಗಳೇ ನನಗೆ ಸಿಮ್ಲಾ, ಡಾರ್ಜಿಲಿಂಗ್‌ಗಳಾದವು; ರಿಜರುಜಾಲಿ, ಲಂಟಾನ, ಕಳ್ಳಿಗಿಡ ಮರಗಳೇ ನನಗೆ ಶ್ರೀಗಂಧ, ಹೊನ್ನೆಗಳಾದವು. ಅಲ್ಲಿನ ಪಾಳು ಸುರಿಯುವ ಬಿಸಿಲ ಪ್ರದೇಶವೇ ನನಗೆ ಊಟಿಗಳಾದವು. ಐದಾರು ಕೊಲೆ ಮಾಡಿ ಬಂದ

ಸ್ವೀಕರಿಸಿ ಅವಧೂತ ಪದವಿ ಅಲಂಕರಿಸಿದ ಗುರುವನಂಥವರೇ, ನನಗೆ ರಮಣಮಹರ್ಷಿಗಳಾದರು.

ಇಂಥವರ ಒಡನಾಟವನ್ನು ಕಾಲು ಶತಮಾನ ಅನುಭವಿಸಿರುವ ನಾನು, ಕಾಲ್ಪನಿಕ ಕಥೆಗಾರನಲ್ಲ. ಒಂದೊಂದು ಕಥೆ ಬರೆದಾಗಲೂ ಒಂದೊಂದು ನಮೂನೆಯ ಸಂಕಟ ತಾಪತ್ರಯ ಅನುಭವಿಸಿರುವ ನನ್ನ ಮೇಲೆ, ಆಂಧ್ರದ ತೆಲಂಗಾಣದ ಶ್ರೀಕಾಕುಳಂ ಜಿಲ್ಲೆಯ ರೈತರ ಹೋರಾಟ, ಅದಕ್ಕೆ ಸಂಬಂಧಿಸಿದ ಸಾಹಿತ್ಯ ಬೀರಿರುವ ಪ್ರಭಾವ ದೊಡ್ಡದು. ಹಾಗೆ ಕನ್ನಡದ ಹಳಗನ್ನಡ ಹೊಸಗನ್ನಡದ ಅನೇಕ ಕೃತಿಗಳು ಬೀರಿರುವ ಪ್ರಭಾವ ದೊಡ್ಡದು. ಹಾಗೆಯೆ ದಾಸ್ತೋವಸ್ಕಿ, ಚೆಕಾಫ್, ಮಾರ್ಕ್ವೇಜ್ ರಂಥವರ ಕೃತಿಗಳು ಬೀರಿರುವ ಪ್ರಭಾವ ದೊಡ್ಡದು.

ಇಂಥ ಜಾಯಮಾನದ ನನ್ನನ್ನು ಬಳ್ಳಾರಿ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನದಲ್ಲಿ ಕುಳ್ಳಿರಿಸಿ ಗೌರವಿಸಿರುವ ನಿಮ್ಮ ಪ್ರೀತಿ ಅಭಿಮಾನ ಬಹುದೊಡ್ಡದು. ಕುಂತಳನಾಡಿನ, ಬಂಧವಾಡಿಯ ಪ್ರದೇಶದ ಅನುಭವಗಳನ್ನೊಳಗೊಂಡ ನನ್ನ ಕೃತಿಗಳಿಗೆ ಸಂದ ಗೌರವವೆಂದೇ ಭಾವಿಸಿ, ಅವುಗಳ ನೆಪಮಾತ್ರದ ಲೇಖಕನಾಗಿರುವ ನಾನು ವಿನಯ ಮತ್ತು ಸಂಕೋಚದ ಮುದ್ದೆಯಾಗಿದ್ದೇನೆ. ಇದು ಕೇವಲ ರಾಜಕೀಯ ನಕ್ಷೆಯಲ್ಲಿ ಬರುವ ಬಳ್ಳಾರಿ ಜಿಲ್ಲೆಯ ಅನುಭವಗಳಿಗೆ ಮಾತ್ರ ಸಂದಿರುವ ಗೌರವವಲ್ಲ. ೧೯೫೬ ರಲ್ಲಿ ಭಾಷಾವಾರು ಪ್ರಾಂತ ರಚನೆಯಾಗುವುದಕ್ಕಿಂತ ಪೂರ್ವದಲ್ಲಿ ಅಂದರೆ, ಕರ್ನೂಲು, ಅನಂತಪುರ ಪ್ರದೇಶವನ್ನೊಳಗೊಂಡಂತೆ ಅಖಂಡ ಬಳ್ಳಾರಿ ಜಿಲ್ಲೆಯ ಕಲೆಕ್ಟರರಾಗಿದ್ದ ಥಾಮಸ್ ಮನ್ರೋ ಕಾಲದ ಅನುಭವಗಳ ಅಭಿವ್ಯಕ್ತಿಗೆ ಸಂದ ಗೌರವ ಇದಾಗಿದೆ ಎಂದು ವಿನಮ್ರತೆಯಿಂದ ಭಾವಿಸುತ್ತಿರುವೆ.

ಎಲ್ಲ ಇದ್ದು ಆರ್ಥಿಕವಾಗಿ ಹಿಂದುಳಿದಿರುವ ನಮ್ಮ ಬಳ್ಳಾರಿ ಜಿಲ್ಲೆಗೆ ಶ್ರೀಮಂತ ಇತಿಹಾಸವಿದೆ. ಕೋಟ್ಯಂತರ ವರ್ಷಗಳ ಹಿಂದೆ ಪ್ರಪ್ರಥಮವಾಗಿ ಅನಾವರಣಗೊಂಡ ಭೂಭಾಗ ಹಂಪಿಯ ಕಿಷ್ಕಿಂಧೆಯ ಪರ್ವತಾಗ್ರ, ಸಂಗನಕಲ್ಲು, ಕಪ್ಪಗಲ್ಲು, ತೆಕ್ಕಲಕೋಟೆ ಮುಂತಾದ ಹಲವೆಡೆ ದೊರಕಿರುವ ಶಿಲಾಯುಗದ ಅವಶೇಷಗಳು, ನಮ್ಮ ಜಿಲ್ಲೆಯ ಪ್ರಾಚೀನತೆಗೆ ಸಾಕ್ಷಿ. ಕಮ್ಮಟದುರ್ಗದ ಕುಮಾರರಾಮನಂಥ ಕಲಿಗಳು, ಕುರುಗೋಡಿನ ರಾಚೋಟಿ ಮಲ್ಲನಂಥ ಮುತ್ಸದ್ದಿಗಳು, ಅಲ್ಲದೆ ಅನಂತಪುರವನ್ನು ಸ್ಥಾಪಿಸಿದ ಬಾಲದ ಹನುಮಪ್ಪನಾಯಕ ಇವರೆಲ್ಲ ನಮ್ಮ ಜಿಲ್ಲೆಯವರು ಎಂದು ಹೇಳಲು ಹೆಮ್ಮೆ ಎನಿಸುತ್ತದೆ. ವಿಜಯನಗರದ ಅರಸರ ಬಗ್ಗೆ ನಾವು ಸಾಕಷ್ಟು ಕೇಳಿದ್ದೇವೆ, ಓದಿದ್ದೇವೆ. ಚಿತ್ರದುರ್ಗದ ಮಾನ ಕಾಪಾಡಿದ ವೀರಮಹಿಳೆ ಒನಕೆ ಓಬವ್ವ ನಮ್ಮ ಜಿಲ್ಲೆಯವಳೆ. ಸಿಂಧವಾಡಿಯ ಪ್ರಮುಖ ಕೇಂದ್ರವಾಗಿದ್ದ ಸಿಂಧವಾಸ, ಬಲಕುಂದಿ ೩೦೦ನಾಡು, ಬಯಲಾಟ ಯಕ್ಷಗಾನಗಳಿಗೆ ತವರಾಗಿದ್ದ ಕುಡುತಿನಿ, ಪ್ರಮುಖ ಪಾಳ್ಯಗಳಾಗಿದ್ದ ಗುಡೇಕೋಟೆ ಮತ್ತು

ಮೊನ್ನೆಮೊನ್ನೆಯವರೆಗೆ ನಮ್ಮ ಜಿಲ್ಲೆಯಲ್ಲಿದ್ದ ಹರಪನಹಳ್ಳಿ ನಮ್ಮವೇ; ಭಾಷಾವಾರು ಪ್ರಾಂತ ವಿಂಗಡಣೆಯವರೆಗೆ ನಮ್ಮ ಜಿಲ್ಲೆಯಲ್ಲಿದ್ದ ಆದವಾನಿ, ಆಲೂರು, ರಾಯದುರ್ಗ ಭಾವನಾತ್ಮಕವಾಗಿ ನಮ್ಮವೆ. ಬಳ್ಳಾರಿ, ಅನಂತಪುರ ಪ್ರಾಂತದ ಕಲೆಕ್ಟರ್ ಆಗಿದ್ದ ಥಾಮಸ್ ಮನ್ರೋ ಎಂಬ ಮಹಾನುಭಾವನನ್ನು ಈ ಸಂದರ್ಭದಲ್ಲಿ ಸ್ಮರಿಸುವುದು ಸೂಕ್ತವೆಂದು ನನ್ನ ಭಾವನೆ. ೧೮೦೦ ರಲ್ಲಿ ಈ ಪ್ರಾಂತಕ್ಕೆ ಕಲೆಕ್ಟರ್ ಆಗಿ ಬಂದ ಆ ಪುಣ್ಯಾತ್ಮ, ಚಿಕ್ಕಪುಟ್ಟ ಪಾಳೆಗಾರರ ಜಮೀನ್ದಾರರ ಸೊಂಟಮುರಿದು, ರೈತರಿಗೆ ಭೂಮಿ ಹಂಚಿದ. ರೈತಾಪಿ ಮಂದಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಿ ಅನೇಕ ಜನೋಪಯೋಗಿ ಕೆಲಸಗಳನ್ನು ಮಾಡಿದ. ಪತ್ತಿಕೊಂಡ ಪ್ರದೇಶದಲ್ಲಿ ಪ್ರವಾಸ ಮಾಡುತ್ತಿದ್ದಾಗ ಕಾಲರಾ ವ್ಯಾಧಿಗೆ ಬಲಿಯಾಗಿ, ೧೮೨೭ನೆ ಇಸ್ವಿ ಜುಲೈ ತಿಂಗಳು ಆರರಂದು ಸತ್ತ. ಆತ ಎಷ್ಟು ಜನಪ್ರಿಯ ವ್ಯಕ್ತಿಯಾಗಿದ್ದ ಎಂಬುದಕ್ಕೆ ಪತ್ತಿಕೊಂಡ, ಗುತ್ತಿ, ಅನಂತಪುರ ಪ್ರಾಂತದಲ್ಲಿ ಮನ್ರಪ್ಪ, ಮನ್ರಮ್ಮ ಎಂಬ ಹೆಸರುಗಳನ್ನು ನಾವು ಕೇಳಬಹುದು. ಆದರೆ ಥಾಮಸ್ ಮನ್ರೋ ಮಹಾಶಯನ ಬಗ್ಗೆ ಈ ಭಾಗದ ಜನರಿಗೆ ಅಷ್ಟಾಗಿ ತಿಳಿಯದು.

ಗುತ್ತರ, ದೇವಗಿರಿಯ ಯಾದವರ ಅಥವಾ ಸೇವುಣರ ರಾಜ್ಯದ ಆಯಕಟ್ಟಿನ ಭಾಗವಾಗಿದ್ದ ಹೂವಿನಹಡಗಲಿ, ಹಿಂದೆ ಪೂವಿನ ಪೊಸವಡಂಗಿಲೆ ಎಂದೇ ಪ್ರಸಿದ್ಧವಾಗಿತ್ತು. ಚಾಳುಕ್ಯ ದೊರೆ ತ್ರಿಭುವನಮಲ್ಲ, 'ನೊಳಂಬವಾಡಿ ೩೨೦೦೦'ವನ್ನು ಆಳುತ್ತಿದ್ದ. ಮಹಾ ಮಂಡಲೇಶ್ವರ ತ್ರಿಭುವನಮಲ್ಲ ಪಾಂಡ್ಯದೇವ, ಕಂಪಿಲೆಯಿಂದ ಆಳುತ್ತಿದ್ದ ವಿನಯಾದಿತ್ಯ, ಅಚ್ಯುತದೇವರಾಯ ಮುಂತಾದ ರಾಜಮಹಾರಾಜರು ಪೂವಿನ ಪೊಸವಡಂಗಿಲೆಯ ಶ್ರೇಯೋಭಿವೃದ್ಧಿಗೆ ಶ್ರಮಿಸಿದಂಥವರೇ; ಶೂರಸೇನಾಪತಿ ರವಿದೇವನ ಪತ್ನಿ ರಬ್ಬಿಲದೇವಿಗೆ ಜನ್ಮಕೊಟ್ಟಂಥ ಐತಿಹಾಸಿಕ ಊರು ಇದು. ಆಕೆ ಹಾಲುಂಡ ತವರಋಣ ತೀರಿಸಲೆಂದೇ ಕಟ್ಟಿಸಿರುವ ಕೇಶವ ದೇವಾಲಯವನ್ನು, ನಾವೀ ಪುಟ್ಟ ಪಟ್ಟಣದಲ್ಲಿ ನೋಡಬಹುದು. ಈ ಪೂವಿನ ಪೊಸವಡಂಗಿಲೆಯ ಅಳಿಯನಾದ ರವಿದೇವ ಸಾಮಾನ್ಯನಲ್ಲ. ಬಿಳಿಯ ಛತ್ರಿ, ಚಾಮರ, ಪಾವುಡಂಬರ, ಕುರುಳಕೊಂತಗಳೆಂಬ ರಾಜಮರ್ಯಾದೆಗಳನ್ನು ಪಡೆದಿದ್ದ ಸಂಧಿವಿಗ್ರಹಿ. ಅಷ್ಟೇ ಅಲ್ಲದೆ ಚಾಲುಕ್ಯ ಸಾಮ್ರಾಜ್ಯದ ಆಧಾರಸ್ತಂಭವಾಗಿದ್ದಂಥ ಪರಾಕ್ರಮಿ. ಈತನ ಮತ್ತು ಹೆಂಡತಿ ರಬ್ಬಿಲದೇವಿಯ ಶೌರ್ಯ ಪರಾಕ್ರಮ ಹಾಗು ಧಾರ್ಮಿಕ ಮನೋಭಾವವನ್ನು ವರ್ಣಿಸುವ ಕಾವ್ಯಾತ್ಮಕ ಶಾಸನವನ್ನು, ಇಂದಿಗೂ ಕೇಶವ ದೇವಸ್ಥಾನದ ಪ್ರವೇಶದ್ವಾರದ ಬಳಿ ನೋಡಬಹುದು. ಮಹಾಸಾಮಂತ ಘಟ್ಟಿಯರಸನು ಮಹಾ ಯತಿಗಳಾದ ಲಕುಲೇಶ್ವರ ಪಂಡಿತರಿಗೆ ಉದಾರವಾಗಿ ದಾನಮಾಡಿದ ವಿವರವುಳ್ಳ ಶಾಸನವನ್ನು, ಇದೇ ನಗರದ ಕಲ್ಲೇಶ್ವರ ದೇವಾಲಯದ ದಕ್ಷಿಣ ದಿಕ್ಕಿನ ಗೋಡೆಯಲ್ಲಿ ನೋಡಬಹುದು. ಈ ಗ್ರಾಮದ ಐತಿಹಾಸಿಕ ಮಹತ್ವವನ್ನು ಸಾರುವ ಅನೇಕ ಶಾಸನಗಳು ಗುತ್ತಲ, ಹೊಳಲು, ಕುರವತ್ತಿ, ಹೊಳಗುಂದಿ, ಸೋಗಿ ಮೊದಲಾದ ಕಡೆ ಇವೆ. ಈ ಪ್ರದೇಶದಲ್ಲಿ ಈವರೆಗೆ ದೊರೆತಿರುವ ಸುಮಾರು ೧೧೨ ಕಾವ್ಯಮಯ ಶಾಸನಗಳು, ಈ

ಭಾಗದ ಸಮೃದ್ಧ ಇತಿಹಾಸವನ್ನೂ ಸಾಂಸ್ಕೃತಿಕ ಮಹತ್ವವನ್ನೂ ಸಾರುತ್ತವೆ. ಹಿರೇ ಹಡಗಲಿಯಲ್ಲಿ ದೊರೆತಿರುವ ಪಲ್ಲವ ಶಿವಸ್ಕಂಧವರ್ಮನ ೩ನೇ ಶತಮಾನದ ಶಾಸನ, ಈ ಭಾಗದ ಪ್ರಾಚೀನತೆಯನ್ನು ಸಾರುತ್ತದೆ. ಇಷ್ಟೊಂದು ಭವ್ಯ ಇತಿಹಾಸ ಹೊಂದಿರುವ ಹೂವಿನಹಡಗಲಿಯ ಪ್ರದೇಶ ನಮ್ಮ ಬಳ್ಳಾರಿ ಜಿಲ್ಲೆಯ ಪ್ರಮುಖ ಭಾಗ.

ಇತಿಹಾಸವನ್ನು ಮನವರಿಕೆ ಮಾಡಿಕೊಡುವುದರ ಮೂಲಕ ನಮ್ಮ ಜಿಲ್ಲೆಯ ಜನತೆಯನ್ನು ಮಾನಸಿಕವಾಗಿ ಶ್ರೀಮಂತಗೊಳಿಸುವುದು, ಈ ಮೂಲಕ ಆತ್ಮಸ್ಥೈರ್ಯ, ಜೀವನೋತ್ಸಾಹ ತುಂಬುವುದು ಸಾಹಿತ್ಯದ ಮುಖ್ಯ ಜವಾಬ್ದಾರಿ ಎಂದು ನಾನು ಭಾವಿಸು ತ್ತೇನೆ. ಇತಿಹಾಸವನ್ನು ಅರ್ಥಮಾಡಿಕೊಳ್ಳದ ವ್ಯಕ್ತಿ ವರ್ತಮಾನವನ್ನು ಪ್ರೀತಿಸಲಾರ. ಚರಿತ್ರೆ ಯಿಂದ ದೂರವಿರುವಾತ ಚರಿತ್ರೆಗೆ ಮರುಸೃಷ್ಟಿಯನ್ನು ನೀಡುವುದು ಸಾಧ್ಯವಿಲ್ಲ. ವರ್ತಮಾನದ ಪದರೊಳಗಿರುವ ಇತಿಹಾಸವನ್ನೂ ಇತಿಹಾಸದ ಗೊಂಗಡಿಯೊಳಗೆ ಹಾಸುಹೊಕ್ಕಾಗಿರುವ ವರ್ತಮಾನದ ಎಳೆಗಳನ್ನೂ ಪತ್ತೆಹಚ್ಚುವುದು, ಅದರ ಬಗ್ಗೆ ಪುನರವ ಲೋಕನ ಮಾಡುವುದು ಮತ್ತು ಅದನ್ನು ಪರಿಷ್ಕರಿಸಿ ಪುನರ್‌ರೂಪಿಸುವುದು ಸೃಜನಶೀಲ ಕ್ರಿಯೆಯ ಮುಖ್ಯ ಕರ್ತವ್ಯವಾಗಿದೆ. ಹಾಗೆಯೇ ಇತಿಹಾಸವನ್ನು ಸಾಹಿತ್ಯದ ಮೂಲಕ, ಸಾಹಿತ್ಯವನ್ನು ಇತಿಹಾಸದ ಮೂಲಕ ಅರ್ಥ ಮಾಡಿಕೊಳ್ಳಬೇಕಿದೆ. ಇತಿಹಾಸವೆಂಬ ಮೌನವನ್ನು, ನಿಗೂಢತೆಯನ್ನು ಸಾಹಿತ್ಯದ ಮೂಲಕ ಭೇದಿಸಬೇಕು ಮತ್ತು ಪುನರ್‌ಸೃಷ್ಟಿಸ ಬೇಕು. ಇತಿಹಾಸದ ದುರ್ಬೀನ ಮೂಲಕ ವರ್ತಮಾನವನ್ನು ನೋಡುವುದು ಮುಖ್ಯ. ಇತಿಹಾಸದ ಮೂಲಕ ಜಾತಿ ವ್ಯವಸ್ಥೆಯ, ವರ್ಗವ್ಯವಸ್ಥೆಯ ವಿವಿಧ ಸ್ತರಗಳ ಸಂವೇದನೆ ಗಳನ್ನು, ಅನುಭವಗಳನ್ನು ಲೇಖಕ ತನ್ನ ತೆಕ್ಕೆಗೆ ತೆಗೆದುಕೊಳ್ಳಬೇಕು. ಕನ್ನಡ ಸಾಹಿತ್ಯ ಚರಿತ್ರೆಯ ಮೊದಲ ಶತಮಾನಗಳ ವಸ್ತು, ಇತಿಹಾಸ ಪುರಾಣಗಳೇ ಆಗಿವೆ ಎಂಬುದನ್ನು ಮರೆಯಬಾರದು. ಅಂದಿನ ಕವಿಗಳು ತಮಗೆ ಆಶ್ರಯವಿತ್ತಿದ್ದ ರಾಜಾಧಿರಾಜರ, ಅವರ ಆರಾಧ್ಯ ದೈವಗಳ ಪುರಾಣಗಳನ್ನು, ಕಾವ್ಯಗಳ ಮೂಲಕ ಪುನರ್‌ಸೃಷ್ಟಿಸುವುದರ ಮೂಲಕವೇ ತಮಗಿದ್ದ ಸಾಮಾಜಿಕ ಎಚ್ಚರವನ್ನು ಸೂಕ್ಷ್ಮವಾಗಿ ಪ್ರಸ್ತಾಪಿಸುವ ಯತ್ನ ಮಾಡಿದರು ಎಂಬುದನ್ನು ಮರೆಯಬಾರದು. ಹಳೆ ಕಾವ್ಯಗಳ ಕವಿಗಳ ಜೊತೆಗೆ, ಶಾಸನಗಳ ಮೂಲಕ ಶಾಸನ ಕವಿಗಳ ಬಗೆಗೂ ಆಲೋಚಿಸಬೇಕು. ಉದಾಹರಣೆಗೆ ಇಲ್ಲೇ ಹತ್ತಿರದಲ್ಲಿರುವ ಕುರವತ್ತಿಯಲ್ಲಿ, ೧೧ನೇ ಶತಮಾನದ ಆಜುಬಾಜಿನಲ್ಲಿದ್ದ ಗುಣಪಾರ್ಯ, ಶ್ರೀಕಂಠಸೂರಿ, ಮೈಲಾರದಲ್ಲಿದ್ದ ನಾಗವಾರ ಮುಂತಾದ ಶಾಸನ ಕವಿಗಳನ್ನು ಅಭ್ಯಾಸ ಮಾಡುವ ಅಗತ್ಯವಿದೆ.

'ಧಾರಿಣಿಯೊಳು ಗುಲಗೋಜನರಿವನೆಂದೆಳೆ ಪೊಗಳ್ಗುಂ' ಎಂದು ಶಾಸನಕವಿ ಶ್ರೀಕಂಠ ಸೂರಿ ಕುರವತ್ತಿಯ ಶಾಸನದಲ್ಲಿ ಪ್ರಸ್ತಾಪಿಸಿದ್ದಾನೆ. ಅಂದರೆ ಕುರವತ್ತಿಯಲ್ಲಿ ಗುಲಗೋಜನೆಂಬ ವಾಸ್ತುಶಿಲ್ಪ ಶಾಸ್ತ್ರಜ್ಞನಿದ್ದ. ಅವನು ಅಲ್ಲಿನ ಅಭಿನವ ಸೋಮೇಶ್ವರ ದೇವಾಲಯವನ್ನು ನಿರ್ಮಿಸಿದ. ಮೈಲಾರದ ಸೋಮೇಶ್ವರ ದೇವಾಲಯದ ಹೆಬ್ಬಾಗಿಲ ಬಳಿ ಇರುವ ಶಾಸನದ ಕವಿ, ಪ್ರತಿಭಾಸಂಪನ್ನನಾದ ನಾಗವರ್ಮ ಅಥವಾ ನಾಗವಾರ.

ಅವನು ಆ ಕಾಲದ ಈ ಪ್ರದೇಶದ ಜನರ ಔದಾರ್ಯವನ್ನು ವರ್ಣಿಸಿದ್ದಾನೆ. ಅಂದರೆ ನಾನೀ ಸಂದರ್ಭದಲ್ಲಿ ಇಂಥವರನ್ನು ಯಾಕೆ ಪ್ರಸ್ತಾಪಿಸುತ್ತಿರುವೆನೆಂದರೆ, ನಮ್ಮ ಪರಂಪರೆ ಬದುಕಿದ ಸಾಮಾಜಿಕ ವ್ಯವಸ್ಥೆಯೊಳಗೆ ಎಂಥೆಂಥ ಪ್ರತಿಭೆಗಳಿದ್ದವು ಎಂಬುದನ್ನು ನೆನಪಿಸುವ ಕಾರಣಕ್ಕಾಗಿ; ಐತಿಹಾಸಿಕ-ಧಾರ್ಮಿಕ-ಪೌರಾಣಿಕ ಮಹಾವ್ಯಕ್ತಿಗಳಿಂದ ನಮ್ಮ ಕವಿಗಳು-ಶಾಸನಕವಿಗಳು ಸ್ಫೂರ್ತಿ ಪಡೆದು, ಯಾವ ರೀತಿ ಅಭಿವ್ಯಕ್ತಿಸಲು ಪ್ರಯತ್ನಿಸಿದರು ಎಂಬ ಕಾರಣಕ್ಕಾಗಿ; ಆಗಿನ ಸಾಮಾಜಿಕ ವ್ಯವಸ್ಥೆ ಹೇಗಿತ್ತು ಎಂಬುದನ್ನು ಅರ್ಥಮಾಡಿಕೊಳ್ಳುವುದಕ್ಕಾಗಿ; ಈ ನೆಲದ ಮೇಲೆ ಇಂಥಿಂಥವರು ಇದ್ದರು ಎಂದು ಸ್ಮರಿಸುವುದು, ಈ ಮೂಲಕ ಲೇಖಕ ತನ್ನ ನೆಲದ ಬಗ್ಗೆ ಅಭಿಮಾನ ತಾಳುವುದು ಮುಖ್ಯ. ನಮ್ಮ ಪರಂಪರೆಯನ್ನೂ ಇತಿಹಾಸವನ್ನೂ ಆಧುನಿಕವಾಗಿ ಹೇಗೆ ನೋಡಬಹುದು, ಹೇಗೆ ಅದನ್ನು ಪುನರ್ ವಿಮರ್ಶಿಸಬಹುದು, ಪುನರ್ ರೂಪಿಸಬಹುದು -ಎಂಬುದರ ಕಡೆ ಇಂದಿನ ಲೇಖಕ ಆಲೋಚಿಸುವುದು ಮುಖ್ಯ. ಜೊತೆಗೆ ನಮ್ಮ ಜಾನಪದ ಸಾಹಿತ್ಯವನ್ನೂ ಸಹ, ಮೌಖಿಕ ಪರಂಪರೆಯನ್ನೂ ಸಹ; ಹಳೆ ಬೇರಿನ ಸಹಾಯವಿರದಿದ್ದಲ್ಲಿ ಹೊಸಚಿಗುರಿಗೆ ಅರ್ಥವೇ ಇರುವುದಿಲ್ಲ. ಅಂತ:ಕರಣ ಸ್ಥಾಯಿಯಾದ ನಮ್ಮ ಹಳಗನ್ನಡ ಸಾಹಿತ್ಯ ಅರ್ಥಮಾಡಿಕೊಳ್ಳದ ಹೊರತು, ಅರಗಿಸಿಕೊಳ್ಳದ ಹೊರತು, ಹೊಸ ಸೃಷ್ಟಿ ಕಡೆ ಕೈ ಚಾಚುವುದು ಎಷ್ಟರಮಟ್ಟಿಗೆ ಸರಿ ?

ಚಂಪೂಪ್ರಕಾರವನ್ನು ಸಾರಾಸಗಟಾಗಿ ತಿರಸ್ಕರಿಸಿ, ಅದರ ಸಂಸ್ಕೃತಭೂಯಿಷ್ಠ ವಾತಾವರಣದಿಂದ ಹೊರಬಂದು, ರಗಳೆ- ಷಟ್ಪದಿ ಪ್ರಕಾರಗಳ ಮೂಲಕ ಹೊಸವಾತಾವರಣವನ್ನು ಆವಿಷ್ಕರಿಸಿದ ಹರಿಹರ, ರಾಘವಾಂಕ, ಕುಮಾರವ್ಯಾಸರಂಥ ಮಹಾನ್ ಕವಿಗಳಿಗೆ ಜನ್ಮ ನೀಡಿದ ಈ ನೆಲದಲ್ಲಿಯೇ, ನಾವು ನೀವೆಲ್ಲ ಜನ್ಮ ಪಡೆದಿದ್ದೇವೆ ಎಂಬುದು ಹೆಮ್ಮೆಯ ಸಂಗತಿ. ಮನುಜರ ಮೇಲೆ, ಸಾವವರ ಮೇಲೆ, ಕನಿಷ್ಠರ ಮೇಲೆ ಕಾವ್ಯಗಳನ್ನು ಸೃಷ್ಟಿಸಿದವರು, ನಮ್ಮ ನಿಮ್ಮ ಪೂರ್ವಿಕರ ನಡುವೆ ಇದ್ದರು. ಒಬ್ಬ ಬೆಸ್ತ, ಒಬ್ಬ ಒಕ್ಕಲಿಗ, ಒಬ್ಬ ಕುಂಬಾರ, ಒಬ್ಬ ಅಗಸರಂಥವರನ್ನು ತಮ್ಮ ಕಾವ್ಯಗಳಿಗೆ ಕಥಾನಾಯಕರನ್ನಾಗಿ ಮಾಡಿಕೊಂಡಿದ್ದಂಥವರು; ಆ ಮೂಲಕ ಇಡೀ ಶ್ರಮಿಕವರ್ಗದ ಬಗ್ಗೆ ಸಶಕ್ತವಾಗಿ ಮಾತಾಡಿದಂಥವರು; ಅಡ್ಡಾಡಿದ ಈ ಕೆಂಪು ನೆಲದ ಮೇಲೆ ೧೦ ಜಿಲ್ಲಾ ಸಮ್ಮೇಳನಗಳೂ ೨ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಗಳೂ ನಡೆದಿರುವುದು, ಯಾವುದೇ ಲೇಖಕನನ್ನು ರೋಮಾಂಚನಗೊಳಿಸುವಂಥ ಸಂಗತಿ. ಸಾಹಿತ್ಯ ಸಮ್ಮೇಳನಗಳಲ್ಲಿ ಹಾಜರಿರುವ ಕನ್ನಡಿಗರು, ಕನ್ನಡ ಸಾಹಿತ್ಯ ಪರಂಪರೆ ಪ್ರವಾಹದ ಒಂದು ಭಾಗವಾಗುವುದು ಬಹುಮುಖ್ಯ. ಸಾಹಿತ್ಯ ಸಮ್ಮೇಳನದ ಪುಸ್ತಕದ ಅಂಗಡಿಗಳಲ್ಲಿ ಕಾಲಿರಿಸುವ ಸಾಹಿತ್ಯಾಭಿಮಾನಿ ಪಾಕಶಾಸ್ತ್ರಕ್ಕೆ ಸಂಬಂಧಿಸಿದ ಅಥವಾ ಕಂಪ್ಯೂಟರ್ ವಿಜ್ಞಾನಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಖರೀದಿಸುವುದಕ್ಕಿಂತ ಮೊದಲು, ರಾಘವಾಂಕನ 'ಹರಿಶ್ಚಂದ್ರ ಕಾವ್ಯ'ವನ್ನು ಖರೀದಿಸಿದನೆಂದರೆ, ಸಮ್ಮೇಳನದ ಸಾಹಿತ್ಯಿಕ ಸಂವಾದ ಸಾರ್ಥಕವಾದಂತೆಯೇ ಲೆಕ್ಕ. ಹಾಗೆಯೇ ಶೇಕ್ಸ್‌ಪಿಯರ್, ಟಾಲ್‌ಸ್ಟಾಯ್, ಮಾರ್ಕ್ವೆಜರವರ ಕೃತಿಗಳು ಪುಸ್ತಕದಂಗಡಿಗಳಲ್ಲಿ

ಮೊದಲ ಸಾಲಲ್ಲಿ ಎದ್ದುಕಾಣುವಂತಿದ್ದರೆ, ಆ ಸಮ್ಮೇಳನದ ಸಂವಾದಗಳು ಸಾರ್ಥಕವಾದಂತೆಯೇ. ಇವೆಲ್ಲ ಸಫಲವಾಗಬೇಕಾದಲ್ಲಿ ಸಮ್ಮೇಳನಗಳು ಲೇಖಕನನ್ನು ಓದುಗನೊಂದಿಗೆ, ಓದುಗನನ್ನು ಲೇಖಕನೊಂದಿಗೆ, ಲೇಖಕ ಓದುಗರಿಬ್ಬರನ್ನೂ ಸಮಾಜದೊಂದಿಗೆ ಬೆಸೆಯುವ ಕೆಲಸವನ್ನು ಮಾಡಬೇಕು ಎಂಬುದು ನನ್ನ ಅಭಿಪ್ರಾಯ. ಹೀಗಾದಾಗ ಯಾವುದೇ ಒಂದು ಸಾಹಿತ್ಯಿಕ ಕೃತಿ ಆಂಟೀನಾ ಆಗುತ್ತದೆ, ರಿಸೀವರ್ ಆಗುತ್ತದೆ. ಫ್ರಾನ್ಸ್, ರಷ್ಯಾ, ಚೀನಾ, ಲ್ಯಾಟಿನ್ ಅಮೇರಿಕ, ಆಫ್ರಿಕಾ ರಾಷ್ಟ್ರಗಳಲ್ಲಿನ ಸಾಹಿತ್ಯವು, ಹೊಸ ಸಮಾಜದ ನಿರ್ಮಾಣಕ್ಕೆ ಸಂಬಂಧಿಸಿದಂತೆ ಯಾವ ಮೌಲಿಕ ಪಾತ್ರ ವಹಿಸಿತೋ, ಅಂಥ ಬದಲಾವಣೆ ನಮ್ಮ ಸಾಮಾಜಿಕ ಪರಿವೇಷದೊಳಗೂ ಆಗುತ್ತದೆ ಎಂಬುದು ನನ್ನ ಭಾವನೆ. ಇಂಥ ಅಪರೂಪದ ಆಲೋಚನೆಗೆ, ಸೃಷ್ಟಿಗೆ ಅಗತ್ಯವಾದ ಸಾಮಾಜಿಕ ಸಾಹಿತ್ಯಿಕ ಸಂಪನ್ಮೂಲಗಳಿಗೆ ಭಾರತೀಯ ಸಂದರ್ಭದಲ್ಲಿ ಕೊರತೆ ಇಲ್ಲ. ಇಲ್ಲಿನ ಇತಿಹಾಸಕ್ಕೆ ಸಂಬಂಧಿಸಿದ ಅವಶೇಷಗಳು, ಅತ್ಯದ್ಭುತ ಸ್ಮಾರಕಗಳು, ಪುರಾಣ ಪುಣ್ಯ ಕಥೆಗಳು, ಬೆಟ್ಟಗುಡ್ಡನದಿಗಳಿತ್ಯಾದಿಗಳು, ಯಾವ ರೀತಿ ಅಂತಾರಾಷ್ಟ್ರೀಯವಾಗಿ ವಿಸ್ಮಯಗೊಳಿಸುತ್ತಿರುವವೋ; ಅದಕ್ಕಿಂತ ಹೆಚ್ಚಾಗಿ ಇಲ್ಲಿನ ಜಾತಿವ್ಯವಸ್ಥೆ ವರ್ಗವ್ಯವಸ್ಥೆಗಳೂ ಸಾಮಾಜಿಕ ವ್ಯತ್ಯಾಸಗಳೂ ಅಂತಾರಾಷ್ಟ್ರೀಯವಾಗಿ ಅಚ್ಚರಿಪಡಿಸುತ್ತವೆ. ನಮ್ಮಲ್ಲಿನ ಅಸಮಾನತೆಯೇ, ಅಂತಾರಾಷ್ಟ್ರೀಯ ಮಟ್ಟದ ಕಾಂಗರೂ ಎಂದು ಹೇಳಿದರೆ ತಪ್ಪಾಗಲಾರದು. ಇದಕ್ಕೆ ಭಾರತಾಂಬೆಯ ತನುಜಾತೆಯಾದ ಕರ್ನಾಟಕವಾಗಲೀ ಭಾರತಾಂಬೆಯ ಅಸಂಖ್ಯಾತ ಮೊಮ್ಮಕ್ಕಳ ಪೈಕಿ ಒಂದಾದ ನಮ್ಮ ಬಳ್ಳಾರಿ ಜಿಲ್ಲೆಯಾಗಲೀ ಹೊರತಾಗಿಲ್ಲ ಎಂಬುದು, ಯಾವುದೇ ಲೇಖಕನಿಗೆ ಸಂತೋಷ ತರುವಂಥ ವಿಷಯ. ಸಂತೋಷ ಎಂಬ ಪದವನ್ನು ನಾನಿಲ್ಲಿ ಯಾಕೆ ಸೇರಿಸುತ್ತಿರುವೆನೆಂದರೆ, ಸೃಜನಶೀಲ ಕ್ರಿಯೆಗೆ ಅಭಿವ್ಯಕ್ತಿ ಆಲೋಚನಾಕ್ರಮಕ್ಕೆ ಪೂರಕವಾದ ಸಾಮಾಜಿಕ ಪರಿಸರ ನಮ್ಮ ಜಿಲ್ಲೆಯಲ್ಲಿದೆ. ಯಾವ ರೀತಿ ರಷ್ಯಾದ ತಳಮಳ ಅನುಭವಿಸದಿದ್ದಲ್ಲಿ ಒಬ್ಬ ಮನುಷ್ಯ ದಾಸ್ತೋವಸ್ಕಿಯಾಗಲೀ ಮ್ಯಾಕ್ಸಿಂ ಗಾರ್ಕಿಯಾಗಲೀ; ಯಾವ ರೀತಿ ಆಫ್ರಿಕಾದ ದಾಸ್ಯ ಅನುಭವಿಸದಿದ್ದಲ್ಲಿ ಒಬ್ಬ ಮನುಷ್ಯ ವೊಲೆಸೊಯಿಂಕನಾಗಲೀ ಚಿನುವಾ ಅಚುಬೆಯಾಗಲೀ; ಯಾವ ರೀತಿ ಅರ್ಜೈಂಟೈನಾ, ಚಿಲಿ, ಕ್ಯೂಬಾ ಮೆಕ್ಸಿಕೋಗಳ ಅಮಾನುಷವಾದ ಜೀತವ್ಯವಸ್ಥೆಯನ್ನು ಅನುಭವಿಸದಿದ್ದಲ್ಲಿ ಒಬ್ಬ ಮನುಷ್ಯ ಗ್ಯಾಬ್ರಿಯಲ್ ಮಾರ್ಕ್ವೆಜ್‌ನಾಗಲೀ ಚೆಗುವೆರಾನಾಗಲೀ ಆಗುತ್ತಿರಲಿಲ್ಲವೋ, ಅದೇ ರೀತಿ, ಈ ಜಿಲ್ಲೆಯ ಹಗರಿಸಾಲಿನ ಕುಗ್ರಾಮಗಳಲ್ಲಿ ಜೀವಿಸದಿದ್ದಲ್ಲಿ, ಒಬ್ಬ ಮನುಷ್ಯನಾದ ನಾನು, ಕುಂ. ವೀರಭದ್ರಪ್ಪನಾಗುತ್ತಿರಲಿಲ್ಲ. ರಷ್ಯಾ, ಚೀನಾ, ಲ್ಯಾಟಿನ್ ಅಮೆರಿಕ ಮತ್ತು ಆಫ್ರಿಕನ್ ರಾಷ್ಟ್ರಗಳಲ್ಲಿರುವಂಥ ಸಾಹಿತ್ಯಿಕ ಸಂಪನ್ಮೂಲಗಳೂ ಸಾಮಾಜಿಕ ವ್ಯವಸ್ಥೆಯೂ ನಮ್ಮ ಜಿಲ್ಲೆಯ ಪೂರ್ವಭಾಗದ ಗ್ರಾಮಗಳಲ್ಲಿವೆ. ಆ ಪ್ರದೇಶದಲ್ಲಿರುವ ಭಾಷೆ, ಆ ಭಾಷೆಯನ್ನಾಡುವ ಮಂದಿ, ಆ ಮಂದಿ ಬದುಕುತ್ತಿರುವ ಜೀವನಶೈಲಿ, ಜೀವನೋತ್ಸಾಹ -ಈ ಎಲ್ಲವೂ ನಿಜವಾದ ಯುನಿವರ್ಸಿಟಿಯ ಫ್ಯಾಕಲ್ಟಿಗಳೇ! ಆ ಎಲ್ಲ ಫ್ಯಾಕಲ್ಟಿಗಳು ನನ್ನಂಥ ಮನುಷ್ಯನನ್ನು ಲೇಖಕನನ್ನಾಗಿ

ಪರಿವರ್ತಿಸುತ್ತವೆ. ನನ್ನಂಥ, ನನಗಿಂಥ ಮಿಗಿಲಾದ ನೂರಾರುಮಂದಿ ಮನುಷ್ಯರನ್ನು ಲೇಖಕರನ್ನಾಗಿ ಮಾಡುವ ಶಕ್ತಿ, ಮಾಂತ್ರಿಕ ಗುಣ, ನಮ್ಮ ಜಿಲ್ಲೆಯ ಮಣ್ಣಿನದು. ಅದಕ್ಕಾಗಿ ಈ ನನ್ನ ಜಿಲ್ಲೆಗೆ ಕೈ ಎತ್ತಿ ಮುಗಿಯುವೆ.

ನಾನು ನನ್ನ ಜಿಲ್ಲೆಯ ಸಾಹಿತ್ಯ ಪ್ರವಾಹದ ಒಂದು ಬಿಂದು ಮಾತ್ರ. ಲಿಖಿತ ಮತ್ತು ಮೌಖಿಕ ಪರಂಪರೆಯು ನೂರಾರುಮಂದಿ ಸೃಜನಶೀಲ ಪ್ರತಿಭೆಗಳಿಗೆ ಜನ್ಮ ನೀಡುತ್ತಿರುವ ಗಂಗೋತ್ರಿ. ನಾಡಿನ ಎಲ್ಲ ಕಡೆಗಿರುವಂತೆಯೆ ನನ್ನ ಜಿಲ್ಲೆಯಲ್ಲೂ ಇದೆ- ಎಂದು ಆತ್ಮವಿಶ್ವಾಸದಿಂದ ಹೇಳಬಯಸುತ್ತೇನೆ. ಹರಿಹರ, ರಾಘವಾಂಕ, ಕುಮಾರವ್ಯಾಸ, ಚಾಮರಸರೇ ಮೊದಲಾದ ಆದಿವಂದ್ಯರಿಂದ ಆರಂಭಗೊಂಡ ಸಾಹಿತ್ಯ ಸ್ರವಂತಿಯ ಶಾಖೋಪಶಾಖೆಗಳು, ನಮ್ಮ ಜಿಲ್ಲೆಯ ಮೂಲೆಗೂ ಹರಡಿವೆ. ನಮ್ಮ ಜಿಲ್ಲೆಯ ಗ್ರಾಮೀಣ ಅಕ್ಷರಸ್ಥ, ಕಾವ್ಯವನ್ನು ಗಂಟಲಲ್ಲಿ ಪ್ರತಿಷ್ಠಾಪಿಸಿಕೊಂಡು ಬೀಗುತ್ತಿದ್ದಾನೆ. ಸಾಹಿತ್ಯದ ಪರಿಭಾಷೆಯಲ್ಲಿ ಮಾತಾಡಲು ಪ್ರಯತ್ನಿಸುತ್ತಿದ್ದಾನೆ. ಗ್ರಾಮೀಣ ನೋವು ನಲಿವುಗಳನ್ನು ಸಾರ್ವತ್ರೀಕರಿಸಲು ಪ್ರಯತ್ನಿಸುತ್ತಿದ್ದಾನೆ. ನನ್ನ ಜಿಲ್ಲೆಯ ಲೇಖಕ, ಎಲ್ಲೂ ಬೌದ್ಧಿಕ ಕಸರತ್ತುಗಳನ್ನು ತೋರಿಸುತ್ತಿಲ್ಲ. ಪೋಜು ಕೊಡುತ್ತಿಲ್ಲ. ಕೆಲವು ಕಡೆ ಯಶಸ್ವಿಯಾಗಿದ್ದಾನೆ; ಕೆಲವು ಕಡೆ ವಿಫಲನಾಗಿದ್ದಾನೆ. ಸೃಜನಶೀಲತೆಗೆ ಸಂಬಂಧಪಟ್ಟಂಥ ಹೊಸ ಹೊಸ ಬಿಕ್ಕಟ್ಟುಗಳನ್ನು ಎದುರಿಸುತ್ತಿದ್ದಾನೆ. ಸಚಿನ್‌ನಂತೆ ಸಿಕ್ಸರ್ ಎತ್ತಲು ಹೋಗಿ, ಔಟಾಗಿ ಪೆವಿಲಿಯನ್ ಕಡೆ ವಾಪಸ್ಸಾಗುತ್ತಿದ್ದಾನೆ. ಶತಶತಮಾನಗಳ ಕಾಲ ಅಕ್ಷರಜ್ಞಾನದ ಸವಲತ್ತುಗಳಿಂದ ವಂಚಿತಗೊಂಡಂಥ ಪರಿಸರದಿಂದ ಬಂದಂಥ ವ್ಯಕ್ತಿ, ಅಕ್ಷರದ ಕಂದೀಲು ಹಿಡಿದು ಬರ್ಬರ ವರ್ತಮಾನ ನೋಡಿ, ಎಲ್ಲರಂತೆ ತಾನೂ ದಿಗ್ಭ್ರಮೆಗೊಂಡ. ಒಂದು ಕಣ್ಣಿಗೆ ಬೆಣ್ಣೆ ಒಂದು ಕಣ್ಣಿಗೆ ಸುಣ್ಣ! (ನಾನು) ಕೆರಳಿದೆ. ರಟ್ಟೆಯಲ್ಲಿಲ್ಲದ ಶಕ್ತಿಯನ್ನು ಆವೇಶದಿಂದ ಪೆನ್ನಿಗೆ ಆವಾಹಿಸಿಕೊಂಡೆ. ನಾಶವಾಗಿರುವ ಸಾಮಾಜಿಕ ಸೌಂದರ್ಯದ ಬಗ್ಗೆ, ಅಸಮಾನತೆ ಕುರಿತು ಸ್ವಾತಂತ್ರ್ಯೋತ್ತರದ ಸಿದ್ಧಮಾಪನಗಳ ಸಹಾಯದಿಂದ ಬರೆಯತೊಡಗಿದೆ. ಫ್ರಾಯ್ಡ್‌ನ ರಿಪ್ಲೇಸ್‌ಮೆಂಟ್ ಸಿದ್ಧಾಂತದಂತೆ, ಬಡತನ ನೋವು ಸಂಕಟಗಳಿಗೆ ಕವಿತೆಯ ಅಭಿವ್ಯಕ್ತಿ ಕೊಡಲು ಪ್ರಯತ್ನಿಸಿದೆ. ಕೈಗೆಟುಕಿದ ಭಾಷೆಯನ್ನು ಶಾಪಗ್ರಸ್ತವಾಗಿ ಉಪಯೋಗಿಸತೊಡಗಿದೆ. ಸುಡುಸುಡುವ ಪೆಂಡೆ ಪೆಂಡೆ ಕವಿತೆಗಳನ್ನು ಕಂಕುಳಲ್ಲಿಟ್ಟುಕೊಂಡು ಕವಿಸಮ್ಮೇಳನಗಳಲ್ಲಿ ವಾಚಿಸತೊಡಗಿದೆ. ನಮ್ಮ ಈ ಕವಿ ವಯೋಸಹಜ ಭಾವನೆಗಳಿಗೆ ದೈಹಿಕವಾಗಿ ಮಾನಸಿಕವಾಗಿ ಸ್ಪಂದಿಸಿದ ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ; ಎರಡು ಮೂರು ದಶಕಗಳ ಹಿಂದೆ ಹುಟ್ಟಿರುವ ನನ್ನ ಪ್ರೀತಿಯ ಈ ಜ್ವಾಲಾಮುಖಿಯಂಥ ಬರಹಗಾರ, ನಾಡಿನ ಹಲವೆಡೆ ಇರುವಂತೆ ನನ್ನ ಈ ಜಿಲ್ಲೆಯಲ್ಲೂ ಇದ್ದಾನೆ. ಸಾಹಿತ್ಯಿಕ ಮತ್ತು ಸಾಮಾಜಿಕ ಚಳವಳಿಗಳು, ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ನಮ್ಮ ಪ್ರೀತಿಯ ಯುವ ಬರಹಗಾರನ ಮೇಲೆ ಗಾಢ ಪರಿಣಾಮ ಬೀರಿವೆ.

ಇಂದಿನ ಸಂದರ್ಭದಲ್ಲಿ ಸಾಹಿತ್ಯದ ಸೃಷ್ಟಿ ಪ್ರತಿಭೆಗೆ ಸಂಬಂಧಪಟ್ಟಿದ್ದು. ಸಾಹಿತ್ಯ ಮುಖ್ಯವಾಗಿ ಸಾಮಾಜಿಕವಾದದ್ದು. 'ಅಪಾರೇ ಕಾವ್ಯಸಂಸಾರೇ ಕವಿರೇವಃ ಪ್ರಜಾಪತಿಃ' ಎಂಬ 'ಧ್ವನ್ಯಾಲೋಕ'ದ ಮಾತಿನಂತೆ, ಸಾಹಿತಿಯೇ ನಿಜವಾದ ಸೃಷ್ಟಿಕರ್ತ. 'ಯಥಾಸ್ಮೈರೋಚತೇ ವಿಶ್ವಂ, ತಥೇದಂ ಪರಿವರ್ತತೆ.' ಅವನು ವಿಶ್ವದ ಪರಿವರ್ತನೆಯನ್ನು ತನ್ನ ಸಾಹಿತ್ಯದಲ್ಲಿ ಪ್ರತಿಬಿಂಬಿಸುತ್ತಾನೆ. ಆದ್ದರಿಂದ ಸಾಹಿತ್ಯ ಸೃಷ್ಟಿಗೆ ಮೂಲಧನವಾದ ಪ್ರತಿಭೆಯನ್ನು ರೂಢಿಸಿಕೊಳ್ಳುವುದು ಮುಖ್ಯ. ಆಧುನಿಕ ಆಲೋಚನೆಗಳ ಮೂಲಕ ಪುರಾಣ ಮತ್ತು ಇತಿಹಾಸಗಳನ್ನು ಶೋಧಿಸುವ ಅಗತ್ಯ ತುಂಬ ಇದೆ. ರೂತ್ವೆನ್ ಹೇಳುವಂತೆ "ಲೇಖಕ ಕೇವಲ 'ಲಿವಿಂಗ್ ಫಾಸಿಲ್ಸ್'' ಆಗಬಾರದು. ಬೌದ್ಧಿಕ ಹೆಳವನಾಗಬಾರದು. ವರ್ತಮಾನ ದಲ್ಲಿದ್ದುಕೊಂಡೇ ಪುರಾಣ, ಇತಿಹಾಸಗಳಲ್ಲಿ ವಿಹರಿಸಬೇಕು. ನಮ್ಮ ಸೃಜನಶೀಲಕ್ರಿಯೆಗೆ ಚಲನಶೀಲತೆಯ ನೋಟವನ್ನು ಅಳವಡಿಸಬೇಕು. ಫ್ರೆಂಚ್ ಆದರ್ಶಗಳಿಗೆ ಒತ್ತುಕೊಟ್ಟ ಜರ್ಮನ್ ಕವಿ ಹೆನ್ರಿಕ್ ಹೈನ್, ತನ್ನನ್ನು ತಾನು ಧೀರಯೋಧನೆಂದು ಕರೆದುಕೊಂಡಿದ್ದು, ಇಂದು ಹೆಚ್ಚು ಪ್ರಸ್ತುತವಾಗಿ ಕಾಣುತ್ತದೆ. ಸಾಹಿತ್ಯವು ಸಾಮಾಜಿಕ ಬದಲಾವಣೆಗೆ ಸಂಬಂಧಿಸಿದಂಥ ಪ್ರಮುಖ ಆಯುಧವಾಗಬೇಕು. 'ಕಾವ್ಯಾನಂದವು ಬ್ರಹ್ಮಾನಂದದ ಸಹೋದರ' ಎಂಬ ಮಾತು ವರ್ತಮಾನ ಸಂದರ್ಭದಲ್ಲಿ ನಮ್ಮಂಥವರಿಗೆ ಅನ್ವಯಿಸುವುದಿಲ್ಲ. ನಾವು ಬರೆಯುವ ಸಾಹಿತ್ಯ, ಶ್ರೀಮಂತರ ಪ್ರತಿಷ್ಠೆಯ ಪ್ರದರ್ಶನದ ಅಥವಾ ಶೋಕೇಸಿನ ಆಲಂಕಾರಿಕ ವಸ್ತುವಾಗಬಾರದು. ಸಾಹಿತ್ಯಾಧ್ಯಯನ, ಕೌಶಲ್ಯ, ಸಾಮಾಜಿಕ ಪ್ರಜ್ಞೆಯ ಜೊತೆಗೆ ಮನೋವಿಜ್ಞಾನ, ತಳಿಶಾಸ್ತ್ರ, ಜೀವವಿಜ್ಞಾನ, ಪರಿಸರ ವಿಜ್ಞಾನ, ಅಪರಾಧಶಾಸ್ತ್ರ- ಇತ್ಯಾದಿ ಜ್ಞಾನಗಳ ಶಾಖೋಪಶಾಖೆಗಳನ್ನು ಅಧ್ಯಯನ ಮಾಡುವ ಅಗತ್ಯ ತುಂಬ ಇದೆ. ಸಾವಿರ ಕಣ್ಣು, ಸಾವಿರ ಕಿವಿ, ಸಾವಿರಸಾವಿರ ಬಾಯಿಗಳ ಮೂಲಕ ಲೇಖಕ ಮಾತಾಡುವ ಅಗತ್ಯ ತುಂಬ ಇದೆ. ಲೇಖಕ ವಿರಾಟ್ ಸ್ವರೂಪ ಪ್ರಕಟಿಸುವುದಕ್ಕೆ ಭಾರತೀಯ ವರ್ತಮಾನ ಸಂದರ್ಭ ಹೇಳಿ ಮಾಡಿಸಿದಂತಿದೆ. ಮೂಲಭೂತ ವಾದಿಗಳು ಹಿಂದೆಂದಿಗಿಂತ ಹೆಚ್ಚು ವಿಜೃಂಭಿಸುತ್ತಿದ್ದಾರೆ. ಅಲ್ಪಸಂಖ್ಯಾತರ ನೆಮ್ಮದಿಗೆ ಅಗ್ನಿಸ್ಪರ್ಶ ಮಾಡಲಾಗುತ್ತಿದೆ. ಪುರಾಣವನ್ನು ಭೂತವನ್ನು ಪುನರ್ ಪ್ರತಿಷ್ಠಾಪಿಸುವುದರಮೂಲಕ ವರ್ತಮಾನವನ್ನು ಕುರೂಪಗೊಳಿಸಲಾಗುತ್ತಿದೆ. ಮಾನವೀಯತೆಯನ್ನು ಗಲ್ಲಿಗೇರಿಸಲು ಎಲ್ಲ ಸಿದ್ಧತೆಯನ್ನು ಮಾಡಲಾಗುತ್ತಿದೆ. ಶ್ರಮ ಮತ್ತು ಬೆವರನ್ನು ವ್ಯವಸ್ಥಿತವಾಗಿ ದರೋಡೆ ಮಾಡುವ ನೀಚ ಕೃತ್ಯಗಳಿಗೆ, ಪಾವಿತ್ರ್ಯದ ಲೇಪನ ಬಳಿಯಲಾಗುತ್ತಿದೆ. ನೂರಾರು ದಾಸ್ತೋವಸ್ಕಿ- ಮಾರ್ಕ್ವೇಜು ಗಳಿಗೆ ಜನ್ಮ ಕೊಡುವ ಶಕ್ತಿ, ಇಂಡಿಯಾದ ಪ್ರಸ್ತುತ ಸಂದರ್ಭಕ್ಕಿದೆ. ಒಬ್ಬ ವ್ಯಂಗ್ಯಚಿತ್ರಕಾರ ನನ್ನು, ಒಬ್ಬ ಪತ್ರಕರ್ತನನ್ನು, ಒಬ್ಬ ಕುಷ್ಟರೋಗಿಗಳ ಸೇವಕನನ್ನು ಕೊಲ್ಲುವಂಥ ವ್ಯವಸ್ಥೆ, ನಮ್ಮ ಈ ಜಂಬೂದ್ವೀಪದಲ್ಲಿ ಇತ್ತೀಚಿನ ವರ್ಷಗಳಲ್ಲಿ ಸೃಷ್ಟಿಯಾಗಿದೆ. ಇಂಡಿಯಾದ ಬೌದ್ಧಿಕತೆಗೆ ಪ್ರತಿಭಟನೆಗೆ ವೈಚಾರಿಕತೆಗೆ ಕವಿದಿರುವ ಮಂಕಿನ ಬಗ್ಗೆ, ಇಲ್ಲಿ ಪ್ರಸ್ತಾಪಿಸುವುದು ಹೆಚ್ಚು ಸೂಕ್ತ ಎಂದು ನಾನು ಭಾವಿಸುತ್ತೇನೆ. ತುರ್ತುಪರಿಸ್ಥಿತಿ ಹಿಂದು ಮುಂದಿನ ದಿನಗಳಲ್ಲಿ,

ಒಂದು ಬೆಳ್ಚಿಯ ಬಗ್ಗೆ, ಒಬ್ಬ ಅನಸೂಯಮ್ಮಳ ಸಾವಿನ ಬಗ್ಗೆ, ತಂಡೋಪತಂಡವಾಗಿ ಬೀದಿಗಿಳಿದು ಧ್ವನಿ ಎತ್ತುತ್ತಿದ್ದ ಲೇಖಕ, ಇಂದು ಅಂಥ ನೂರಾರು ಘಟನೆಗಳೂ ನಡೆಯುತ್ತಿದ್ದರೂ ಯಾಕೆಂತ ಪಂಚೇಂದ್ರಿಯಗಳನ್ನು ಬಂದ್ ಮಾಡಿಕೊಂಡು ನೆಮ್ಮದಿಯಿಂದ ಕೂತಿದ್ದಾನೆ? ಇದು ಈ ಸಂದರ್ಭದ ಯಕ್ಷಪ್ರಶ್ನೆ.

ನಮ್ಮ ಬಳ್ಳಾರಿ ಜಿಲ್ಲೆಯೊಳಗೂ ಒಂದೂರು ಬಿಹಾರಿದೆ. ಒಂದೂರು ಕಾರ್ಗಿಲ್ಲಿದೆ. ಒಂದೂರು ತೆಲಂಗಾಣದ ಶ್ರೀಕಾಕುಳಂ ಇದೆ. ಅಲ್ಲದೆ ಚೂರುಪಾರು ಚಿಲಿ, ಕ್ಯೂಬಾ, ಮೆಕ್ಸಿಕೋ, ನೈಜೀರಿಯಾ, ಜಾಂಬಿಯಾಗಳಿವೆ. ಸರ್ವೋದಯ, ಪ್ರಗತಿಶೀಲ, ನವ್ಯ, ಬಂಡಾಯ, ದಲಿತ ಚಳವಳಿಗಳೂ ನಮ್ಮ ಜಿಲ್ಲೆಯನ್ನೂ ಪ್ರವೇಶಿಸಿ, 'ಹಲೋ' ಎಂದು ಮಾತಾಡಿಸಿ ಹೋಗಿವೆ. ೮-೧೦ ವರ್ಷಗಳ ಹಿಂದೆ ಯಾವ ಕವಿತೆಯನ್ನು ಹಿಡಿದುಕೊಂಡರೂ ಬೆರಳುಗಳಿಗೆ ರಕ್ತ ಹತ್ತಿದ ಅನುಭವವಾಗುತ್ತಿತ್ತು. ಯಾವ ಬರಹಗಾರನ ಹತ್ತಿರ ಮಾತಾಡಿದರೂ ಡೈನಾಮೈಟಿನೊಂದಿಗೆ ಮಾತಾಡಿದ ಅನುಭವವಾಗುತ್ತಿತ್ತು. ಈ ಬಗೆಯ ಎಷ್ಟೊಂದು ತಳಮಳ ತುಂಬಿಕೊಂಡಿದ್ದ ನಮ್ಮ ಜಿಲ್ಲೆ, ದರಿ ಮತ್ತು ಪುಲಿಗಳ ನಡುವೆ ಸೃಜನಶೀಲ ಸಂದಿಗ್ಧತೆಯನ್ನೂ ಬಿಕ್ಕಟ್ಟನ್ನೂ ಎದುರಿಸುತ್ತಿದೆ. ನಮ್ಮ ಜಿಲ್ಲೆಯ ಲೇಖಕ ಸಂಕೋಚದ ಹಾಸಿಗೆ ಮೇಲೆ, ಕೀಳರಿಮೆಯ ಗೊಂಗಡಿಯನ್ನು ಹೊದ್ದು ಕೂತಿರುವುದು ವಿಷಾದದ ಸಂಗತಿಯಾಗಿದೆ. ಆದ್ದರಿಂದ ಸಮ್ಮೇಳನಗಳು ಸಂವಾದಗಳು, ಆವರಿಸಿರುವ ಹೊಗೆಮಂಜನ್ನು ಹೊಡೆದೋಡಿಸುವಂಥ ಇಂಧನಗಳನ್ನು ಅನ್ವೇಷಿಸುವ ಕೆಲಸ ಮಾಡಬೇಕು.

ಇನ್ನೇನು ಕೆಲವು ತಿಂಗಳಲ್ಲಿ ಮೊದಲಘಟ್ಟದ ಬಳಿ ತುಂಗಭದ್ರೆಗೆ ಅಡ್ಡಲಾಗಿ ಕಟ್ಟುತ್ತಿರುವ ಸೇತುವೆಯಿಂದಾಗಿ ಕುಂತಳನಾಡಿನ ಪದ್ಮಾರಾಧನೆಗೂ ಭಾಮಿನಿ ಷಟ್ಪದಿಗೂ ಸಂಪರ್ಕ ಏರ್ಪಡಲಿರುವುದು ಸಂತೋಷದ ಸಂಗತಿಯಾಗಿದೆ. ಇಂಥ ಸಂದರ್ಭದಲ್ಲಿ ನಡೆಯುತ್ತಿರುವ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನದಲ್ಲಿ ಕಿರಿಯನಾದ ನನ್ನನ್ನು ಕೂಡ್ರಿಸಿರುವುದು ನಿಮ್ಮೆಲ್ಲರ ದೊಡ್ಡಗುಣ. ಇದರಿಂದಾಗಿ ನನ್ನಲ್ಲಿ ಉಡಾಳತನ ಕಡಿಮೆಯಾಗಿದೆ. ಸಜ್ಜನಿಕೆ ಮತ್ತು ವಿನಯ ಮೊಳಕೆ ಚಾಚುತ್ತಿದೆ. ಸಾಹಿತ್ಯಿಕ ಮತ್ತು ಸಾಮಾಜಿಕ ಜವಾಬ್ದಾರಿ ಹೆಚ್ಚಿದೆ. ನನ್ನ ಮುಂದಿನ ದಿನಗಳ ಬಗ್ಗೆ ನೀವೆಲ್ಲರು ಸಾಕಷ್ಟು ನಿರೀಕ್ಷೆ ಇಟ್ಟುಕೊಂಡಿರುವಿರಿ. ನಿಮ್ಮ ನಿರೀಕ್ಷೆಯನ್ನು ಈಡೇರಿಸಲು ಸೃಜನಶೀಲವಾಗಿ ಪ್ರಯತ್ನಿಸುವೆ ಎಂದು ವಿನಯಪೂರ್ವಕವಾಗಿ ತಮ್ಮಲ್ಲಿ ಹೇಳಿಕೊಳ್ಳುತ್ತ ನನ್ನ ಮಾತುಗಳನ್ನು ಮುಗಿಸುತ್ತಿರುವೆ.

(ಹಡಗಲಿಯಲ್ಲಿ ನಡೆದ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನದಿಂದ ಮಾಡಿದ ಭಾಷಣ.)

# ಮಾಧವಿ: ಎರಡು ಸ್ತ್ರೀವಾದಿ ನಿರ್ವಚನ

● ಎಂ. ಉಷಾ

ಸ್ತ್ರೀವಾದಿ ಸಾಹಿತ್ಯ ವಿಮರ್ಶೆ ಕೃತಿಯ ಪ್ರಸ್ತಾವನೆಯನ್ನು ಬರೆಯುತ್ತ ತೇಜಸ್ವಿನಿ ನಿರಂಜನ ಹಾಗು ಸೀಮಂತಿನಿ ನಿರಂಜನ ಅವರು "ತಮ್ಮ ವಂಶಾವಳಿಯ ಜಾಡನ್ನು ಗುರುತಿಸುವುದು, ತಮ್ಮ ತಾಯಂದಿರ ಸಾಧನೆಗಳನ್ನು ಹುಡುಕುವುದು[1] ಸ್ತ್ರೀವಾದಿ ಚಿಂತಕ/ವಿಮರ್ಶಕರ ಒಂದು ಪ್ರಧಾನ ಮುನ್ನೋಟವಾಗಿದೆ. ಜಗತ್ತಿನ ಬಹುತೇಕ ಸಂಸ್ಕೃತಿಗಳು ಸ್ತ್ರೀಯರಿಗೆ ಚರಿತ್ರೆ, ವಂಶಾವಳಿ, ಪರಂಪರೆಗಳನ್ನು ಸತತವಾಗಿ ನಿರಾಕರಿಸುವುದರಿಂದ ವಂಶಾವಳಿಯನ್ನು ನಿರ್ಮಿಸುವ, ಚರಿತ್ರೆಯನ್ನು ಕಟ್ಟುವ ಹಾಗು ಪರಂಪರೆಯನ್ನು ಕಲ್ಪಿಸುವ ಒತ್ತಾಯವನ್ನು ಅವರ ಬರಹಗಳಲ್ಲಿ ನಾವು ಕಾಣಬಹುದು. ಆದುದರಿಂದ ಸ್ತ್ರೀವಾದಿ ವಿಮರ್ಶೆಯ ಈ ಸಂಕಲನದ ಸಂಪಾದಕಿಯರಾಗಿ ಡಾ. ಅನುಪಮಾ ನಿರಂಜನ ಅವರ ಕೃತಿಗಳನ್ನು ಅದರಲ್ಲೂ ಅವರ ಲೇಖನ ವ್ಯವಸಾಯದ ಮಹತ್ವದ ತಿರುವನ್ನು ಸೂಚಿಸುವ ಮಾಧವಿ ಕಾದಂಬರಿಯನ್ನು(೧೯೭೬) ನಮ್ಮ ವೈರುಧ್ಯಮಯ, ಘರ್ಷಣಾತ್ಮಕ ಪರಂಪರೆಯ ಅಂಗವೆಂದು ಹೇಳಿಕೊಳ್ಳುವುದು ತುಂಬಾ ಪ್ರಸ್ತುತವೆಂದು ನಮಗನ್ನಿಸಿದೆ"[2] ಎನ್ನುತ್ತಾರೆ ಹಾಗು ಅದಕ್ಕೆ ಬಂದ ಪ್ರಧಾನ ವಿಮರ್ಶೆಯ ಪೂರ್ವಾಗ್ರಹ ಪೀಡಿತ ಪಕ್ಷಪಾತಿ ಗುಣವನ್ನು ಕುರಿತು ಮಾತನಾಡುತ್ತ ಪರ್ಯಾಯ ಮಾದರಿಯೊಂದನ್ನು ರೂಪಿಸಲು ಯತ್ನಿಸಿದ ಸ್ತ್ರೀವಾದಿ ಚಿಂತನೆಯ ಕೃತಿಯೊಂದು ನಿರ್ಲಕ್ಷ್ಯಕ್ಕೆ, ಅವಕೃಪೆಗೆ ಒಳಗಾದುದೇಕೆ? ಎಂದು ಪ್ರಶ್ನಿಸುತ್ತ "ಈ ಕತೆಯನ್ನು ತನ್ನ ಕಾದಂಬರಿಯ ಕಥಾವಸ್ತುವನ್ನಾಗಿ ಮಾಡುವ ಮೂಲಕ ನಮ್ಮ ಸಂಸ್ಕೃತಿಯಲ್ಲಿ ಮೌಲಿಕವೆಂದು ಪರಿಗಣಿತವಾದ ಸಂಗತಿಗಳನ್ನೇ ಪ್ರಶ್ನಿಸಿದ್ದಾರೆ. ಪರ್ಯಾಯ ಮಾದರಿಯೊಂದನ್ನು ಆಧರಿಸಿದ್ದಾರೆ. ಪರ್ಯಾಯ ಸ್ತ್ರೀ ಪ್ರತೀಕವೊಂದನ್ನು ಸೃಷ್ಟಿಸಿದ್ದಾರೆ. ಪ್ರಾಯಶಃ ನಮ್ಮ ಸಂಸ್ಕೃತಿಯ ಸ್ಥಾಪಿತ ಮೌಲ್ಯಗಳಿಗೆ ಅಪಾಯಕಾರಿ ಎನಿಸಿದುದರಿಂದ ಇರಬಹುದು ಮಾಧವಿಯ ಓದುಗರು ಮಾಧವಿಯನ್ನು ಸೀತೆಯ ಪ್ರತಿಸ್ಪರ್ಧಿ ಪ್ರತಿಮೆ ಎಂದು ಭಾವಿಸಿದರು. ಪ್ರತಿ ಪ್ರತಿಮ ಎಂದು ಅಂದುಕೊಂಡರು"[3] ಎನ್ನುತ್ತಾರೆ.

ಹಾಗೆಯೇ ಪಾಯ ಸಂಶೋಧನೆಯ(spade work criticism) ಅಂಗವಾಗಿ ತಿರುಮಲಾಂಬ ಅವರನ್ನು ಕುರಿತಂತೆ ವಿಜಯಾದಪೆ ಯವರು ಸಂಪಾದಿಸಿರುವ ಪಿತ್ರೆಪಿಗೆಯ ಪಪ್ಪಿಗಳು ಕೃತಿಯು ಈ ಪರಂಪರೆಯನ್ನು, ತಾಯಿಬೇರನ್ನು ಹುಡುಕುವ ಕೆಲಸವನ್ನು ಇನ್ನೊಂದು ತಲೆಮಾರಿಗೆ ವಿಸ್ತರಿಸಿದ್ದಾಗಿದ್ದು,' ಅವರಲ್ಲಿನ "ವಿವೇಕೋದಯ" ನಾಟಕವು ಮಾಧವಿಯ ಕಥಾವಸ್ತುವನ್ನೇ ಆಧರಿಸಿದ್ದಾಗಿರುವ ಸಂಗತಿಯು ಈ ಚರ್ಚೆಯನ್ನು ಮತ್ತಷ್ಟು ಸಶಕ್ತವಾಗಿಸಲು ನೆರವಾಗುವಂತಿದೆ. ೧೯೮೭ರ ನಂತರ ಅನುಪಮಾ ತಿರುಮಲಾಂಬ ಅವರನ್ನು ಕುರಿತಂತೆ ಲೇಖನವನ್ನು ಬರೆದಿರುವರಾದರೂ,' ಮಾಧವಿ ಕೃತಿ ರಚಿಸ ಹೊರಟ ಕಾಲಕ್ಕೆ ಬಹುಶ: ವಿವೇಕೋದಯದ ಬಗ್ಗೆ ಅವರಿಗೆ ಮಾಹಿತಿ ಇಲ್ಲದಿರಬಹುದು. ಹಾಗಾಗಿಯೇ ಅವರು ಮರಾಠಿಯ ಇರಾವತಿ ಕರ್ವೆಯವರ ಯುಗಾಂತರವನ್ನಷ್ಟೇ ಮುನ್ನುಡಿಯಲ್ಲಿ ಪ್ರಸ್ತಾಪಿಸಿದ್ದಾರೆ. ಆದರೂ, ಕನ್ನಡದ ಲೇಖಕಿಯರಿಬ್ಬರ ನಡುವಿನ ಈ ವಿಸ್ಮೃತಿಯು ಕೂಡ ಒಂದು ರೀತಿಯಲ್ಲಿ ಸ್ತ್ರೀವಾದಿ ಚಿಂತನೆಯನ್ನು ಸಶಕ್ತವಾಗಿಸಬಲ್ಲ ಅಂಶವಾಗಿಯೇ ಪರಿಣಮಿಸಿದೆ ಎನ್ನಬಹುದು. ಏಕೆಂದರೆ ಸ್ವಾತಂತ್ರ್ಯಪೂರ್ವ ಸಂಪ್ರದಾಯಸ್ಥ ಕುಟುಂಬದ ಹಿನ್ನೆಲೆಯಲ್ಲಿ ಬದುಕಿದ ತಿರುಮಲಾಂಬ ಮತ್ತು ಸ್ವಾತಂತ್ರ್ಯ ನಂತರದ ಕಾಮ್ರೇಡ್ ವಾತಾವರಣದಲ್ಲಿ ತನ್ನ ವೈಚಾರಿಕ ಬದುಕನ್ನು, ಬರಹವನ್ನು ರೂಪಿಸಿಕೊಂಡ ಅನುಪಮಾ ಇಬ್ಬರೂ ಅಪರಿಚಿತತೆಯ ನಡುವೆಯೇ ಒಂದೇ ವಸ್ತುವನ್ನು ಪರಂಪರೆಯಲ್ಲಿ ಗುರುತಿಸಿಕೊಂಡು ಅದನ್ನು ಸ್ತ್ರೀವಾದಿ ನೆಲೆಯಿಂದ ನಿರ್ವಚಿಸಲು ಯತ್ನಿಸಿದ್ದಾರೆಂಬುದು ಕುತೂಹಲಕಾರಿಯಾದುದಾಗಿದೆ.

ಸರಿಸುಮಾರು ೧೯೨೨ ಹಾಗು ೧೯೭೭ರಲ್ಲಿ ಅಂದರೆ ೫೦ ವರ್ಷಗಳ ಅಂತರದಲ್ಲಿ ರಚನೆಗೊಂಡರೂ ಒಂದೇ ವಸ್ತುವನ್ನು ಎರಡು ಕಾಲಘಟ್ಟದ ಸ್ತ್ರೀವಾದಿ ಚಿಂತನೆಯು ಬಳಸಿಕೊಂಡಿರುವುದು ಕನ್ನಡದಲ್ಲಿನ ಸ್ತ್ರೀವಾದಿ ಚಿಂತನೆಯ ಕೇಂದ್ರಾಸಕ್ತಿ ಹಾಗೂ ವೈವಿಧ್ಯಗಳೆರಡನ್ನು ಏಕಕಾಲಕ್ಕೆ ಪರಿಚಯಿಸುತ್ತದೆ. ಹಾಗಾಗಿ ಸ್ತ್ರೀವಾದಿ ವಿಮರ್ಶೆ ತನ್ನನ್ನು ಅಖಂಡವೆಂದುಕೊಂಡು ಪ್ರಧಾನ ಧಾರೆಗೆ ಪ್ರತಿಕ್ರಿಯಿಸುವುದು ಒಂದು ನೆಲೆಯಾದರೆ, ಇನ್ನೊಂದು ನೆಲೆಯಲ್ಲಿ ಅದು ತನ್ನೊಳಗಿನ ವಿಭಿನ್ನ ನೆಲೆಗಳನ್ನೂ ಕೂಡ ವಿಶ್ಲೇಷಣೆಗೆ ಒಳಪಡಿಸಬೇಕಾಗಿದೆ. ಎಷ್ಟೋ ವೇಳೆ ಎರಡು ಸ್ತ್ರೀವಾದಿ ಘಟ್ಟಗಳ ನಡುವಿನ ಆಲೋಚನಾಕ್ರಮ ಪರಸ್ಪರ ವಿರುದ್ಧ ದಿಕ್ಕಿನದೆನಿಸುವಂತಿದ್ದರೂ, ಅವು ಒಂದು ಇನ್ನೊಂದರ ಅಸ್ತಿತ್ವವನ್ನು ನಿರಾಕರಿಸಲಾಗುವುದಿಲ್ಲ, ಮರೆ ಮಾಡಲಾಗುವುದಿಲ್ಲ. ತಿರುಮಲಾಂಬ ಅವರ ಎಷ್ಟೋ ವಿಚಾರಗಳು ಇಂದಿನ ಸ್ತ್ರೀವಾದಿ ಚಿಂತನೆಗೆ ಎಷ್ಟೇ ಮುಜುಗರವನ್ನುಂಟು ಮಾಡಿದರೂ ಅದು ದಾಖಲೆಗೊಳ್ಳಬೇಕಾದ ದಾಖಲಾಗುತ್ತದೆ. ಏಕೆಂದರೆ ಅಂದಿನ ಸಮಾಜದಲ್ಲಿ ಪ್ರಗತಿಪರ ಪುರುಷರು ಮಹಿಳೆಯರ ಬಗ್ಗೆ ಎಸೆಲ್ಲ ಕ್ರಾಂತಿಕಾರಿ ನಿಲುವನ್ನು ತಳೆದರು ಎಂಬುದಕ್ಕಿಂತ ಮುಖ್ಯವಾದುದು ಅಂದಿನ ಸಮಾಜದ ಮಹಿಳೆಯರು ತಮಗಾಗಿ ತಾವೇ ಏನೇನು ತೀರ್ಮಾನಗಳನ್ನು ಕೈಗೊಳ್ಳಲು ಸಿದ್ಧರಾದರು ಎಂಬುದು. ಈ ದಿಕ್ಕಿನ

ಯಲ್ಲಿ ಗಮನಿಸಿದಾಗ 'ತಿರುಮಲಾಂಬ ಅವರ ವಿವೇಕೋದಯ ಕಾದಂಬರಿಯು ಮಾಧವಿಯ ಕತೆಯನ್ನು ಹೇಳಿದರೂ ಪ್ರತಿಭಟನೆಯ ಧ್ವನಿ ಇಲ್ಲ. ಮುಂದೆ ಅನುಪಮಾ ನಿರಂಜನ ಅದನ್ನು ಕೊಟ್ಟರು'[೬] ಎಂಬಂತಹ ತೀರ್ಮಾನಗಳು ತೀರ ಸರಳವಾದದ್ದೆನಿಸಿಬಿಡುತ್ತದೆ.

ತಿರುಮಲಾಂಬ ನಿರ್ವಚಿಸಿಕೊಂಡ ಮಾಧವಿ ವಾಸ್ತವವಾಗಿ ತನ್ನನ್ನು ಸಮಾಜದ ಒಂದು ಅಂಗ ಎಂದು ಭಾವಿಸುತ್ತಲೇ, ತನ್ನ ಸಾಮರ್ಥ್ಯವನ್ನು ಸಾಧಿಸಿ ತೋರಿಸುತ್ತಲೇ, ಇರುವ ವ್ಯವಸ್ಥೆಯೊಳಗೇ ಆ ಕಾರಣಕ್ಕಾಗಿಯೇ ತನ್ನ ಪ್ರಾತಿನಿಧ್ಯವನ್ನು ಕೇಳುವವಳು. ಹಾಗಾಗಿ ಮೇಲುನೋಟಕ್ಕೆ ಈ ಕೃತಿಯ ಪ್ರತಿರೋಧವು ಢಾಳಾಗಿ ಕಾಣಿಸುವುದಿಲ್ಲವಾದರೂ ಇಡೀ ಕೃತಿಯ ಕಥಾಸಂವಿಧಾನವನ್ನು ಗಮನಿಸುವುದಾದರೆ ಅಲ್ಲಿ ತಿರುಮಲಾಂಬ ರೂಪಿಸಿ ಕೊಂಡಿರುವ ಸ್ತ್ರೀವಾದಿ ನೆಲೆ ನಿಚ್ಚಳಗೊಳ್ಳುತ್ತದೆ.

ಅದುವರೆಗಿನ ಕನ್ನಡ ಸಾಹಿತ್ಯ ಕೃತಿಗಳು ಹಠ, ದುರಭಿಮಾನ, ಮದಾಂಧತೆಗಳು ಹೇಗೆ ಅನಿಷ್ಟಕ್ಕೆ ಕಾರಣವಾಗುವ ವಿಚಾರಗಳು ಎಂಬುದನ್ನು ಬಹುತೇಕವಾಗಿ ಪುರುಷ ಪಾತ್ರಗಳ ಮುಖಾಮುಖಿಯಲ್ಲಿಯೇ ನಿರೂಪಿಸುತ್ತಿದ್ದವು. (ಅದರಲ್ಲೂ ಮುಖ್ಯವಾಗಿ ಪಾಂಡವ-ಕೌರವರ ಸಂದರ್ಭದಲ್ಲಿ) ತಿರುಮಲಾಂಬ ಮೊದಲ ಬಾರಿಗೆ ಅದಕ್ಕೆ ಭಿನ್ನವಾದ ದೃಷ್ಟಾಂತವೊಂದನ್ನು ತಂದು ದುರ್ಗುಣ-ಸಗುಣಗಳ ಚರ್ಚೆಯನ್ನು ಪುರುಷನ ಹಠ, ಅಭಿಮಾನ ಹಾಗು ಸ್ತ್ರೀಯ ಸಹನೆ, ತ್ಯಾಗಗಳ ನೆಲೆಯಲ್ಲಿ ನಿರೂಪಿಸಿದರು. ಇದಕ್ಕೆ ನಾಟಕಾರಂಭದಲ್ಲಿನ ಸೂತ್ರದಾರ ಹಾಗು ನಟರ ಮಾತುಗಳೇ ಸಮರ್ಥನೆಯಾಗಿದೆ.

ನಟ: ವಿವೇಕೋದಯವೆಂದರೆ ವಿವೇಕ ವಿಜಯವೆಂಬ ನಾಟಕದಂತೆ ಅದೊಂದು ಮನೋನಿಗ್ರಹ ನಿಧಾನ ಗ್ರಂಥದ ಹೆಸರೇನು?

ಸೂತ್ರ: ವಿವೇಕ ವಿಜಯವು, ಮಾಯಾ ಪ್ರಪಂಚದ ಕಾಮ ಕ್ರೋದಾಧಿಗಳ ದಿಗ್ವಿಜಯ ವೃತ್ತಾಂತವನ್ನು ನಿರೂಪಿಸುವುದು. ಇದು ಹಾಗಿಲ್ಲ, ಹಠ, ದುರಭಿಮಾನ, ಮದಾಂಧತೆಗಳು ಅನಿಷ್ಟಕ್ಕೆ ಹೇಗೆ ಕಾರಣವಾಗುವುದೆಂಬುದನ್ನು ಪ್ರಸಿದ್ಧ ಪುರುಷರ ಚರಿತ್ರೆಗಳ ಉದಾಹರಣೆಯಿಂದ ತಿಳಿಯಪಡಿಸುವುದು.

ನಟ: ಹಾಗಾದರೆ ಈ ವಿವೇಕೋದಯವೆಂಬುದು ಯಾವ ಮಹಾಪುರುಷರ ಚರಿತೆ? ಮತ್ತು ಇದಕ್ಕೆ ಆ ಮಹಾಪುರುಷರ ಹೆಸರನ್ನಿರಿಸಲು ಕಾರಣವೇನು?

ಸೂತ್ರ: ಗಾಲವ, ವಿಶ್ವಾಮಿತ್ರ, ಯಯಾತಿ ಈ ಮೂವರ ವಿಚಾರವನ್ನು ಒಳಗೊಂಡು ಮೇಲೆ ಹೇಳಿದಂತೆ ವಿವೇಕವನ್ನಂಟು ಮಾಡುವುದರಿಂದ ವಿವೇಕೋದಯವೆಂಬ ಹೆಸರನ್ನು ಪಡೆದಿರುವುದು.

ಇಲ್ಲಿ ಸ್ಪಷ್ಟವಾಗಿ ತಿರುಮಲಾಂಬ ಸೂತ್ರದಾರನ ಮೂಲಕ ಮಹಾಪುರುಷರೆಂದು ಕರೆಯಲ್ಪಟ್ಟ ಗಾಲವ, ವಿಶ್ವಾಮಿತ್ರ, ಯಯಾತಿ ಈ ಮೂವರನ್ನೂ ಒಳಗೊಂಡಂತೆ ಅವರಲ್ಲಿ

ರುವ ಹಠ,ಮದಾಂಧತೆಗಳನ್ನು ಅಳಿಸಿ ವಿವೇಕವನ್ನುಂಟುಮಾಡುವುದಾಗಿ ನಿರೂಪಿಸುತ್ತಾರೆ. ಹಾಗು ವಿವೇಕವನ್ನುಂಟುಮಾಡುವ ಸಾಧನವಾಗಿ ಮಾಧವಿಯ ತ್ಯಾಗ, ಸಹನೆಯನ್ನು ತರುತ್ತಾರೆ, ಹೊರತು ಆಕೆಯ ಪ್ರತಿಭಟನೆಯನ್ನಲ್ಲ. ಏಕೆಂದರೆ ತಿರುಮಲಾಂಬ ಪ್ರಕಾರ ಆತ್ಮಾಭಿಮಾನದ, ಅಹಂನ ನಡುವಿನ ಅಂತರ ತೀರ ತೆಳುವಾದುದು. ಗುರುಗಳಿಗೆ ಗುರುದಕ್ಷಿಣೆ ಕೊಟ್ಟೇ ತೀರುತ್ತೇನೆನ್ನುವ ಗಾಲವನ ಅಭಿಮಾನ, ವಸಿಷ್ಠರೇ ಬಂದು ಬ್ರಹರ್ಷಿ ಎನ್ನಬೇಕೆಂಬ ವಿಶ್ವಾಮಿತ್ರನ ಹಠ, ಯಾಚಕರನ್ನು ಎಂದೂ ಭಗ್ನ ಮನೋರಥರನ್ನಾಗಿ ಮಾಡುವುದಿಲ್ಲವೆಂಬ ಯಯಾತಿಯ ಅಭಿಮಾನ ಇವುಗಳೇ ವಾಸ್ತವವಾಗಿ ಮಾಧವಿಯ ಬದುಕಿನಲ್ಲಿ ಅನಿಷ್ಟವನ್ನು ತಂದೊಡ್ಡಿದವು.

ಇದು ನಾಟಕಾರಂಭಕ್ಕೆ ತಿರುಮಲಾಂಬ ಸೂಚಿಸಿರುವ ಸ್ತ್ರೀವಾದಿ ನಿಲುವಾದರೆ ಅವರು ಕತೆಯನ್ನು ಅಂತ್ಯಗೊಳಿಸುವ ವಿಧಾನವು ಇದಕ್ಕೆ ಪೂರಕವಾದುದೇ ಆಗಿದೆ. ಅನುಪಮಾ ನಿರಂಜನರ ಮಾಧವಿಯ ಬದುಕು ತಾನು ಹೆತ್ತ ಮಕ್ಕಳ ಮೇಲಿನ ಹಕ್ಕಿಲ್ಲದವಳಾಗಿ, ಸಿಡಿದೆದ್ದು, ವ್ಯವಸ್ಥೆಯನ್ನು ತಿರಸ್ಕರಿಸಿ ಅರಣ್ಯ ಸೇರುವಲ್ಲಿಗೆ ಮುಕ್ತಾಯಗೊಂಡರೆ, ತಿರುಮಲಾಂಬ ಅವರ ಮಾಧವಿಯ ಕತೆ ಅಲ್ಲಿಗೆ ಮುಗಿಯುವುದಿಲ್ಲ. ಬದಲಿಗೆ ಯಯಾತಿಯ ಮದಾಂಧತೆಯಿಂದ ದೇವಲೋಕದಿಂದ ಪತಿತನಾಗಿ ಭೂಮಿಗೆ ಬೀಳುವವರೆಗೆ ಮುಂದುವರಿಸುತ್ತಾರೆ. ಪತಿತನಾದ ತಂದೆಗೆ ತನ್ನ ಪುಣ್ಯಾರ್ಜನೆಯನ್ನು ನೀಡುವುದಲ್ಲದೆ ತನ್ನ ಮಕ್ಕಳ ಪುಣ್ಯಾರ್ಜನೆಯನ್ನು ಒದಗಿಸುವ ಮೂಲಕ ಪುತ್ರ ಸಂತಾನವೇ ಸದ್ಗತಿದಾಯಕವೆಂಬ ಅಹಂಕಾರವು ಜನರಿಗೆ ಆವರಿಸದಂತೆಯೂ, ಪುಣ್ಯಹೀನನಾದ ನಾನು ದುಹಿತೃ ಸಂತತಿಯಿಂದ ಮತ್ತೆ ಸದ್ಗತಿ ಹೊಂದಿದಂತೆ, ಜನರಿಗೆ ದೌಹಿತ್ರ ಸಂತತಿಯಿಂದಲೂ ಸದ್ಗತಿ ಲಾಭವಾಗುವಂತೆಯೂ ಅನುಗ್ರಹಿಸಬೇಕು ಎಂಬುದನ್ನು ನಿರೂಪಿಸುತ್ತಾರೆ. ಈ ಮುಕ್ತಾಯವನ್ನು ಅನುಪಮಾ ಅವರ ಕೃತಿಯ ಮುಕ್ತಾಯಕ್ಕೆ ಹೋಲಿಸುವುದಾದರೆ ಎಲ್ಲಿ ಅನುಪಮಾ ತಾನು ಹೆತ್ತ ಮಕ್ಕಳನ್ನು ತನ್ನದಾಗಿಸಿಕೊಳ್ಳದಾದ ಮಾಧವಿಯ ಅಸಹಾಯಕತೆಯನ್ನು ಮುಂದೆ ತಂದು, ಅಂತಹ ವ್ಯವಸ್ಥೆಗೆ ಆಕೆಯಿಂದ ಧಿಕ್ಕಾರ ಹೇಳಿಸಿದರೆ ತಿರುಮಲಾಂಬ ಅದನ್ನು ಮುಂದುವರಿಸಿ, ಆ ಮಕ್ಕಳು ಮಾಧವೀ ಪುತ್ರರೇ ಆಗುವಂತೆ ಮಾಡಿದ್ದಾರೆ. ಅವರೆಲ್ಲರೂ ವಿವಿಧ ಪಿತರನ್ನು ಹೊಂದಿದ್ದರೂ, ಆಕಾರ, ನಡೆ, ನುಡಿಗಳಲ್ಲಿ ಒಬ್ಬರನ್ನೊಬ್ಬರು ಹೋಲುತ್ತ ಅಣ್ಣತಮ್ಮಂದಿರಂತಿದ್ದು ತಮ್ಮಜ್ಜನಾದ ಯಯಾತಿಗೆ ಒಮ್ಮನಸ್ಸಿನಿಂದ(ತಾಯಿಯಂತೆ) ತಮ್ಮ ಪುಣ್ಯಾರ್ಜನೆಯನ್ನು ಧಾರೆ ಎರೆಯಲು ತಯಾರಾಗುತ್ತಾರೆ. ಆಗ ಮಾಧವಿ ಸ್ಪಷ್ಟವಾಗಿ ನುಡಿಯುತ್ತಾಳೆ. 'ರಾಜರ್ಷಿಯಾದ ಜನಕನೇ ಇವರು ಕೊಡುವ ಪುಣ್ಯಫಲಗಳನ್ನು ಪರಿಗ್ರಹಿಸಲು ನಿನಗೆ ಬಾಧ್ಯತೆಯುಂಟು. ಸಂಶಯ ಪಡಬೇಕಾಗಿಲ್ಲ.' ಹೀಗೆಯೇ ತ್ರಿಲೋಕಾಧಿಪತಿಯಾದ ಮಹೇಂದ್ರನೂ ನುಡಿಯುತ್ತಾನೆ. ಮಾಧವೀ ಪುತ್ರರೇ ಪರಿಶುದ್ಧಾತ್ಮರೇ. ನಿಮ್ಮ ಸುಕೃತವು ಅಮೋಘವಾದುದು. ಕತೆಗೆ

ಯಯಾತಿಯೂ ದೌಹಿತ್ರರಿಂದಾದ ತನ್ನ ಸದ್ಗತಿಯನ್ನು ಎತ್ತಿ ಹೇಳುತ್ತಾನೆ. ಹಾಗಾಗಿ ಮೇಲು ನೋಟಕ್ಕೆ ತಿರುಮಲಾಂಬ ಅವರ ಕೃತಿಯಲ್ಲಿ ಕ್ರಾಂತಿಕಾರಕವಾದ ಮಾತುಗಳಿಲ್ಲದಿದ್ದರೂ, ಅವರು ಅತ್ಯಂತ ತರ್ಕಬದ್ಧವಾಗಿ ತಮ್ಮ ಸ್ತ್ರೀವಾದಿ ನಿಲುವನ್ನು ಅಲ್ಲಿ ಪ್ರತಿಪಾದಿಸಲು ಯತ್ನಿಸುತ್ತಾರೆ.

ವಾಸ್ತವದಲ್ಲಿ ಕೂಡ ತಿರುಮಲಾಂಬ ತನ್ನ ಸಮಾಜದ ಒಳಗಿದ್ದುಕೊಂಡೇ, ಆ ಸಮಾಜದ ಆಕಾಂಕ್ಷೆಗಳನ್ನು ಪೂರೈಸುತ್ತಲೇ ತಮ್ಮ ಪ್ರಾತಿನಿಧ್ಯ ಕಾಯ್ದುಕೊಳ್ಳಲು ಯತ್ನಿಸಿದವರು. ಆದ್ದರಿಂದಲೇ ಅವರು ತಮ್ಮ ಬರಹದಲ್ಲಿ ತೀರ ಕ್ರಾಂತಿಕಾರಕವಾದ ವಿಚಾರಗಳನ್ನು ಮಂಡಿಸ ಲಿಲ್ಲವಾದರೂ, ತಮ್ಮ ಜೀವನ ಸಂದರ್ಭದಲ್ಲಿ ಆ ಕಾಲಕ್ಕೆ ಅಸಮಾನ್ಯವಾದುದರತ್ತ ಕೈ ಚಾಚಿದರು. ಮಹಿಳೆಗೆ ಶಿಕ್ಷಣ ನೀಡಬೇಕು ಎಂಬ ಹಂಬಲ ಹಾಗು ಆಧುನಿಕ ಶಿಕ್ಷಣದಿಂದ ಮಹಿಳೆ ಏನಾಗಬಹುದು ಎಂಬ ಆತಂಕ ಈ ಎರಡನ್ನೂ ಪ್ರಕಟಿಸುತ್ತಲೇ ಆಧುನಿಕ ಶಿಕ್ಷಣದಿಂದ ಮಹಿಳೆಯೊಬ್ಬಳು ನಿಜಕ್ಕೂ ಹಂಬಲಿಸಬಹುದಾದ ಅವಕಾಶಕ್ಕಾಗಿ ಕಾರ್ಯೋನ್ಮುಖರಾದರು. ಅಂದಿನ ಆಧುನಿಕ ಚಿಂತನೆಯಲ್ಲಿ ಅತಿ ಮುಖ್ಯವೆನಿಸಿದ ವಿಧವಾ ವಿವಾಹವನ್ನು ಒಪ್ಪಿ, ಕ್ರಾಂತಿಕಾರಿ ಎನಿಸಿ ಮತ್ತೊಮ್ಮೆ ಗೃಹಿಣಿಯಾಗಿ, ತಾಯಿಯಾಗಿ ಬದುಕನ್ನು ಕಟ್ಟಿಕೊಳ್ಳುವುದು ಅಥವ ವೈಧವ್ಯವನ್ನು ಒಪ್ಪಿಕೊಂಡೇ ಕುಟುಂಬದಾಚೆಗಿನ ಹೊಸ ಜಗತ್ತಿನೊಡನೆ ನೇರ ಸಂಬಂಧವನ್ನು ಬೆಳೆಸಿಕೊಳ್ಳುವುದು ಎಂಬೆರಡರಲ್ಲಿ ಎರಡನೆಯ ದನ್ನು ಆರಿಸಿಕೊಂಡರು. ಅವರ ಈ ತೀರ್ಮಾನ ಮೇಲುನೋಟಕ್ಕೆ ತೀರ ಸಾಂಪ್ರದಾಯಿಕ ವಾದದ್ದೆನಿಸಿದರೂ, ಕೂಡ ಪರಿಣಾಮದಲ್ಲಿ ಅದು ಅಂದಿನ ಪ್ರಗತಿಪರ ಹೆಣ್ಣಿನದಾಗಬಹು ದಾದ ಎಲ್ಲ ಸಾಧನೆಗಳನ್ನು ಮೀರಿ ಮುನ್ನಡೆದಿದೆ. ಇದನ್ನರಿತೇ ಚಿ.ನ. ಮಂಗಳ "ಮದುವೆ ಪುನರ್ ವಿವಾಹ ಇವುಗಳೇ ಸುಖದ ಮಾರ್ಗ ಎಂದೂ, ಇಹ ಜೀವನದ ಸ್ವಾಸ್ಥ್ಯಕ್ಕೆ ಪುರುಷನೊಬ್ಬನನ್ನು ಅವಲಂಬಿಸುವುದೇ ಸೂಕ್ತ ಎಂದೂ ನಂಬಿರುವ ಸಮಾಜಕ್ಕೆ ನಭಾ ಒಂದು ನೈತಿಕ ಸವಾಲು"[೨] ಎಂದು ವಿಶ್ಲೇಷಿಸುತ್ತಾರೆ.

ತಿರುಮಲಾಂಬ ಅವರ ಪ್ರಪಂಚ ತೀರ ಸಣ್ಣದಿರಬಹುದು. ಕೇವಲ ಮೇಲೆ ಮಧ್ಯಮ ವರ್ಗದ ಆದರ್ಶಗಳಿಗೆ ಜೋತು ಬಿದ್ದಿದ್ದಿರಬಹುದು. ಆದರೂ ಅದು ನಿಶ್ಚಿತ ಅರ್ಥದಲ್ಲಿ ಆ ಸೀಮಿತ ಪ್ರಪಂಚದೊಳಗೂ ಸ್ತ್ರೀಯಾತ್ಮಕತೆಯನ್ನು ಕೆಲವು ನೆಲೆಗಳಲ್ಲಾದರೂ ಪ್ರತ್ಯೇಕಿಸಿ ಪರಿಭಾವಿಸಲು ಯತ್ನಿಸುತ್ತದೆ. ತೀರ ಸ್ಪಷ್ಟವಾಗಿಯೇ ತನ್ನ ಸಮಾಜದೊಳಗೂ ಸ್ತ್ರೀಯನ್ನೊಂದು ವರ್ಗವಾಗಿ, ಸಮುದಾಯವಾಗಿ, ಪರಿಭಾವಿಸುತ್ತದೆ.

ತಿರುಮಲಾಂಬ ಅವರ ಸಂದರ್ಭದಲ್ಲಿ ಗಮನಿಸಬೇಕಾದ ಇನ್ನೊಂದು ಅಂಶ ಅವರು ತಮ್ಮ ಕಾಲದ ಸುಧಾರಣಾವಾದಿಗಳು ಹಾಗು ಸಂಪ್ರದಾಯವಾದಿಗಳಿಬ್ಬರಿಂದಲೂ ಸ್ವಲ್ಪ ದೂರವೇ ನಿಂತು ತಮ್ಮ ಆಲೋಚನೆಯನ್ನು ಪ್ರತಿಪಾದಿಸಿರುವುದು. ಆಧುನಿಕ ವೈಚಾರಿಕತೆ ಎತ್ತಿ ಹಿಡಿಯುತ್ತಿದ್ದ ವಿಧವಾ ವಿವಾಹ, ವಿಚ್ಛೇಧನಗಳನ್ನು ಒಪ್ಪಲಿಲ್ಲವಾದರೂ ಅದನ್ನು

ಸಾಂಪ್ರದಾಯಿಕ ಸಿದ್ಧಾಂತಗಳಿಂದಲೂ ಭಿನ್ನವಾಗಿ ಗ್ರಹಿಸಲು ಯತ್ನಿಸುವುದು. ತನ್ನ ಸಮಾಜದ ಪ್ರಗತಿಪರರ ಕಣ್ಣಿಗೆ ಇಂದೇಕೆ ವಿಧವಾವಂತಹ ವಿಚಾರವು ಕ್ರೂರವಾಗಿ ಕಾಣಿಸುತ್ತಿದೆ ಎಂಬುದನ್ನು ಗುರುತಿಸಿಕೊಳ್ಳುವುದರೊಂದಿಗೆ, ಅವರು ಪ್ರತಿಪಾದಿಸುವ ವಿಧವಾ ವಿವಾಹವು ಯಾವ ನೆಲೆಯವರೆಗೆ ಹೆಣ್ಣಿಗೆ ಅನುಕೂಲಕರವಾದುದೆಂಬುದನ್ನು ಕುರಿತು ಚಿಂತಿಸುತ್ತಾರೆ. ಈ ಎರಡರ ಮುಖಾಮುಖಿಯಲ್ಲಿ ಪುರುಷಾದರ್ಶದ ಜೀವನ ಕ್ರಮವೊಂದನ್ನು ತಮ್ಮ ಸಮಕಾಲೀನ ಸಮಾಜದಲ್ಲಿ ಗುರುತಿಸಿಕೊಂಡು ಅದನ್ನೇ ಸ್ತ್ರೀಗೂ ನೀಡಬೇಕೆಂದು ವಾದಿಸುತ್ತಾರೆ. ಅಂದಿನ ಸಮಾಜದಲ್ಲಿ ಪುರುಷರಿಗೆ ಮರುವಿವಾಹದ ಹಕ್ಕಿತ್ತಾದರೂ, ಅದು ಪ್ರಚಲಿತವಾಗಿತ್ತಾದರೂ, ಆ ಸಮಾಜದ ಆದರ್ಶವಾದಿಗಳು ವಿಧುರರಾದವರು ಸಂಯಮದಿಂದ ಬ್ರಹ್ಮಚರ್ಯವನ್ನು ಆಚರಿಸುತ್ತ, ಯೋಗಿಕ ಜೀವನ ನಡೆಸುವುದನ್ನು ಅತ್ಯುತ್ಕೃಷ್ಟವಾದುದೆಂದು ನಂಬಿದ್ದರು. ಅಂತಹವರಿಗೆ ಹೆಚ್ಚಿನ ಗೌರವವನ್ನು ನೀಡುತ್ತಿದ್ದರು. ಆ ಆದರ್ಶವನ್ನೇ ತಿರುಮಲಾಂಬ ಸ್ತ್ರೀಗೂ ವಿಸ್ತರಿಸಬೇಕೆಂದು ವಾದಿಸಿದರು. ತನ್ನ ಸಮಾಜದ ಸಮಕಾಲೀನ ವಾಸ್ತವವು ಹೇಗೆ ವಿಧವೆಗೆ ವಿಧವಾಚರಣೆ, ವಿಧುರನಿಗೆ ಪುನರ್‌ವಿವಾಹ ಎಂಬ ತರತಮದ ನಿಲುವನ್ನು ಹೊಂದಿದೆಯೋ ಹಾಗೆಯೇ, ತನ್ನ ಸಮಾಜದ ಆಧುನಿಕ ವೈಚಾರಿಕತೆಯು ವಿಧವೆಗೆ ಪುನರ್‌ವಿವಾಹವನ್ನು ಪ್ರೋತ್ಸಾಹಿಸುತ್ತಲೇ, ತನಗೆ ತಾನು ಸಂಯಮದ ಆದರ್ಶವನ್ನು ಎತ್ತಿ ಹಿಡಿಯುತ್ತಿದೆ ಎಂಬ ತರತಮವನ್ನು ಗ್ರಹಿಸಿದರು. ಹಾಗೂ ಆ ಪುರುಷಾದರ್ಶದ ಅಚ್ಚಿನಲ್ಲಿಯೇ ನಭಾಳ ಪಾತ್ರವನ್ನು ವಿರಾಗಿಣಿಯಾಗಿ ಪರಿವರ್ತಿಸಿದರು. ಆರ್ಯಧರ್ಮದ ಯೋಗಿಕ ಆದರ್ಶವು ಸ್ತ್ರೀಗೂ ಒದಗಿಬರಬೇಕು ಎಂದರು.

ಇಷ್ಟಾದರೂ ಅಂದಿನ ವೈಚಾರಿಕತೆಯು ತನ್ನೊಂದು ಅತ್ಯುತ್ತಮ ಸ್ತ್ರೀಪರ ಮೌಲ್ಯವಾಗಿ ವಿಧವಾ ವಿವಾಹವನ್ನು ಎತ್ತಿ ಹಿಡಿಯುತ್ತಿದ್ದಾಗ ಅದನ್ನು ಸಂಪೂರ್ಣವಾಗಿ ವಿರೋಧಿಸುವುದು ಅವರಿಗೆ ಸರಳವಾದ ವಿಚಾರವಾಗಿರಲಿಲ್ಲ. ಏಕೆಂದರೆ ಸ್ವತಃ ಅವರೇ ಅಂದಿನ ಸ್ತ್ರೀಪರವಾದ ಸುಧಾರಣೆಗಳ ಪ್ರಯೋಜನ ಪಡೆದುಕೊಂಡವರಾಗಿದ್ದರು (ವಿಧವಾ ವಿವಾಹವಿಲ್ಲದೆಯೂ). ಆ ಉದಾರವಾದದಿಂದಾಗಿ ವಿಧವೆಯಾಗಿದ್ದು ವಿದ್ಯೆ ಕಲಿತು, ಸಾಹಿತ್ಯ, ಪ್ರಕಾಶನ, ಪತ್ರಿಕೋದ್ಯಮದಂತಹ ಹೊಸ ಕ್ಷೇತ್ರಗಳಿಗೆ ಕಾಲಿಟ್ಟಿದ್ದರು. ಹೀಗೆ ಅವರ ವೈಯಕ್ತಿಕ ಅನುಭವವೇ ಹಿಂದೂ ಉದಾರವಾದದ ಲಾಭ ಪಡೆದು ರೂಪುಗೊಂಡಿರುವಾಗ ಅವರಿಗೆ ಅದನ್ನು ವಿರೋಧಿಸುವುದು ಸುಲಭವಾಗಿರಲಿಲ್ಲ. ಹಾಗಾಗಿ ಭರತಖಂಡದಲ್ಲಿ ವಿಧವಾ ವಿವಾಹ ಪದ್ಧತಿಯನ್ನು ತರುತ್ತಿರುವವರು ಯುಕ್ತರೇ ಎಂಬುದಕ್ಕೆ ನಾವು ಹಾಗೆ ಹೇಳಲಾರೆವು. ಅದು ಅವರವರ ಇಚ್ಛೆ, ಮಾಡಿಕೊಳ್ಳುವವರ ಅಪೇಕ್ಷೆ. ಈ ಪದ್ಧತಿಯು ಸಧ್ಯಕ್ಕೆ ಹಿತಕರವಾದುದಲ್ಲವೆಂದು ನಾವು ನಂಬಿರುವೆವು ಎಂದಷ್ಟೇ ಸೂಚಿಸಬಲ್ಲವರಾದರು. ನಭಾದ ಕಥಾ ಬೆಳವಣಿಗೆಯ ಸಂದರ್ಭದಲ್ಲಿಯೂ ಆರಂಭದಲ್ಲಿ ರಮಾ, ಚಿದಾನಂದ ಮತ್ತು ನಿರಂಜನರಂತಹ ನವ ಯುವ ಜನರ ಸಮೂಹದಿಂದಾಗಿ ಪ್ರತಿಪಾದಿತವಾದ ನಭಾಳ ಪುನರ್ ವಿವಾಹದ ಪ್ರಸ್ತಾಪವನ್ನು ಅನಂತರ ರಾಜಶೇಖರನ ಬಲಾತ್ಕಾರದ, ಆಕಸ್ಮಿಕವಾದ

ಕಾಮಾಂಧ ಆಲೋಚನೆಯಾಗಿ ಪರಿವರ್ತಿಸಿದರು. ವಿರಾಗಿಣಿ ಕಾದಂಬರಿಯ ಮೂಲಕ ನಭಾ ಕಾದಂಬರಿಯಲ್ಲಿ ತಾವು ತೆಗೆದುಕೊಂಡ ನಿಲುವನ್ನು ಫಲಪ್ರದವಾಗಿ ಬೆಳೆಸುವ ಮೂಲಕ ಆಧುನಿಕ ವೈಚಾರಿಕ ಆಕೃತಿಗೆ ಮುಖಾಮುಖಿಯಾಗಿಸಲು ಯತ್ನಿಸಿದರು.

ಹೀಗೆ ತಿರುಮಲಾಂಬ ಸಂಪ್ರದಾಯದ ವಿರೋಧವನ್ನಾಗಲಿ, ಆಧುನಿಕತೆಗಿನ ಅಸಮ್ಮತಿಯನ್ನಾಗಲಿ ಅತ್ಯಂತ ನಿಖರವಾಗಿ ತಮ್ಮದೇ ಆದ ಆಲೋಚನೆಯ ಬೆಂಬಲದೊಂದಿಗೆ ಪ್ರತಿಪಾದಿಸಲು ಪ್ರಯತ್ನಿಸಿದ್ದಾರೆ. ತಿರುಮಲಾಂಬ ತೆಗೆದುಕೊಳ್ಳುವ ಈ self risk ಸ್ವರೂಪವೇ ಆಕೆಯೊಬ್ಬ ಗಟ್ಟಿಯಾದ ಸ್ತ್ರೀವಾದಿ ಚಿಂತಕಿಯಾಗಿದ್ದರು ಎಂಬುದನ್ನು ಅವರೆಲ್ಲ ಮಿತಿಗಳ ನಡುವೆಯೂ ಎತ್ತಿತೋರಿಸುತ್ತದೆ. ಆದರೆ ಭಾರತೀಯ ಪ್ರಧಾನ ಚಿಂತನೆಯ ಸಾಂಪ್ರದಾಯಕತೆಯಾಗಲಿ, ಆಧುನಿಕತೆಯಾಗಲಿ ಸ್ತ್ರೀಯನ್ನು ಗೃಹವಾದಿನಿಯ ಮಾದರಿಯಲ್ಲಿಯೇ ಹೆಚ್ಚು ನೋಡಲು ಬಯಸುವುದರಿಂದ ಅದರ ವೈಚಾರಿಕ ಆಕೃತಿಗೆ ತಿರುಮಲಾಂಬ ಅವರ ವಿಧವ ವಿವಾಹ ವಿರೋಧವೆಂಬುದು ಕೇವಲ ಪ್ರತಿಗಾಮಿ ಧೋರಣೆಯಾಗಿಯೇ ಕಾಣುತ್ತದೆ.

**ಟಿಪ್ಪಣಿಗಳು**

೧. ಈ ಸಂಪಾದಕಿಯರ ಕೆಲಸ ವಾಸ್ತವಾರ್ಥದಲ್ಲಿ ಕೂಡ ತಮ್ಮ ತಾಯಿಯ ಸಾಧನೆಯನ್ನು ಹುಡುಕುವುದೇ ಆಗುತ್ತದೆ.

೨ ಮತ್ತು ೩. ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ-ಸ್ತ್ರೀವಾದಿ ಸಾಹಿತ್ಯ ವಿಮರ್ಶೆ-ಕ್ರೈಸ್ಟ್ ಕಾಲೇಜು ಕನ್ನಡ ಸಂಘ, ಬೆಂಗಳೂರು ೧೯೯೪.

೪. ವಿಜಯಾದಬ್ಬೆ, ಹಿತೈಷಿಣಿಯ ಹೆಜ್ಜೆಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೨.

೫. ಈ ಬಗ್ಗೆ ಹಿತೈಷಿಣಿಯ ಹೆಜ್ಜೆಗಳು ಕೃತಿಯ ಅನುಬಂಧದಲ್ಲಿ ವಿವರಗಳಿವೆ.

೬. ಬರಗೂರು ರಾಮಚಂದ್ರಪ್ಪ (ಸಂ), ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩. ಎಸ್.ವಿ. ಪ್ರಭಾವತಿ, ಆಧುನಿಕ ಕನ್ನಡ ಮಹಿಳಾ ಕಥಾ ಸಾಹಿತ್ಯ, ಪುಟ ೧೨೭

೭. ಚಿ.ನ.ಮಂಗಳ, ತಿರುಮಲಾಂಬ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೯೧ ಪುಟ ೪೯.

# ತತ್ತ್ವಪದಕಾರ ಶಿಲವೇರಿ ಶಿವಪ್ಪ

● ಮಲ್ಲಿಕಾರ್ಜುನ ವಣೇನೂರ

ಸಾಮಾನ್ಯವಾಗಿ ನಾವು 'ತತ್ವ ಪದಕಾರರು' ಎಂದು ಗುರುತಿಸುವುದು ಶರಣ ಪರಂಪರೆಗಿಂತ ಸ್ವಲ್ಪ ಭಿನ್ನವಾದರೂ ಅವೇ ಆಶಯಗಳನ್ನುಳ್ಳ ಕೆಳವರ್ಗದವರನ್ನು ತಲುಪಲು ಯತ್ನಿಸಿದ ಗೇಯಕಾರರನ್ನು. ಇಲ್ಲಿ 'ಕೆಳವರ್ಗ' ಎಂದಿರುವುದರ ಧ್ವನಿಯು ಪರಂಪರಾಗತ ವೈದಿಕ ಸಾಂಪ್ರದಾಯಿಕತೆಯ ವರ್ಗಕ್ಕಿಂತ ಭಿನ್ನವಾದ ಶ್ರೇಣೀಕೃತ ವ್ಯವಸ್ಥೆಯಲ್ಲಿನ ಧಾರ್ಮಿಕ ಅಪ್ರಾಮುಖ್ಯತೆಯನ್ನು ಪಡೆದುಕೊಂಡ ವರ್ಗಗಳನ್ನು ಸೂಚಿಸುತ್ತದೆ. ತತ್ವಪದಕಾರರ ಅನುಭಾವವೂ ಸಹ ಶರಣ ಮತ್ತು ದಾಸ ಪರಂಪರೆಯ ಅನುಭಾವದಂತಿದ್ದರೂ ಕರ್ನಾಟಕದ ಸೂಫಿಗಳ ಪ್ರಭಾವದಿಂದಾಗಿ ಸ್ವಲ್ಪ ಮಟ್ಟಿಗೆ ಮಾರ್ಪಾಟಿಗೊಳಗಾಯಿತು. ತತ್ವಪದಕಾರರಲ್ಲಿ ಇಂತ ಸಂಸಾರದ ಜಂಜಡಗಳೆಲ್ಲವನ್ನು ನಿರಾಕರಿಸಿ ದೇವರಲ್ಲಿ ಸೇರುವ ಬಯಕೆಗಳಂತಹ ಅಂಶಗಳಿದ್ದವು. ಇದಕ್ಕೆ ಕಾರಣಗಳನ್ನು ವಸಾಹತುಶಾಹಿಯ ಆಕ್ರಮಣಶೀಲತೆಯ ರಾಜಕೀಯ ವಿದ್ಯಮಾನಗಳ ಹಿನ್ನೆಲೆಯಲ್ಲಿ ಕಂಡುಕೊಳ್ಳಲು ಸಾಧ್ಯವಾಗಬಹುದು. ಕೈಗಾರಿಕೀಕರಣದ ಜೊತೆಜೊತೆಗೇ ಹುಟ್ಟಿಕೊಂಡ ಹೊಸ ಆತಂಕ ಮತ್ತು ಸವಾಲುಗಳು ಸಹ ಇಂತಹುದೊಂದು ಮನಸ್ಥಿತಿಗೆ ಕಾರಣವಾಗಿರಬಹುದು. ಒಟ್ಟಿನಲ್ಲಿ ಬದುಕಿನ ಬಗೆಗಿನ ವೈರಾಗ್ಯ ಭಾವಕ್ಕೆ ಆಧುನಿಕತೆಯ ಜೊತೆಗೆ ರಾಜಕೀಯ, ಸಾಮಾಜಿಕ ಒತ್ತಡಗಳು ಕಾರಣವಾಗಿವೆಯೆಂದು ಹೇಳಬಹುದಾಗಿದೆ. ಸೂಫಿಜಂ ಮತ್ತದಕ್ಕೆ ಸಂವಾದಿಯಾಗಿ ಹುಟ್ಟಿಕೊಂಡ ಭಕ್ತಿಪಂಥಗಳ ಕಾವು ಇಳಿಮುಖವಾಗಿ, ಅದರಿಂದಲೇ ಪ್ರೇರಿತಗೊಂಡು ಧಾರ್ಮಿಕ ಅರ್ಥಪೂರ್ಣತೆಗಾಗಿ ಹುಡುಕಾಟ ನಡೆಸಿದ, ಕೆಳವರ್ಗದ ಆಶಯಗಳಿಂದಲೇ ರೂಪುಗೊಂಡವರು ಈ ತತ್ವಪದಕಾರರಾಗಿದ್ದಾರೆ. ಉತ್ತರ ಕರ್ನಾಟಕವನ್ನೊಳಗೊಂಡಂತೆ ಹಲವೆಡೆ ಮುಸ್ಲಿಂ ಮತ್ತು ಮುಸ್ಲಿಮೇತರ ತತ್ವಪದಕಾರರು ಕಾಣಿಸಿಕೊಂಡು ಪರಸ್ಪರರ ಗುರು, ಶಿಷ್ಯ ಪರಂಪರೆಯಲ್ಲಿ ಒಂದಾಗಿ ಎಲ್ಲಾ ವರ್ಗಗಳ ಜನ ಸಮುದಾಯವನ್ನು ತಲುಪಲು ಪ್ರಯತ್ನಿಸಿದರು. ಈ ತತ್ವಪದಕಾರರಲ್ಲಿ ಬಹು ಗುರು ಮತ್ತು ಅವರಿಂದ ದೀಕ್ಷೆ ಪಡೆದ ಅನುಯಾಯಿಗಳು, ಧಾರ್ಮಿಕ ಉತ್ತರಾಧಿಕಾರ, ರಹಸ್ಯ ಭಾವಮೇಳಗಳನ್ನೊಳಗೊಂಡಂತೆ ಸೂಫಿ ಆಚರಣೆಗಳ

ಮುಂದುವರಿಕೆಯನ್ನೇ ಕಾಣಬಹುದು. ಈ ಭಾಗದ ಮುಸ್ಲಿಂ ತತ್ವಪದಕಾರರಿಗೆ ಅವರ ಪುಣ್ಯತಿಥಿಯಾಗಿ ಉರುಸು ಆಚರಿಸುವುದು ಸಹ ಇದನ್ನು ಸ್ಪಷ್ಟಪಡಿಸುತ್ತದೆ. ತತ್ವಪದಕಾರರ ಧಾರ್ಮಿಕ ಪ್ರಕ್ರಿಯೆಯು 'ಸೂಫಿಜಂ'ನಷ್ಟು ವ್ಯಾಪಕತೆ ಪಡೆದುಕೊಳ್ಳದಿದ್ದರೂ ತಕ್ಕಮಟ್ಟಿಗೆ ಪರಿಣಾಮಕಾರಿಯಾಗಿತ್ತು.

ಈ ಹಿನ್ನೆಲೆಯಲ್ಲಿಯೇ ಬಳ್ಳಾರಿ ಜಿಲ್ಲೆಯ ಮೂವರು ತತ್ವಪದಕಾರರನ್ನು ಕುರಿತಂತೆ ಚರ್ಚಿಸಬಹುದು. ಇವರಲ್ಲಿ ಶಿಲವೇರಿ ಶಿವಪ್ಪನವರು ಒಬ್ಬರು. ಶಿವಪ್ಪನವರು ಬಳ್ಳಾರಿ ತಾಲ್ಲೂಕಿನ ಹಂದಿಹಾಳು ಗ್ರಾಮದಲ್ಲಿದ್ದವರಾಗಿದ್ದು, ಉಳಿದಂತೆ ಇವರ ಗುರುಗಳು ಮತ್ತು ತೆಲುಗಿನ ತತ್ವಪದಕಾರರು ಆದ ಅಲ್ಲೀ ಸಾಹೇಬ್ ಅವರು ಆಂಧ್ರದ ಕರ್ನೂಲು ಜಿಲ್ಲೆಯ ಎಮ್ಮಿಗನೂರಿನವರು. ಇವರ ಗುರುಶಿಷ್ಯ ಪರಂಪರೆಯ ಗುರು ಬೋಧ ಎನ್ನುವ ಆಚರಣಾ ವಿಧಿಯು ಇಡೀ ಜಿಲ್ಲೆಯಾದ್ಯಂತ ವಿಶೇಷವಾಗಿ ಪ್ರಚಲಿತವಾಗಿದೆ. ಇನ್ನು ಶ್ರೀ ಸಾಯಿಬಣ್ಣ ತಾತನವರು ಗಡಿ ಬಾಗದ ಹೊಳಲುಗುಂದಿಯಲ್ಲಿದ್ದವರು. (ಹೊಳಲಗುಂದಿಯು ಹಳೆಯ ಬಳ್ಳಾರಿ ಜಿಲ್ಲೆಯಲ್ಲಿತ್ತು. ಈಗ ಆಂಧ್ರಕ್ಕೆ ಸೇರಿದೆ.) ಒಟ್ಟು ಈ ಮೂವರು ತತ್ವಪದಕಾರರ ಕುರಿತು ಇಲ್ಲಿ ವಿವೇಚಿಸಲಾಗುವುದು.

ಶಿಶುನಾಳ ಶರೀಫ್ ಮಡಿವಾಳಪ್ಪ ಮುಂತಾದ ತತ್ವಪದಕಾರರಿಗೆ ಹೋಲಿಸಿದರೆ ಶಿಲವೇರಿ ಶಿವಪ್ಪ, ಸಾಹಿಬಣ್ಣ ತಾತನವರ ಪದಗಳು ಸಪ್ಪೆಯೆನಿಸುತ್ತವೆ. ಆದರೂ ಈ ತತ್ವಪದಗಳು ಆಚರಣೆ ಅಂಗವಾಗಿ ಉಳಿದುಕೊಂಡು ಬಂದಿವೆ. ಹೆಚ್ಚು ಕಡಿಮೆ ಶರೀಫರ ಸಮಕಾಲೀನರಾದ ಈ ತತ್ವಪದಕಾರರು ಸಂಪ್ರದಾಯನಿಷ್ಠ ಮುಸ್ಲಿಂ ಮತ್ತು ಮುಸ್ಲಿಮೇತರರಿಂದ ಎದುರಿಸಿದ ವಿರೋಧ, ಆ ಮೂಲಕ ಕಂಡ ತಲ್ಲಣಗಳು ಮತ್ತು ಅಭದ್ರತೆಯ ಭಾವವನ್ನು ಅನುಭವಿಸು ತ್ತಲೇ ಸವಾಲನ್ನೆದುರಿಸಲು ಗಟ್ಟಿಗೊಳ್ಳಬೇಕಾಯಿತು. ಇಂತಹ ಸ್ಥಿತಿ ವಿಶೇಷಗಳಿಂದಾಗಿಯೇ ಇವರಿಗೆ ಮತಧರ್ಮದ ಎಲ್ಲೆಗಳನ್ನು ಮೀರಿದ ಮಾನವೀಯ ನೆಲೆಗಳ ಧಾರ್ಮಿಕತೆಯನ್ನು ಪ್ರತಿಪಾದಿಸಲು ಸಾಧ್ಯವಾಗಿರಬೇಕು.

ಈ ತತ್ವಪದಕಾರರ ರಚನೆಗಳನ್ನು, ಚಿಂತನೆಗಳನ್ನು, ಅನುಭಾವದ ಸ್ವರೂಪ, ಗುರುವಿನ ಮಹತ್ವ, ಗುರುಬೋಧವೆಂಬ ೩ ನೆಲೆಗಳಲ್ಲಿ ಪರಿಶೀಲಿಸಬಹುದು.

## ಅನುಭಾವದ ಸ್ವರೂಪ

ತತ್ವಪದಕಾರರು ಪ್ರತಿಪಾದಿಸುವ ಅನುಭಾವವು 'ಸೂಫಿಜಂ'ನ ಅನುಭಾವದ ಜೊತೆ ಸಾಮ್ಯವುಳ್ಳದ್ದಾಗಿದೆ.'ಇಲ್ಮಾ' ಎಂಬ ಮತ್ತೊಂದು ಹೆಸರಿನಿಂದಲೂ ಕರೆಯುತ್ತಾರೆ. ಇದರಲ್ಲಿ ಮೂರು ಹಂತಗಳಿವೆ. ೧. ಇಲ್ಮುಲ್ ಯಖೀನ್. ೨. ಹಕ್ಕುಲ್ ಯಖೀನ್. ೩. ಐನುಲ್ ಯಖೀನ್. ಯಖೀನ್ ಎಂದರೆ ಜ್ಞಾನದ ದೃಢತೆ, ನಿಶ್ಚಿತತೆ ಎನ್ನಬಹುದು. ಇಂತಹ ಜ್ಞಾನದ ನಿಶ್ಚಿತತೆಯಿಂದ ಹೊರ ಹೊಮ್ಮುವುದೇ ಅನುಭಾವ. ಇದನ್ನೇ 'ಇಲ್ಮುಲ್ ಯಖೀನ್'

ನಂಬಿರುವರು. ಈ ಸೃಷ್ಟಿಯು ಅಲ್ಲಾಹ್‌ನಿಂದ ರಚಿತವಾಗಿದ್ದು ಸಚರಾಚರಗಳಲ್ಲಿ ಆತನ ಅಂತ ಮತ್ತು ಗುಣಗಳನ್ನು ಕಾಣುವ ಜ್ಞಾನವನ್ನೇ 'ಹಕ್ಕುಲ್ ಯಕೀನ್' ಎಂದು ಕರೆದರು. ಇಡೀ ಜಗತ್ತನ್ನೇ ಅಲ್ಲಾಹ್‌ನ ಸ್ವರೂಪವೆಂದು ತಿಳಿದು ಪ್ರೇಮೋನ್ಮಾದದಲ್ಲಿ ಪರಮ ಸೌಂದರ್ಯದ ಸತ್ಯತೆಯನ್ನು ಕಾಣಲು ತವಕಿಸುವುದೇ 'ಐನುಲ್ ಯಕೀನ್' ಎನ್ನುತ್ತಾರೆ.

'ಸೂಫಿಜಂ' ಮೂಲಕ 'ಇಸ್ಲಾಂ'ನ ಮತ್ತು ತಸವ್ವುಫ್ (ಸೂಫಿ ಅನುಭಾವ)ನ ಪ್ರಭಾವವು ತತ್ವಪದಕಾರರ ಮೇಲಾದುದಕ್ಕೆ ಉದಾಹರಣೆಯಾಗಿ ಶಿಲವೇರಿ ಶಿವಪ್ಪನವರ ಈ ಕೆಳಗಿನ ಹಾಡನ್ನು ಗಮನಿಸಬಹುದು.

ನೀಮತ ಕಾಡಿದಿಷ್ಟ್ಯಾಯಿತಲ್ಲಾ ಸೊಯಾರ್ಕ ಭೂಮಿ
ಗಗನ ಜನ ಮಂತ ಪ್ರಭೂ ನೀಮರತಾಡಿ ಎಷ್ಟಾಯಿತಲ್ಲಾ ||ಪ||

ಮರುವಿಲ್ಲದಿರುವೆ ಇನ್ನರುವೆಂಜೊ ಕುರುಹಾನು (ಕುರ್ ಆನ್)
ಹೊರಗಾಗುವವಕಿದೊಂದಾಡಿ ಜಿಟ್ಟೇ ಮರುವು ಸಮೀಪಕೆ ಬರದಂತೆ ನೀನಿಂದು
ಶರೀರ ಜೀವೇಶಾಗೆ ಬೆರಶಿಬಿಟ್ಟೆಲ್ಲಾ
ಜೀವದಾಕಾರಕ್ಕೆ ಕೇವಲ ಶೂನ್ಯಕ್ಕೆ ತಾಯಿ
ರಕ್ತ ಬಿಂದು ತೊಟಕಿಸೀದೇ
ಜೀವ ನಿನ್ನಯ ಮರವ ಸೈಹಾಕಿವೆ ಘನವೆಂದಾ
ಕಾಯವಾಗೋಪರೀ ಕಲ್ಪಿಸೀದಲ್ಲಾ
ಪ್ರಥಮ ಮಾಸಲಿ ಮುದೆದ್ವಿತಿ ಮಾಸಗಟ್ಯಾಗಿ
ತ್ರಿತಿಯಾಮಾಧದಿ ಚಿಗರೇರೂ ವಂತೇ
ಚತುರ ಪಂಚಮಿ ಷಷ್ಟಿ ಸಪ್ತಷ್ಟ ನವಮಾಸ
ಜತೆಮಾಡಿ ಚೇತನ್ಯಗತಿ ನೀ ಕೊಟ್ಟೆಲ್ಲಾ
ಸಡಗರ ಶಿಶುಲೀಲ ವಡಗೂಡಾಡುವೋ
ವ್ಯಾಳ್ಯಾ ಸತಿಲಿನಂತ ವಾಯು ಘುಡಿ ಘುಢಿಸೇ
ನಡುನೆತ್ತಿ ಗೊಡಿಯಲು ವಡದಿರಿನ ಧೋಮುಖಿ
ನಡೆಯಾದೆ ಮಾಡಿ ತತ್ತರಗೊಂಡಿತಲ್ಲಾ
ತತ್ತರ ಜಾಜುವಾಗ ಮತ್ತತ್ತ ತಿರಗದೆ ಬತ್ತಲೆ ತಂದು ಮರ್ತ್ಯಕ್ಕಾಕಿದೇ
ಹೆತ್ತಯ್ಯ ಮುತ್ತಯ್ಯ ಅತ್ತೆಮಾವ
ಭಾವಸುತ್ತನಮೋರಾಯ ಸುತ್ತಿದರಲ್ಲಾ

ದೈವತ್ವ ಮತ್ತು ಅಧ್ಯಾತ್ಮ ಸಂಬಂಧಿ ವಿಚಾರಗಳಲ್ಲಿ ಇಸ್ಲಾಂನ ಪ್ರಭಾವವನ್ನು ಇಲ್ಲಿ ಗಮನಿಸಬಹುದಾಗಿದೆ. ಇಂತಹ ಅರಿವಿನ ಅನುಭಾವಿಕ ಪ್ರಭೆಯಲ್ಲಿ ಹೊಳೆಯುವ ಬದುಕಿನ ಅಥವಾ ದೈವಿಕ ಸಾಮೀಪ್ಯವನ್ನು ಅರಿತು ದೈವೋನ್ಮಾದದಲ್ಲಿ ಶಿಲವೇರಿ ಶಿವಪ್ಪನವರು ಈ ಕೆಳಗಿನಂತೆ ಹಾಡುತ್ತಾರೆ.

ಆನಂದವಾನಂದವಾಯಿತ್ತೈ
ನಾನತ್ವವಳಿದೂ ಸದಾನಂದ ಸಿಕ್ಕಿದ್ದರಿಂದೀಗ ||ಪ||
ವಾವಾ ಮತ ಭೇದಾ ಲಯವಾದಾ ನಿಜ ಬೋಧಾ
ಆದಿಗುರುವಿನಿಂದಾದನುಭವ ವಿನೋದ ಕಂಡು ಸೂವಾದದೊಳಗೆಯನ್ನಾ

ಇಲ್ಲಾ ಜಗವೆಲ್ಲಾ ಕಾಣಾಲ್ಲಾ ಕಂಪಿಲ್ಲಾ
ಮುಳ್ಳು ಮೊನೆಯ ತುದಿಯೆಲ್ಲಾ ತಾನಾದ ಉಲ್ಲಾಸವು ಬಲ್ಲಾತಗಾಗುವಂತಾನಂದ
ದುಃಖಾ ಸುಖ ಮಿಕ್ಕಾ ಇರುತಕ್ಕಾ ನಿಜಸಿಕ್ಕಾ
ಲೆಕ್ಕವ ಗಣಿತಕ್ಕೆ ಮಿಕ್ಕು ಮೀರಿದಾ ಪಕ್ಷಪಾತಿಯೆನ್ನ ಪಕ್ಷವಾದ್ದರಿಂದಾನಂದ||

ಲೋಕಾ ಸುರಲೋಕ ಯಮಲೋಕಾ ಪರಲೋಕಾ
ಯೇಕೋ ದ್ವೈಯ್ವರೂಪಾಕಾರಗಣತ ಸೋಕಲಿವೆಲ್ಲವು ನಾಶವಾದ್ದರಿಂದಾನಂದ ||
ಅಲ್ಲೀ ಪೂರ್ವದಲ್ಲೀ ಅರುವಿನಲ್ಲೀ ಅಖಂಡದಲ್ಲಿ
ಅಲ್ಲಿಂದಿರುತಿಹ ಅಲ್ಲಿ ಸಾಹೆಬು ಗುರು ಇಲ್ಲಿಂದೆ
ನ್ನೋಳಲ್ಲೀತನಕ ಕೊಟ್ಟಾನಂದವಾನಂದವಾಯಿತ್ತೈ||

ಇಂಡಿಯಾದ ಗೋಜಲು ಗೋಜಲಾದ ಧಾರ್ಮಿಕ ವ್ಯವಸ್ಥೆ ಅದರಿಂದೇರ್ಪಟ್ಟ ಸಂಕೀರ್ಣ ಸಾಮಾಜಿಕ ಸ್ಥಿತಿ ವಿಶೇಷ ಇಲ್ಲಿ ಮನುಷ್ಯ ಮನಷ್ಯರ ನಡುವೆ ಅರ್ಥಪೂರ್ಣ ಸಂಬಂಧಗಳನ್ನೇ ಗೌಣವಾಗಿಸಿಬಿಟ್ಟಿತ್ತು. ಅಸಂಖ್ಯಾತ ಮನಸ್ಸುಗಳನ್ನು ರೋಗಗ್ರಸ್ತವಾಗಿಸಿತು. ಮನುಷ್ಯ ಸಂವೇದನೆಗಳನ್ನು ಬರಡಾಗಿಸಿತ್ತು. ಈ ಎಲ್ಲಾ ಸಿಕ್ಕುಗಳಿಂದ ಬಿಡಿಸಿಕೊಂಡು ಶಿವಪ್ಪನವರ ಚೇತನ ಅಲ್ಲೀ ಸಾಹೇಬರ ದಾರ್ಶನಿಕ ಬೆಳಕಲ್ಲಿ ಪುಟಿದು 'ವಾದಾಮತ ಭೇದಾ ಲಯವಾದಾ ನಿಜಬೋಧಾ'ವನ್ನು ಕಂಡುಕೊಂಡು ಮುಳ್ಳು ಮೊನೆಯ ತುದಿಯೆಲ್ಲ ತಾನಾದ ಉಲ್ಲಾಸವು ಬಲ್ಲಾತಗಾಗುವಂತಾನಂದವನ್ನು ತಡೆಯಲು ಸಾಧ್ಯವಾಯಿತು.

ಈ ಪದ್ಯದ ಪ್ರತಿ ಚರಣ ಚರಣದಲ್ಲೂ ಕಳೆದುಹೋದ ಅಪೂರ್ವವಾದುದನ್ನು ಮತ್ತೆ ಪಡೆದುಕೊಂಡ ಅವರ್ಣನೀಯ ಆನಂದ ತಾನೇ ತಾನಾಗಿದ್ದು, ಅಭಿವ್ಯಕ್ತಿ ಕ್ರಮದಲ್ಲಿ ಅದನ್ನು ಹೇಳಿಬಿಡಬೇಕೆನ್ನುವ ತೀವ್ರತೆ ಕಂಡುಬರುತ್ತದೆ. ಅಮಾನವೀಯತೆ, ಅವಮಾನಗಳಿಂದ ಮುದುಡಿ ಹೋಗುತ್ತಿದ್ದ ಇಂಡಿಯಾದ ಅಸಂಖ್ಯಾತ ಮನಸ್ಸುಗಳನ್ನು ಅರಳಿಸುವ ಕ್ರಿಯೆಗಿಳಿದಿದ್ದು ಸೂಫಿಗಳ ಮತ್ತು ಈ ಬಗೆ ತತ್ವಪದಕಾರರ ಅರ್ಥಪೂರ್ಣ ಕ್ರಿಯೆಯಾಗಿದೆ. ಬೇರೊಂದು ಪದ್ಯದಲ್ಲಿ ಶಿವಪ್ಪನವರು 'ಅಲ್ಲೀ ಶಾರ್ಯರ ಹೊಲದ ಬೀಜಾ ಚೆಲ್ಲಾಬಾರದೇ ಮಲ್ಲಿಗೆಯ ವನದಂತ ಫಲವು ಮೆರೆಯುತಿಹುದೇ' ಎಂದು ತಮ್ಮ ಗುರುಗಳ ಚಿಂತನೆಯ ಪ್ರಸ್ತುತತೆ ಮತ್ತು ಅದನ್ನು ಹರಡಿ ಹಸನಾದ ಮಲ್ಲಿಗೆಯ ವನವಂತಹ ಫಸಲನ್ನು ಪಡೆಯುವ ಕನಸು ಕಾಣುತ್ತಾರೆ. ಈ ರೀತಿಯ ಅನುಭಾವಿಕ ಪ್ರಭೆಯಲ್ಲಿ ಹೊಳೆಯುವ ಬದುಕಿನ ಹೊಸ ಅರ್ಥ ಸಾಧ್ಯತೆಗಳ ಸ್ಫುರಣೆಯಿಂದ ಜಾತ್ಯತೀತತೆಯ ಗುಣಗಳಿಗೆ ತಾವೆ ಪ್ರತೀಕಗಳಾಗಿ ತಮ್ಮ ಅನುಯಾಯಿಗಳಲ್ಲಿ ಪಸರಿಸಲು ಇವರಿಗೆ ಸಾಧ್ಯವಾಯಿತು.

## ಗುರುವಿನ ಮಹತ್ವ

ತತ್ವಪದಕಾರರಲ್ಲಿ ಗುರುವಿನ ಮಹತ್ವ ಅಧಿಕವಾಗಿದ್ದು, ಸಾಧಕನು ಆತನಲ್ಲಿ ಶರಣಾದಾಗ ಮಾತ್ರ ಮೋಕ್ಷ ಪದವಿಯನ್ನೊಂದಲು ಸಾಧ್ಯವೆಂದು ಭಾವಿಸಲಾಗಿದೆ. ಗುರುವಿನ ಆಧಿಕ್ಯವನ್ನು ವಿವರಿಸುವ ಶರಣ ಮತ್ತು ದಾಸ ಪರಂಪರೆಯ ವಿವರಗಳೂ ಸಹ ಇವನ್ನು ಸ್ಪಷ್ಟಪಡಿಸುತ್ತವೆ. ಶಿಲವೇರಿ ಶಿವಪ್ಪನವರು ಕೂಡ ಗುರುವಿನ ಮಹತ್ವದ ಕುರಿತು ಹೀಗೆ ಹೇಳುತ್ತಾರೆ.

ಪರತತ್ವ ಗುರುವಿನಾ ಪ್ರಾರ್ಥಿಪನೊ ಕೇಳಿದನು ಭಾವಾಯಲ್ಲವನೂ
ಸುರ ಅಸುರ ಪ್ರಭುವನ ಪರವಸ್ತುವಿನೋಳಿರುವುದು
ತಾನರುಪಿದನೂ ಅಹಿರಂ ದಾವಾರಿ
ಗಾಧಾರವಾಗಿ ವರವಳಿಗನ್ನದೆ ಭರಿತವಾದ ಪರೀ
ಯಿಂದಾದ ಸ್ಥಲದಿ ತುಂಬಿದ ದೈವಮ
ನಂಬಿಗೆಯಿರಬಹುದೆನಿಸಿದನೂ
ನಂಬಿದ ಸುಜನನು ತುಂಬಿದ ದೇವನು
ಉಭಯಹುದೆಂಬುವದನುಭವ ಮಾಡಿದನು
ಗಿರಿ ಕರ್ಪೂರವು ಅಣುವುರಿ ಬೀಳಲು
ಬರಿದಾಗಿಹುದಾಗಿರುವದನೂ ಅರುಪಿದೆನ್ನದರಂ
ಅಲ್ಲೀ ಸಾಹೇಬು ಗುರು ಶರಧಿ ಜ್ಞಾನ ಹರುಷ ಕೊಟ್ಟದೇ

ಪರತತ್ವವೆಂದರೆ ಕೈವಲ್ಯ ಸುಖವಾಗಿರುವಂತಹದು. ಜಗತ್ತಿನಲ್ಲಿ ಅತ್ಯಂತ ಸುಖಕರವಾದದ್ದು ಧ್ಯಾನದ ಸುಖ. ಗುರುವಿನ ಸಹಾಯದಿಂದ ಆತ್ಮ ಚೈತನ್ಯವನ್ನು ಬಡಿದೆಬ್ಬಿಸುವುದು, ಆ ಮೂಲಕ ಪಡೆಯುವ ಆನಂದ ಇದು ತತ್ವಪದಕಾರರಿಗೆ ಬ್ರಹ್ಮಾನಂದಕ್ಕೆ ಸಮವಾಗಿರುವಂತದ್ದು.

ಗುರುಬೋಧ ಹೆಸರಿನ ಪಂಥವು ಆಚರಣೆಯಲ್ಲಿರುವ ಬಳ್ಳಾರಿ, ರಾಯಚೂರು, ಕರ್ನೂಲು, ಅನಂತಪುರ, ಚಿತ್ರದುರ್ಗ ಮೊದಲಾದ ಜಿಲ್ಲೆಗಳಲ್ಲಿ ಈ ತತ್ವಪದಕಾರರ ಆಶಯಗಳನ್ನು ಆಚರಣಾತ್ಮಕವಾಗಿ ಅನುಷ್ಠಾನಗೊಳಿಸುವ ಆಶ್ರಮಗಳಿವೆ. ಅಲ್ಲೀ ಸಾಹೇಬ್ ಶಿಲವೇರಿ ಶಿವಪ್ಪ ಮತ್ತು ಹೊಳಲುಗುಂದಿ ಸಾಹಿಬಣ್ಣ ತಾತನವರ ಪ್ರಭಾವಿರುವ ಈ ಭಾಗದಲ್ಲಿ ಗುರುವಿನ ಆಧಿಕ್ಯವನ್ನು ಪ್ರಸ್ತಾಪಿಸಲು ಇಸ್ಲಾಂ ಮೂಲದ ಕತೆಯೊಂದು ಪ್ರಚಲಿತದಲ್ಲಿದೆ.

ಪರಮಾತ್ಮ ಮೊದಲಿಗೆ ದೇವತೆಗಳನ್ನು, ರಾಕ್ಷಸರನ್ನು ಸೃಷ್ಟಿಸಿದ. ಅವರಿಗೆ ಅವರವರದ್ದೇ ಆದ ಪ್ರದೇಶ ಸುಖ ಸಂಪತ್ತುಗಳನ್ನು ನೀಡಿದ. ಅಷ್ಟಕ್ಕೆ ತೃಪ್ತರಾಗದೆ ಅತಿಯಾಸೆಯಿಂದ ಪರಸ್ಪರ ಹೋರಾಟಗಳಲ್ಲಿ ತೊಡಗಿದರು. ಈ ಘರ್ಷಣೆಗಳಿಂದ ಸಂಕಷ್ಟಗಳುಂಟಾಗಿ ದುಃಖಿತರಾದರು. ಇಂತಹ ದುಃಖ ಅವರನ್ನು ಅಲೌಕಿಕದೆಡೆ ಪ್ರೇರೇಪಿಸುವ ಬದಲಿಗೆ ಮತ್ತೆ

ಸಂಕಷ್ಟಗಳಿಗೆಡೆ ಮಾಡಿದುದರಿಂದ ಇನ್ನಿವರು ದೈವ ಸಾಕ್ಷಾತ್ಕಾರಕ್ಕೆ ಬಲುದೂರವೆಂದು ಭಗವಂತ ಚಿಂತೆಗೀಡಾಗಿ 'ಇಬ್ಲೀಶ್' (ಮಾಯೆ)ನನ್ನು ಕರೆದು ಅವನಿಂದ ಮಾನವ ಕೃತಿಯನ್ನು ನಿರ್ಮಿಸಿ ಜೀವ ಬರಿಸಿದ. ಹೀಗೆ ಬಂದ ಮನುಷ್ಯ ಮಾಯೆಯಿಂದ ರೂಪಗೊಂಡ ದ್ದಕ್ಕೋ ಏನೋ ಅಪರಿಪೂರ್ಣನಾದ. ಭೂಮಿಗೆ ಬಂದ ಮೇಲೆ ಪ್ರಾಪಂಚಿಕ ಮೋಹ, ಸ್ವಾರ್ಥ, ದುರಾಶೆಗಳಿಂದ ಆತ್ಮವಿನಾಶದೆಡೆ ಸಾಗತೊಡಗಿದ. ಆಗ ಪರಮಾತ್ಮ ಗುರುವಿನ ರೂಪದಲ್ಲಿ ಬಂದು ಅವನ ಹೃದಯವನ್ನಾಕ್ರಮಿಸಿದ. ಇಬ್ಲೀಶನನ್ನು ಹೊಡೆದೋಡಿಸುವ ಕಾರ್ಯದಲ್ಲಿ ನಿರತನಾದ.

## ಗುರುಬೋಧ

ಪಾರಮಾರ್ಥಿಕ ಪಥದಲ್ಲಿ ಮಾರ್ಗ ತೋರಿಸಲು ತತ್ವಪದಕಾರರಿಗೆ ಗುರುವು ಅಗತ್ಯವೆಂಬುದನ್ನು ಮನಗಂಡದ್ದಾಯಿತು. ಈಗ ಅವರು ತಮ್ಮ ಶಿಷ್ಯರಿಗೆ ಅರಹುತ ಅರಿವಿನ ಸ್ವರೂಪದ ಬಗ್ಗೆ ಪರಿಶೀಲಿಸಬಹುದು. ಅನುಭಾವಿಕ ನೆಲೆಗಳಲ್ಲಿ ವ್ಯಕ್ತಿಯ ವೈಯಕ್ತಿಕ ಧಾರ್ಮಿಕ ಅನುಭವಗಳಿಗಷ್ಟೇ ಹೆಚ್ಚಿನ ಪ್ರಾಮುಖ್ಯತೆಯಿದೆ. ಪ್ರಪ್ರಥಮವಾಗಿ ಅವನು ಆಧ್ಯಾತ್ಮಿಕ ಹಸಿವಿನಿಂದ ತುಂಬಿದವನಾಗಿರಬೇಕು. ಸೃಷ್ಟಿಯನ್ನು- ಅಂದರೆ ಇಲ್ಲಿ ವಿಶಾಲಾರ್ಥದಲ್ಲಿ ದೇವರು, ಮನುಷ್ಯಾತೀತವಾದದ್ದು, ಅನಂತವೆಂದರ್ಥ- ಪರಿಭಾವಿಸುತ್ತಲೇ ತನ್ನೊಳಗುಂಟಾಗುವ ಪರಿವರ್ತನೆಗಳ ಆವರ್ತನೆಗಳನ್ನು ಒಂದು ಕ್ರಮಕ್ಕೊಳಪಡಿಸುವ, ಮತ್ತದರಿಂದ ಕಾಣಬಯಸುವ ದರ್ಶನದ ಕಾಣ್ಕೆಯನ್ನು ಕಂಡುಕೊಳ್ಳುವಲ್ಲಿ ಗುರುವಿನ ಸಹಾಯ ಪಡೆಯುತ್ತಾನೆ. ಸಾಮಾನ್ಯವಾಗಿ ವಾಚ್ಯಾರ್ಥದಲ್ಲಿ ಬಳಸಲ್ಪಡುವಂತೆ ಉಪದೇಶಕನ ಸ್ಥಾನದಲ್ಲಿ ಗುರುವು, ವಿಧೇಯನಾಗಿ ಆಲಿಸುವ ಶಿಷ್ಯನಂತಲ್ಲ. ಇಲ್ಲಿ ಗುರು ಸ್ನೇಹಿತ, ಹಿತೈಷಿ, ತಂದೆ, ತಾಯಿ, ಬಂಧು ಎಲ್ಲವೂ ಆಗಿರುತ್ತಾನೆ. ಅದರಂತೆಯೇ 'ಪಾರಮಾರ್ಥಿ ಪಥ', 'ಅನುಭಾವ', 'ಆಧ್ಯಾತ್ಮಿಕತೆ' ಮೊದಲಾದ ಪದಗಳನ್ನು ಸಹ ನಾವು ಅವುಗಳ ಸವಕಲರ್ಥದಲ್ಲಿ ಬಳಸಲ್ಪಟ್ಟರೆ ಅವುಗಳ ಮೂಲ ಉದ್ದೇಶವೇ ಮರೆಯಾಗಿ ವಿಪರೀತಾರ್ಥ ಬಂದುಬಿಡುವ ಸಾಧ್ಯತೆಯಿದೆ. ಎಲ್ಲ ಮನುಷ್ಯರನ್ನು ಪ್ರೀತಿಸುವ, ಮಾನವೀಯತೆ, ದಯಾಪರತೆಯುಳ್ಳ, ತೀವ್ರ ಸಂವೇದನಾ ಶೀಲ ಮನಸ್ಸುಗಳ ತುಡಿತವೇ ಧಾರ್ಮಿಕತೆಯ ಒಳಸ್ವರೂಪವಾಗಿದೆ.

ಇಲ್ಲಿ ವಿವರಿಸಲಾಗಿರುವ ತತ್ವಪದಕಾರರ ಕುರಿತಂತೆ ಪ್ರಚಲಿತದಲ್ಲಿರುವ 'ಗುರುಭೋಧವು' 'ಗುರುದೀಕ್ಷೆ' 'ಜ್ಞಾನ ದೀಕ್ಷೆ' ಎಂಬ ಹೆಸರುಗಳಿಂದ ಹಿಂದಿನಿಂದಲೂ ಆಚರಣೆಯಲ್ಲಿತ್ತಂತೆ. ಬಹುಶಃ ದರ್ಗಾಗಳ ಮೂಲಕ ಇದಕ್ಕೆ ವಿಶೇಷ ಪ್ರಾಶಸ್ತ್ಯ ದೊರಕಿ, ಸೂಫಿ ಅನುಯಾಯಿಗಳಿಗೆ ಧಾರ್ಮಿಕೋಪದೇಶ ನೀಡುವ ಕ್ರಿಯೆಯಾಗಿ ಪರಿವರ್ತನೆಗೊಂಡಂತಿದೆ. ೧೭ನೆಯ ಶತಮಾನದ ಬಿಜಾಪುರ ಸೂಫಿ ಉಪದೇಶ ಮಂದಿರಗಳಲ್ಲಿ ಮುಸ್ಲಿಮೇತರ ಅನುಯಾಯಿಗಳಿಗೆ ಸೂಫಿಗಳು ಅಥವಾ ಅವರ

ಉತ್ತರಾಧಿಕಾರಿಗಳು ಧಾರ್ಮಿಕ ಉಪದೇಶ ನೀಡಿ ಇಸ್ಲಾಂನ ಪರಧಿಯೊಳಗೆ ಸೇರಿಸಿ ಕೊಳ್ಳುವ ಸಂಪ್ರದಾಯವಿತ್ತು. ಬಿಜಾಪುರ ಹಾಶೀಮ್ ಪೀರನು(ಇವರ ದರ್ಗಾ ಗೋಲ ಗುಂಬಜದ ಪಶ್ಚಿಮಕ್ಕಿದೆ) ತನ್ನ ಉಪದೇಶ ಸಮಾರಂಭಗಳಲ್ಲಿ (ಬೈಯುತ್) ಮುಸ್ಲಿಮೇತರ ಶಿಷ್ಯನಿಗ ನೀಡುತ್ತಿದ್ದ ದೀಕ್ಷೆಯ ವಿವರಗಳು ಹೀಗಿವೆ. 'ಹಾಕಿಮ್ ಪೀರನ ಶಿಷ್ಯನು ಪೀರನ ಕೈಹಿಡಿಯು ಮೆಕ್ಕಾದ ಕಡೆಗೆ ಮುಖಮಾಡಿ ಸ್ವಲ್ಪ ದೂರ ನಡೆಯುತ್ತಾನೆ. ಕುರಾನಿನ ಕೆಲವು ಮಂತ್ರಗಳನ್ನು ಪಠಿಸಿ ಇಸ್ಲಾಂನ ನಂಬಿಕೆಗಳಿಗೆ ಶರಣು ಹೋಗುವ ಮಂತ್ರಗಳನ್ನು ಹೇಳಿ, ದೇವರು ಮತ್ತು ಮಾನವರ ಮಧ್ಯೆ ಇರುವ ತನ್ನ ಹಾಶೀಮ್ ಪೀರನಿಗೆ ಸ್ವಾಮಿನಿಷ್ಠನಾಗಿ ಇರುವುದಾಗಿ ಪ್ರಮಾಣ ಮಾಡುತ್ತಾನೆ.' ನಾನು ಅಪನಂಬಿಕೆ ಮತ್ತು ಅ-ಸ್ವಾಮಿ ನಿಷ್ಠೆಯಿಂದ ಹೊರಬಂದಿದ್ದೇನೆ. ಇಸ್ಲಾಂ ಧರ್ಮದ ಅಂತರಂಗವನ್ನು ಸೇರಿದ್ದೇನೆ ಎಂದು ಉಚ್ಚರಿಸುತ್ತಾನೆ. ಹಾಶೀಮ್ ಪೀರನನ್ನು ಅನುಸರಿಸಿ ಅವನು ಮುಸ್ಲಿಂಮೇತರ ತನ್ನ ಧರ್ಮವನ್ನು ಬಿಡುತ್ತಾನೆ ಎಂಬುದನ್ನು ಹಾಶೀಮ್ ಪೀರನ ಕುರಿತಾದ ಸಾಹಿತ್ಯದಲ್ಲಿ ಉಲ್ಲೇಖಿಸಲಾಗಿದೆ.

ಇಲ್ಲಿ ಚರ್ಚಿಸಲಾಗಿರುವ ತತ್ವಪದಕಾರರಿಗೆ ಸಂಬಂಧಿಸಿದಂತೆ 'ಗುರಬೋಧ' ಹೆಸರಿನ ಕ್ರಿಯೆಯು, ಸ್ವರೂಪದಲ್ಲಿ ಮೇಲೆ ವಿವರಿಸಿದಂತೆ (ಹಾಶೀಮ್ ಪೀರ್ ಮತ್ತವನ ಮುಸ್ಲಿಮೇತರ ಶಿಷ್ಯವರ್ಗದ ಧಾರ್ಮಿಕ ಕ್ರಿಯೆ) ಇದ್ದರೂ, ಇಲ್ಲಿ ದೀಕ್ಷೆ ಪಡೆದ ಶಿಷ್ಯ ಇಸ್ಲಾಂಗೆ ಪರಿವರ್ತನೆಗೊಳ್ಳುವುದಿಲ್ಲ. ಬಹುಶಃ ಅದು ಈ ಹಿಂದಿನ ಮತ ಪರಿವರ್ತನೆಯ ಕುರುಹಾಗಿ ಉಳಿದುಕೊಂಡು ಬಂದಂತಿದೆ. ಕರ್ನೂಲು ಜಿಲ್ಲೆಯ ಗುಡೇಕಲ್ಲಿನಲ್ಲಿರುವ ಅಲ್ಲಿಪೀರ ಸಾಹೇಬ ಮತ್ತವರ ಉತ್ತರಾಧಿಕಾರಿಗಳಿಂದ, ಅವರ ದರ್ಗಾ ಸಂಸ್ಥೆಯು ಈ ಬಗೆಯ ದೀಕ್ಷೆ ನೀಡುತ್ತದೆ. ಶಿಲವೇರಿ ಶಿವಪ್ಪನವರು ಅಲ್ಲೀಪೀರರಿಂದಲೇ ದೀಕ್ಷೆ ಪಡೆದ ವರು. ಇಲ್ಲಿ ದರ್ಗಾದೊಳಗಡೆ ಅಲ್ಲೀಪೀರ್ ಸಾಹೇಬರ ಉತ್ತರಾಧಿಕಾರಿ 'ಗುರುದೀಕ್ಷೆ' ಪಡೆಯುವವನನ್ನು ದರ್ಗಾದೊಳಗಡೆಯ ಏಕಾಂತ ಸ್ಥಳದಲ್ಲಿ ಕೊಂಡೊಯ್ದು ಉಪದೇಶ ನೀಡಲಾಗುತ್ತದೆ. ಇಲ್ಲೂ ಸಹ ಗುರುವು(ದರ್ಗಾದ ಉತ್ತರಾಧಿಕಾರಿ) ಶಿಷ್ಯನ ಕೈಹಿಡಿದು ಕುರಾನಿನ ಕೆಲವು ಸೂರಾಗಳನ್ನು ಹೇಳುತ್ತಾನೆ.' ತುಂಬಾ ಸರಳವಾದ ಈ ಕ್ರಿಯೆ ಮುಗಿದ ನಂತರ ದೀಕ್ಷೆ ಪಡೆದವನು ಸಮಾಜದ ಉಳಿದವರಗಿಂತ ತುಂಬಾ ಭಿನ್ನನೆಂದು ಗುರುತಿಸಲ್ಪಡು ತ್ತಾನೆ. ಅಂದಿನಿಂದ ಅವನು ಸಾತ್ವಿಕ ವರ್ತನೆಗಳನ್ನು ಕಟ್ಟುನಿಟ್ಟಾಗಿ ರೂಢಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಇಂತಹ ಗುರು ದೀಕ್ಷೆ ಪಡೆದ ಅಸಂಖ್ಯಾತ ಮಂಡಳಿಗಳು ಅಂದರೆ ಗುರುಬೋಧದ ಆಶ್ರಮಗಳು ಈ ಭಾಗದಲ್ಲಿವೆ.

ಶಿಲವೇರಿ ಶಿವಪ್ಪನವರ ಕುರಿತಾದ ಘಟನೆಯೊಂದು ಪ್ರಚಲಿತವಲ್ಲಿದೆ. ಅವರ ಶಿಷ್ಯ ಮಾರೆಪ್ಪ ಎನ್ನುವವನು ಅವರ ತತ್ವಪದಗಳನ್ನು ಅತ್ಯಂತ ಸೊಗಸಾಗಿ ಹಾಡುತ್ತಿದ್ದನು.

ಅಭಯ ಪಾಲಿಪ ಪ್ರಭೂ<br>
ಅವಗೇ ಬಾರ ವಿದ್ಯಾ ಆರ್‍ಯಾರಲ್ಲಿ ವ್ಯೋದಂತೆ

ಅನುದಿನ ಅವರ ಪಾದಾಣುವಾಗಿದ್ದವನಿಗೇ
ಆಗಪಾಲಿಪರಂತೇ
ಘನವದ ಪ್ರಭು ಯಾವ
ಯನಗೆ ಭಕ್ತನುಯೆಂದು
ಕರುಣಿಸದೆ ದಿನತನ್ನಾ ಮನಿಯೋಳಿಡುವೊನಂತೇ

ಎಂಬ ತತ್ವಪದವೊಂದನ್ನು ಮನೆಯೊಂದರ ಮುಂದೆ ಹಾಡುತ್ತಿದ್ದಾಗ ಊಟ ಮಾಡುತ್ತಿದ್ದ ಮನೆಯೊಡೆಯ ಅಣ್ಣಾಜಿಗೌಡ ಎಂಬುವರು ಹಾಡು ಕೇಳಿ ಮೈಮರೆತು ಮನೆಯ ಹೆಣ್ಣುಮಕ್ಕಳಿಗೆ ಆ ದಾಸಯ್ಯನನ್ನು ಒಳ ಕರೆಯಿರಿ ಎಂದು ಹೇಳಿ, ಪೂರ್ವಾಪರ ವಿಚಾರಿಸಿದರು. ಆ ತತ್ವಪದ ಕರ್ತೃವಿನ ಬಗ್ಗೆ ತಿಳಿದುಕೊಂಡ ಮೂರನೆಯ ದಿನವೇ ಬಂಡಿ ಕಟ್ಟಿಕೊಂಡು ಅವರಲ್ಲಿಗೆ ಹೋದರು. ಗೌಡರು ಅವರ ಶಿಷ್ಯರಾಗಲು ಬಯಸಿದ್ದಲ್ಲದೆ ತಮ್ಮೂರಿಗೆ ಬಂದಿರಲು ಆಹ್ವಾನಿಸಿದರು. ಶಿವಪ್ಪನವರು ಅವರನ್ನು ಕೂಡಲೇ ಶಿಷ್ಯರನ್ನಾಗಿ ಸ್ವೀಕರಿಸಲಿಲ್ಲ. ಬದಲಿಗೆ ತಮ್ಮ ಗುರುಗಳು ಮುಸ್ಲಿಮರಾಗಿದ್ದ ವಿಚಾರ ತಿಳಿಸಿ ತಮ್ಮಲ್ಲಿಗೆ ಬಂದು ಹೋಗುತ್ತಾ ತಮ್ಮ ತತ್ವಚಿಂತನೆ ಪರಿಚಯಕ್ಕೆ ಬಂದ ಮೇಲೆಯೇ ಶಿಷ್ಯರಾಗುವಂತೆ ಹೇಳಿದರು. ಹಂದಿಹಾಳಿನಲ್ಲಿ ಕೆಲವರ್ಷಗಳ ನಂತರ ಅಣ್ಣಾಜಿಗೌಡರೊಂದಿಗೆ ಹಲವರು ಶಿಷ್ಯತ್ವವನ್ನು ಸ್ವೀಕರಿಸಿದರು. ಗೌಡರ ಪ್ರೀತಿಯ ಒತ್ತಾಯದ ಮೇರೆಗೆ ಹಂದಿಹಾಳಿನಲ್ಲಿಯೇ ಸಮಾಧಿಯಾಗಲು ಒಪ್ಪಿದರು. ಈಗಲೂ ಹಂದಿಹಾಳಿನಲ್ಲಿ ಶಿವಪ್ಪನವರ ಸಮಾಧಿ ಸ್ಥಳ ಆಶ್ರಮವಾಗಿದ್ದು ಅಸಂಖ್ಯಾತ ಭಕ್ತರ ಕೂಡುದಾಣವಾಗಿದೆ.

ಹೊಳಲಗುಂದಿಯ ಶ್ರೀ ಸಾಯಬಣ್ಣ ತಾತನವರ ಗುರುಗಳು ಜಂಗಮರು. ಸಾಯಿಬಣ್ಣನವರು ಕೂಡ ಅಸಂಖ್ಯಾತ ತತ್ವಪದಗಳನ್ನು ರಚಿಸಿದ್ದಾರೆ. ಈಗಲೂ ಅವು ಜೀವಂತವಾಗಿವೆ. 'ಅನುಭವ ಚಂದ್ರಿಕೆ' ಹೆಸರಿನಲ್ಲಿ ಪ್ರಕಟಗೊಂಡಿವೆ. ಹಾಗೆಯೇ ಶಿಲವೇರಿ ಶಿವಪ್ಪನವರ ಗುರುಗಳಾದ ಅಲ್ಲಿ ಪೀರರು ತೆಲುಗಿನಲ್ಲಿ ತತ್ವಪದಗಳನ್ನು ರಚಿಸಿರುತ್ತಾರೆ.

೧೭ನೇಯ ಶತಮಾನದಿಂದೀಚೆಗೆ ಹೆಚ್ಚಾಗಿ ಕಂಡು ಬರುವ ತತ್ವಪದಕಾರರಿಗೆ ಮತಾಂತರೀಕರಣ ಸಾಮಾಜಿಕ ಸ್ಥಾನಮಾನ ಯಾವ ಮಹತ್ವದ ಉದ್ದೇಶಗಳೂ ಇಲ್ಲದೆ ತಾರತಮ್ಯ ಭಾವವನ್ನು ಮೆಟ್ಟಿ ವೈಚಾರಿಕ ನೆಲೆಯಲ್ಲಿ ಧಾರ್ಮಿಕತೆಯ ಹೊಸ ಅರ್ಥ ಕಂಡುಕೊಳ್ಳಲು ಪ್ರಯತ್ನಿಸಿದರು. ಇಲ್ಲಿನ ತತ್ವಪದಕಾರರಿಗೆ ಯಾವ ರಾಜಾಶ್ರಯದ ಹಂಗೂ ಇಲ್ಲ. ಮತದ ಕಟ್ಟಳೆಯೂ ಇಲ್ಲ. ದೇವರ, ಆಧ್ಯಾತ್ಮಿಕತೆಯ ನಿಜಸ್ವರೂಪವನ್ನು ಹುಡಕ ಹೊರಟು ಮನುಷ್ಯ ಸಂಬಂಧಗಳ ವಿಚ್ಛಿದ್ರತೆಯನ್ನು ಕಂಡು ದಿಗ್ಭ್ರಮೆಗೊಂಡು ಲೌಕಿಕದೆಡೆಗೆ ವಿಮುಖರಾದಂತೆ ತೋರುತ್ತದೆ. ಆದರೆ ಇದು ಬದುಕಿನಿಂದ ಪಲಾಯನವಾಗಿರದೆ ಎಲ್ಲಾ ಸಂವೇದನಾಶೀಲ ಮನಸ್ಸುಗಳು, ವಾಸ್ತವದ ತಲ್ಲಣಗಳನ್ನು, ಸಂದಿಗ್ಧಗಳನ್ನು ಕಂಡು ತಳೆಯುವ ಭಾವವಾಗಿದೆ ಮತ್ತು ಮನಸ್ಥಿತಿಯಾಗಿದೆ. ಓಗ ತಲ್ಲಣಗೊಂಡ ಮನಸ್ಸುಗಳು

ಕ್ರಿಯಾಶೀಲವಾಗುವುದು ಅಥವಾ ಜಡಗೊಳ್ಳುವುದು ಆಯಾ ಕಾಲದ ಒತ್ತಡ ಪರಿಸ್ಥಿತಿಗಳನ್ನವಲಂಬಿಸಿದೆ. ಈ ಹಿನ್ನೆಲೆಯಲ್ಲಿ ಅರ್ಥೈಸಿದಾಗ ಮಾತ್ರ ತತ್ವಪದಕಾರರನ್ನು ನಾವು ವಸ್ತುನಿಷ್ಠವಾಗಿ ಗ್ರಹಿಸಲು ಸಾಧ್ಯ. ಇಲ್ಲವೆಂದಾದಲ್ಲಿ ಇವರು ಬದುಕಿಗೆ ವಿಮುಖರಾದ ಶುಷ್ಕ ಧಾರ್ಮಿಕ ವ್ಯಕ್ತಿಗಳಾಗಿಬಿಡುವ ಅಪಾಯವಿದೆ.



# ನವಿಲೆ ಜಡೆಶಂಕರ ಲಿಂಗ: ಕೆಲವು ವಿಷಯಗಳು

● ಅ. ಸುಂದರ

**ಪೀಠಿಕೆ**

ನವಿಲೆ(ಕೊಪ್ಪಳ ಜಿಲ್ಲೆ) ಗ್ರಾಮದಲ್ಲಿಯ ಉತ್ತರವಾಹಿನೀ ಕೃಷ್ಣಾ ನದಿ ಬಲದಂಡೆಯ ಮೇಲಿರುವ ಪ್ರಾಚೀನ ಜಡೆಶಂಕರ ದೇವಾಲಯವು ಆ ಪ್ರದೇಶದಲ್ಲಿ ಒಂದು ಕ್ಷೇತ್ರಸ್ಥಳವೆಂದು ಹೆಸರುವಾಸಿಯಾಗಿದೆ. ಮಕರ ಸಂಕ್ರಾತಿ, ಶಿವರಾತ್ರಿ ದಿನಗಳಲ್ಲಿ ಆ ಭಾಗದಲ್ಲಿಯ ಸಾವಿರಾರು ಜನರು ಕೃಷ್ಣಾನದಿಯಲ್ಲಿ ಸ್ನಾನಮಾಡಿ, ಜಡೆಶಂಕರನ ದರ್ಶನ ಮಾಡುತ್ತಾರೆ. (ಪರಂಪರಾನುಗತವಾಗಿ ಬಂದ ಈ ಪ್ರತೀತಿಯನ್ನು ಲಕ್ಷಿಸಿ ಘನ ಸರ್ಕಾರವು ಈ ಗ್ರಾಮದ ಹೊರವಲಯದಲ್ಲಿ ರಸ್ತೆಗೆ "ಸುಕ್ಷೇತ್ರ ಶ್ರೀ ಜಡೆ ಶಂಕರಲಿಂಗ ದೇವಾಲಯ, ನವಲಿ" ಎಂಬ ಅಂಕಿತವುಳ್ಳ ಒಂದು ಮಹಾದ್ವಾರವನ್ನು ನಿರ್ಮಿಸಿದೆ.) ಇನ್ನು ಸ್ವಲ್ಪ ಸಮಯದಲ್ಲೇ ಈ ದೇವಾಲಯವಿರುವ ಸ್ಥಳವು ನದಿಯ ಜಲಾಶಯದಲ್ಲಿ ಮುಳುಗಿ ಹೋಗುವುದರಿಂದ ಈ ದೇವಾಲಯವನ್ನು ಹೇಗಾದರು ಮಾಡಿ ಇದ್ದಲ್ಲಿಯೆ ಸಂರಕ್ಷಿಸಬೇಕೆಂದು ಸ್ಥಳೀಯ ಜನರು ಸರ್ಕಾರವನ್ನು ಬಿನ್ನವಿಸಿಕೊಂಡಿದ್ದರು. ಇವರ ಪ್ರಾರ್ಥನೆಯನ್ನು ಮಾನ್ಯಮಾಡಿ ಕ್ರಮೇಣ ನಾರಾಯಣಪುರ ಜಲಾಶಯ ಕಛೇರಿಯ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು ಈ ದೇವಾಲಯದ ಐತಿಹಾಸಿಕ ಮತ್ತು ಧಾರ್ಮಿಕ ಮಹತ್ವದ ಹಾಗೂ ರಕ್ಷಣಾ ವಿಧಾನದ ಬಗ್ಗೆ ದೇವಾಲಯವನ್ನು ಪರಿಶೀಲಿಸಿ ವರದಿಯನ್ನು ಕೊಡಬೇಕೆಂದು ಬಿಜಾಪುರದ ಕರ್ನಾಟಕ ವಿಶ್ವವಿದ್ಯಾಲಯ ಸ್ನಾತಕೋತ್ತರ ಕೇಂದ್ರದ ನಿರ್ದೇಶಕರನ್ನು ಪತ್ರ ಮುಖೇನ ಕೇಳಿಕೊಂಡಿದ್ದರು. ದಿನಾಂಕ ೨೭.೦೭.೧೯೯೯ ರಂದು ದೇವಾಲಯವನ್ನು ಸಾಧ್ಯವಾದಷ್ಟು ಮಟ್ಟಿಗೆ ಕೂಲಂಕಷವಾಗಿ ಪರಿಶೀಲಿಸಿದೆನು ಮತ್ತು ದೇವಾಲಯದ ಸಂರಕ್ಷಣೆಗೋಸ್ಕರ ಸಂಬಂಧಪಟ್ಟ ಅಧಿಕಾರಿಗಳಿಗೆ ವಿವರವಾದ ವರದಿಯನ್ನು ಸಲ್ಲಿಸಿದೆನು. ಈ ದೇವಾಲಯದಲ್ಲಿಯ ಶಿವಲಿಂಗವು ಶಿಲ್ಪ ಲಕ್ಷಣಗಳಿಂದ ಅಪೂರ್ವವಾದುದರಿಂದ ಮತ್ತು ತತ್ಸಂಬಂಧ ಕೆಲವೊಂದು ಸಾಂಸ್ಕೃತಿಕ ವಿಷಯಗಳು ಕುತೂಹಲಕಾರಿಯಾದುದರಿಂದ ಅವನ್ನು ಇಲ್ಲಿ ವಿವೇಚಿಸಲಾಗಿದೆ.

### ದೇವಾಲಯ: ಪರಿಸರ

ಈ ದೇವಾಲಯದ ಸುತ್ತಮುತ್ತಲಿನ ನಿವೇಶನದ ಪರಿಶೀಲನೆಯಲ್ಲಿ ಇದರ ಈಶಾನ್ಯ ದಿಕ್ಕಿಗೆ ಒಂದು ಪ್ರಾಚೀನ ಗ್ರಾಮವಿದ್ದ ಕುರುಹುಗಳು ಅಲ್ಲಲ್ಲಿ ಕಾಣಸಿದವು. ನೆಲದ ಮೇಲೆ ಅಲ್ಲಲ್ಲಿ ಬೂದಿ ಮಿಶ್ರಿತ ಮಣ್ಣು, ಗಡಿಗೆ ಮಡಿಕೆ ಪಾತ್ರೆಗಳ ಚೂರುಗಳು ಇವೆ. ಅವಶೇಷಗಳು ಸುಮಾರು ೧೦-೧೨ನೇ ಶತಮಾನದವೆಂದು ಪುರಾತತ್ವ ದೃಷ್ಟಿಯಿಂದ ಹೇಳಬಹುದು. ಅಂದರೆ ಇದಕ್ಕೂ ಪ್ರಾಚೀನ ಕಾಲದಿಂದ ಇಲ್ಲಿ ಒಂದು ಸಣ್ಣ ಗ್ರಾಮವಿದ್ದಿರಬೇಕು. ಇದರ ಪ್ರಾಚೀನತೆ ಮತ್ತು ಜನರ ಜೀವನ ಶೈಲಿಯನ್ನು ನೆಲೆಯ ಪುರಾತತ್ವ ಉತ್ಖನನದಿಂದ ತಿಳಿಯಲು ಸಾಧ್ಯ. ಜಡೆ ಶಂಕರ ದೇವಾಲಯದ ಅತ್ಯಂತ ಪ್ರಾಚೀನ ವಾಸ್ತುಶಿಲ್ಪ ಭಾಗಗಳು ಕಲ್ಯಾಣ ಚಾಲುಕ್ಯ ಶೈಲಿಯಲ್ಲಿವೆ. ಇದರ ಕಾಲಮಾನ ಸುಮಾರು ೧೨ನೇ ಶತಮಾನ. ಸಮೀಪದಲ್ಲಿ ಜನವಸತಿ ಇದ್ದ ಕಾಲದಲ್ಲಿಯೆ ಈ ದೇವಾಲಯ ನಿರ್ಮಾಣವಾಯಿತೆಂಬುದು ಸ್ಪಷ್ಟ. ಆದರೆ ದೇವಾಲಯವು ೧೧೧೪ರಕ್ಕಿಂತಲೂ ಪೂರ್ವದಲ್ಲಿತ್ತೆಂದು ಇದರ ಒಂದು ಶಿಲಾ ಶಾಸನದಿಂದ ತಿಳಿಯುತ್ತದೆ. ಇತ್ತೀಚೆಗೆ ಸ್ಥಳಾಂತರಿಸಲ್ಪಟ್ಟ ನವಿಲೆ ಗ್ರಾಮವು ಈ ಪ್ರಾಚೀನ ನೆಲೆಯ ಸಮೀಪದಲ್ಲಿತ್ತು.

### ದೇವಾಲಯ: ವಾಸ್ತುಶಿಲ್ಪ

ದೇವಾಲಯವು ಪೂರ್ವಾಭಿಮುಖವಾಗಿದೆ. ಕಾಲಾಂತರದಲ್ಲಿ ಇದರ ಬಹುಭಾಗಗಳು ಹಾಳುಬಿದ್ದವು. ಸುಮಾರು ಹದಿನೆಂಟನೇ ಶತಮಾನದ ಆದಿಭಾಗದಲ್ಲಿ ದೇವಾಲಯದ ಉಳಿದ ಭಾಗಗಳಾದ ಗರ್ಭಗೃಹ ಮತ್ತು ಅಂತರಾಳದ ಮೇಲೆ ಕಲ್ಲಿನ ಛತ್ತನ್ನು ಹಾಕಿಸಿ ಗರ್ಭಗೃಹದ ಮೇಲೆ ಇಟ್ಟಿಗೆ ಮತ್ತು ಸುಣ್ಣಗಾರೆಯ ಶಿಖರವನ್ನು ಏರಿಸಲಾಯಿತು. ಶಿಖರವು ಆಗಲೇ ರೂಢಿಬದ್ಧವಾಗಿ ಬಂದ ಕುಬ್ಜ ಗುಮ್ಮಟಾಕಾರದಲ್ಲಿದ್ದು ಬಿಜಾಪುರದ ಆದಿಲ್ ಶಾಹಿ ಶೈಲಿಯಲ್ಲಿದೆ.

ದೇವಾಲಯದ ಭಗ್ನಾವಶೇಷಗಳಿಂದ ಇದು ಹಿಂದೆ ಒಂದು ಭವ್ಯ ಕಟ್ಟಡವಾಗಿತ್ತೆಂದು ಹೇಳಬಹುದು. ಚೌಕೋನ ಗರ್ಭಗೃಹ, ಅಂತರಾಳ, ವಿಶಾಲವಾದ ಸಭಾಮಂಟಪ ಮತ್ತು ದಕ್ಷಿಣ ಹಾಗೂ ಪೂರ್ವ ದಿಕ್ಕುಗಳಿಗೆದುರಾಗಿ ಒಂದೊಂದು ಮುಖಮಂಟಪಗಳಿಂದ ಕೂಡಿತ್ತು. ದೇವಾಲಯವು ಆಗಿನ ಕಾಲದಲ್ಲಿ ಹೆಚ್ಚಾಗಿ ಅನುಸರಿಸುತ್ತಿದ್ದ 'ವೇಸರ' ವಾಸ್ತುಶಿಲ್ಪ ಮಾದರಿಯಲ್ಲಿತ್ತು. ಕಾಲಾಂತರದಲ್ಲಿ ಶಿಖರ, ಗರ್ಭಗೃಹ, ಅಂತರಾಳ, ಸಭಾಮಂಟಪಗಳ ಛತ್ತು, ನಡುಗಂಬಗಳು, ಪೂರ್ವ ದಿಕ್ಕಿನ ಮುಖಮಂಟಪ ಮತ್ತು ಗೋಡೆಗಳು ಹಾಳಾಗಿ ಹೋದವು. ದಕ್ಷಿಣ ದಿಕ್ಕಿನ ಮುಖಮಂಟಪದ ದ್ವಾರ ಶಾಖೆಗಳು, ಅಧಿಷ್ಠಾನವು ಮಾತ್ರ ಉಳಿದಿವೆ. ಸಭಾಮಂಟಪದ ಗೋಡೆಗಳು ದುಸ್ಥಿತಿಯಲ್ಲಿವೆ ಮತ್ತು ವಾಯುವ್ಯ ದಿಕ್ಕಿನ ನಡುಗಂಬದ ಹೊರತಾಗಿ ಯಾವ ನಡುಗಂಬಗಳು ಉಳಿದಿಲ್ಲ. ಆದ್ದರಿಂದ ಮೇಲೆ ಹೇಳಿದಂತೆ ಸುಮಾರು ೨೦೦ ವರ್ಷಗಳ ಹಿಂದೆ ಜೀರ್ಣೋದ್ಧಾರ ಮಾಡಲಾಯಿತು.

ಛತ್ತು, ಕಂಬ, ಬಾಗಿಲು, ಅಧಿಷ್ಠಾನದ ಭಾಗಗಳು ಅಲ್ಲಲ್ಲಿ ಚೆಲ್ಲಾಪಿಲ್ಲಿಯಾಗಿ ಬಿದ್ದಿವೆ. ದೇವಾಲಯದ ಉಳಿದ ಭಾಗ ಮತ್ತು ಬಿದ್ದಿರುವ ವಾಸ್ತು ಶಿಲ್ಪಾವಶೇಷಗಳಿಂದ, ಒಂದೆ ಈ ಕಲ್ಯಾಣ ಚಾಲುಕ್ಯ ಶೈಲಿಯ ದೇವಾಲಯವು ಹೇಗಿದ್ದಿತ್ತೆಂಬುದನ್ನು ಸರಿಯಾಗಿ ಕಲ್ಪಿಸಿಕೊಳ್ಳಲು ಸಾಧ್ಯ. ವಿನ್ಯಾಸದಲ್ಲಿ, ಬಹುಮಟ್ಟಿಗೆ ಚೌಡಯ್ಯದಾನಪುರದ(ಹಾವೇರಿ ಜಿಲ್ಲೆ) ಮುಕ್ತೇಶ್ವರ ದೇವಾಲಯದ ಮಾದರಿಯಂತಿದ್ದಿರಬೇಕು.

ಚೌಕೋನ ಗರ್ಭಗೃಹವು ವಿಶಾಲವಾಗಿದೆ. ಇದರ ಈಗಿನ ಛತ್ತು ನಕ್ಷತ್ರಾಕಾರದ ವಿನ್ಯಾಸದಲ್ಲಿದೆ. ಮೂಲೆಗಳಲ್ಲಿ ಮಾತ್ರ ಒಂದೊಂದು ಸರಳ ಕಂಬವಿದೆ. ನೆಲಕ್ಕೆ ಸಿಮೆಂಟು ಮಾಡಲಾಗಿದೆ. ಮಧ್ಯದಲ್ಲಿ ಕಟೆದ ಕಲ್ಲಿನ ಒಂದು ಬೃಹತ್ ಶಿಲಾ ಪೀಠವಿತ್ತು. ಆದರೆ ಮೇಲ್ಭಾಗವು ಹಾಳಾಗಿ ಹೋಗಿದ್ದು ಉಳಿದಿದ್ದ ಭಾಗದ ಮೇಲೆ ಅನಂತರ ಕಾಲದ ಶಿಲಾ ಪೀಠವನ್ನಿಡಲಾಗಿದೆ. ಇವೆರಡು ಶೈಲಿಯಿಂದ ಭಿನ್ನವಾಗಿವೆ. ಮೇಲಿನ ಪೀಠದ ಕೇಂದ್ರದಲ್ಲಿ ಮೂಲ ಜಡೆಯ ಶಿವಲಿಂಗವಿದೆ. ಬಹುಶಃ ಜೀರ್ಣೋದ್ಧಾರ ಕಾಲದಲ್ಲಿ ಮೇಲಿನ ಪೀಠವನ್ನು ಹಾಗೆ ಇಟ್ಟಿರಬಹುದು. ಲಿಂಗ ಪೀಠದ ಮುಂದೆ ಒಂದು ಸಾಧಾರಣ ಶೈಲಿಯ ಸಣ್ಣ ನಂದಿ ವಿಗ್ರಹವಿದೆ. ಬಹುಶಃ ಇದನ್ನು ಆ ಕಾಲದಲ್ಲಿಯೆ ಮಾಡಿಸಿ ಇರಿಸಲಾಯಿತು. ಗರ್ಭಗುಡಿಯ ದ್ವಾರಬಂಧವು ದೊಡ್ಡದಾಗಿದೆ. ಇದಕ್ಕೆ ಬದಿಗಳಲ್ಲಿ ಒಂದೊಂದು ಕಡೆ ಎಂಟು ಶಾಖೆಗಳಿವೆ. ಹೊರಬದಿಯಿಂದ ಅವುಗಳು ಪದ್ಮ ಶಾಖೆ, ಸಿಂಹ ಶಾಖೆ, ದಂಪತಿ ಶಾಖೆ, ಲತಾ ಶಾಖೆ, ಮಾನುಷ ಶಾಖೆ, ಸರಳ ಎರಡು ಶಾಖೆಗಳು ಮತ್ತು ರತ್ನ ಶಾಖೆ. ಶಾಖೆಗಳ ಬುಡದಲ್ಲಿ ಒಂದು ಕೈಯಲ್ಲಿ ಪದ್ಮವನ್ನು ಹಿಡಿದ ಮೂರು ಸುವಾಸಿನಿಯರು, ಶೈವ ದ್ವಾರಪಾಲ ಮತ್ತು ಚೌರಿಯನ್ನು ಹಿಡಿದ ಸ್ತ್ರೀಯ ಉಬ್ಬುಶಿಲ್ಪಗಳಿವೆ. ಮೇಲ್ಭಾಗದ ಅಡ್ಡ ಜಂತಿಯ ಲಲಾಟ ಬಿಂಬದಲ್ಲಿ, ಸಣ್ಣ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಈ ಅಡ್ಡ ಜಂತಿಯ ಮೇಲಿದ್ದ ಉತ್ತಿರಾಂಗವು ಈಗ ಇಲ್ಲ. ಅಂತರಾಳ ಮತ್ತು ಸಭಾಮಂಟಪವು ಸರಳವಾಗಿವೆ. ಎರಡನೆಯದು ವಿಶಾಲವಾಗಿದೆ. ಇದೊಂದು ನವರಂಗ. ಆ ಕಾಲದ ಇಂಥ ಮಾದರಿಯ ದೇವಾಲಯದಲ್ಲಿರುವಂತೆ ಇದರಲ್ಲಿಯೂ ಮಧ್ಯದ ಅಂಕಣದ ನೆಲವು ಸುತ್ತಲಿನ ಅಂಕಣಗಳ ನೆಲಕ್ಕಿಂತಲೂ ಸ್ವಲ್ಪ ಎತ್ತರವಾಗಿದೆ. ನವರಂಗದ ಉಳಿದ ಒಂದು ಕಂಬದಲ್ಲಿ ಕೆಳಗಿನಿಂದ ಮೇಲಕ್ಕೆ ಪೀಠ, ಕಾಂಡ, ಪದ್ಮಬಂಧ, ಕಲಶ ಮತ್ತು ತಾಡಿ ಭಾಗಗಳಿವೆ. ಇದರ ಮೇಲಿನ ಕುಂಭ, ಇದಜೆ ಮತ್ತು ಫಲಕಗಳು ಉಳಿದಿಲ್ಲ. ಬದಲಾಗಿ ಜೀರ್ಣೋದ್ಧಾರ ಕಾಲದಲ್ಲಿ ಮತ್ತೆ ಈ ಭಾಗಗಳನ್ನು ಮಾಡಿಸಿ ಹಾಕಲಾಗಿದೆ. ಅಧಿಷ್ಠಾನವು, ಜಗತಿ, ಉಪಾನ, ಕಂಠ, ಕುಮುದ, ಕಂಠ ಮತ್ತು ಕಪೋತ ಅಡ್ಡಪಟ್ಟಿಕೆಗಳಿಂದ ಕೂಡಿದೆ. ಗರ್ಭಗುಡಿ ಮತ್ತು ಅಂತರಾಳದ ಅಧಿಷ್ಠಾನವು ಮಾತ್ರ ಉಳಿದಿವೆ. ದಕ್ಷಿಣದ ಮುಖಮಂಟಪದ ದ್ವಾರಬಂಧದ ಶಾಖೆಗಳು ಮಾತ್ರ ಉಳಿದಿವೆ. ಗರ್ಭಗುಡಿಯ ಮೇಲಿನ ಇಟ್ಟಿಗೆ-ಸುಣ್ಣಗಾರೆ ಶಿಖರದ ತಳಗಳು ಅಸ್ಪಷ್ಟವಾಗಿವೆ. ತುದಿಯ ತಳದ ಮೇಲೆ ಕೆಳಭಾಗದಲ್ಲಿ ಸುತ್ತಲೂ ಪದ್ಮದಳಗಳಿಂದ

ಅಲಂಕೃತವಾದ ಕುಬ್ಜ ಗುಮ್ಮಟವಿದೆ. ಇವರ ಮೇಲೆ ಪಂಚಲೋಹ ಕಲಶವಿದೆ.

**ಮೂರ್ತಿಶಿಲ್ಪ**

ಸಭಾಂಗಣದಲ್ಲಿಯ ಸ್ಥಾನಪಲ್ಲಟವಾದ ಗಣೇಶ ಮತ್ತು ಸೂರ್ಯದೇವರ ಭಗ್ನಮೂರ್ತಿ ಶಿಲ್ಪಗಳನ್ನು ಬಿಟ್ಟರೆ, ಬೇರೆ ಯಾವ ಶಿಲ್ಪಗಳು ಕಾಣಬರಲಿಲ್ಲ.

**ಜಡೆಯ ಶಂಕರಲಿಂಗ**

ಗರ್ಭಗುಡಿಯಲ್ಲಿಯ ಜಡೆಯ ಶಂಕರ ಲಿಂಗವು ಮಾತ್ರ ತುಂಬಾ ವಿಶಿಷ್ಟವಾಗಿದೆ. ಸಾಮಾನ್ಯವಾಗಿ ಲಿಂಗದ ಮುಂಬದಿಯಲ್ಲಿ ಊರ್ಧ್ವ ರೇಖೆಯ ತುದಿಯಿಂದ ಎರಡೂ ಬದಿಗಳಲ್ಲಿ ಸ್ವಲ್ಪ ಇಳಿಬಿದ್ದು ಲಿಂಗಕ್ಕೆ ಸುತ್ತು ಹಾಕಿದಂತಿರುವ ಬ್ರಹ್ಮ ಸೂತ್ರ ರೇಖೆಗಳು ಇರುತ್ತವೆ. ಆದರೆ ಈ ಲಿಂಗದಲ್ಲಿ ಮಾತ್ರ ಈ ಲಕ್ಷಣವಿಲ್ಲದಿರುವುದು ಗಮನಾರ್ಹ. ಋಷಿಗಳು, ಸನ್ಯಾಸಿಗಳು ಪೂಜೆ ಮಾಡುವಂಥ ಆರ್ಷ ಶಿವಲಿಂಗಗಳಿಗೆ ಇಂಥ ಲಕ್ಷಣ ಗಳಿರುವುದಿಲ್ಲ. ಪ್ರಾಯಶಃ ಋಷಿಗಳಿಂದ ಈ ಲಿಂಗವು ಪ್ರತಿಷ್ಠಾಪಿಸಲ್ಪಟ್ಟು ಅವರಿಂದ ಪೂಜೆಗೊಳ್ಳುತ್ತಿದ್ದಿರಬಹುದು.

ಅತ್ಯಂತ ವಿಶಿಷ್ಟ ಸಂಗತಿಯೆಂದರೆ, ಲಿಂಗದ ನಡು ನೆತ್ತಿಯಿಂದ ಹಿಂಬದಿಗೆ ಜಟೆಯಿದ್ದು ಎಳೆ ಎಳೆಯಾಗಿ ಹರಡಿ ಇಳಿಬಿದ್ದಿರುವುದು. ಒಟ್ಟು ಹನ್ನೊಂದು ಎಳೆಗಳಿರುವುದೂ ಅರ್ಥಗರ್ಭಿತವಾಗಿರುವಂತೆ ಕಾಣುತ್ತದೆ. ಇದು ಏಕಾದಶ ರುದ್ರದ ಸಂಕೇತವಾಗಿರಬಹುದೆ? ಇದು ಹೇಗೆ ಇರಲಿ, ನಿರಾಕಾರ ಸಂಕೇತವಾದ ಶಿವಲಿಂಗಕ್ಕೆ ಶಿವನ ಸಾಕಾರ ಮೂರ್ತಿಯ ಲಕ್ಷಣಗಳಲ್ಲಿ ಒಂದಾದ ವಿಶಿಷ್ಟ ಜಡೆಯನ್ನು ತೋರಿಸಿರುವುದು ಅತ್ಯಂತ ಅಪರೂಪದ್ದಾಗಿದೆ. ನನಗೆ ತಿಳಿದ ಮಟ್ಟಿಗೆ ಇಂಥ ವಿಶಿಷ್ಟ ಲಕ್ಷಣವುಳ್ಳ ಲಿಂಗಗಳು ಬೇರೆಡೆಯಲ್ಲಿ ಇದ್ದುದರ ಬಗ್ಗೆ ವರದಿ ಇದ್ದಂತಿಲ್ಲ. ಈ ಅಂಶವನ್ನು ಮತ್ತು ಯಾವ ಶೈವಾಗಮದಲ್ಲಿ ಇಂಥ ಶಿವಲಿಂಗದ ಪರಿಕಲ್ಪನೆಯನ್ನು ವಿವರಿಸಿದೆ ಎಂಬುದನ್ನು ಪರಿಶೀಲಿಸಬೇಕಾಗಿದೆ. ಲಿಂಗಕ್ಕೆ ಜಡೆಯನ್ನು ತೋರಿಸಿದ್ದರಿಂದ ಇದು ಜಡೆಯ ಶಂಕರನೆಂದು ಸಹಜವಾಗಿಯೇ ಪ್ರಸಿದ್ಧ ವಾಗಿದೆ. ದೇವಾಲಯಕ್ಕೆ ಸಂಬಂಧಿಸಿದ ಶಿಲಾ ಶಾಸನಗಳಲ್ಲೂ ಹಾಗೆಯೆ ವರ್ಣಿಸಲಾಗಿದೆ.

ಈ ವಿಷಯದಲ್ಲಿ ದೇವಾಲಯಕ್ಕೆ ಸಂಬಂಧಿಸಿದ ೧೧೧೪ನೇ ವರ್ಷದ ಶಿಲಾ ಶಾಸನದ ಒಂದು ಅಸಾಮಾನ್ಯ ಉಲ್ಲೇಖವು ಸಹಾಯಕಾರಿಯಾಗಿದೆ (ಅದನ್ನು ಮುಂದೆ ವಿವೇಚಿಸಲಾಗಿದೆ). ಲಿಂಗದ ಆಕಾರ ಮತ್ತು ಶೈಲಿಯು ಅದು ೯ನೇ ಶತಮಾನ ಅಂತ್ಯ ಭಾಗ ಇಲ್ಲವೆ ೧೦ನೇ ಶತಮಾನದ ಆದಿ ಭಾಗದ್ದೆಂದು ತರ್ಕಿಸಬಹುದು.

**ಪಾದುಕೆ ಗುಡಿ**

ದೇವಾಲಯದ ಎಡ(ದಕ್ಷಿಣ) ಬದಿಗೆ ಕಲ್ಲಿನ ಒಂದು ಸಣ್ಣ ಚೌಕೋನ ಗುಡಿಯಿದೆ.

ದೇವಾಲಯದ ಬಿದ್ದು ಹೋದ ಭಾಗಗಳೂ ಇದರ ನಿರ್ಮಿತಿಯಲ್ಲಿರುವುದರಿಂದ ಇದನ್ನು ಈಚಿನ ಕಾಲದಲ್ಲಿ ಕಟ್ಟಲಾಯಿತೆಂದು ಹೇಳಬಹುದು. ಒಳಗೆ ಒಂದು ಶಿಲಾ ಪಾದುಕೆ ಮತ್ತು ಒಂದು ಸಣ್ಣ ನಂದಿ ಶಿಲ್ಪ ಇವೆ. ಮೊದಲು ಕೇವಲ ಪಾದಗಟ್ಟೆಯಿದ್ದಿರಬೇಕು. ಈಚೆಗೆ ಅಲ್ಲಲ್ಲಿ ಬಿದ್ದ ಕಲ್ಲುಗಳಿಂದ ಗುಡಿಯನ್ನು ನಿರ್ಮಿಸಲಾಯಿತು.

**ಶಿಲಾ ಶಾಸನಗಳು**

ಈ ದೇವಾಲಯಕ್ಕೆ ಸಂಬಂಧಿಸಿದ ೩ ಶಿಲಾ ಶಾಸನಗಳು ಲಭ್ಯವಾಗಿವೆ. ಈಗ ಸಣ್ಣ ಗುಡಿಯ ಮುಂದೆ ಒಂದಿದೆ. ದೇವಾಲಯದ ಆಗ್ನೇಯ ದಿಕ್ಕಿಗೆ ಇನ್ನೊಂದು ಬಿದ್ದಿದೆ. ಮೊದಲನೆಯದರಲ್ಲಿ ಅಕ್ಷರಗಳು ಸವೆದಿವೆ. ಎರಡನೆಯದು ತಕ್ಕಮಟ್ಟಿಗೆ ಸುಸ್ಥಿತಿಯಲ್ಲಿದೆ. ಇದು ಮಧ್ಯೆ ತೂತಿಲ್ಲದ ಪ್ರನಾಳ ಸಹಿತ ಚೌಕೋನ ಲಿಂಗ ಪೀಠಾಕಾರದಲ್ಲಿರುವುದು ಕುತೂಹಲಕಾರಿಯಾಗಿದೆ. ಇವುಗಳಲ್ಲಿ ೧೧೧೪ರಿಂದ ೧೩೦೮ರವರೆಗಿನ ಒಟ್ಟು ೬ ಶಾಸನಗಳಿವೆ. ೧೧೧೪ನೇ ಶಾಸನ ಮಾತ್ರ ಲಿಂಗ ಪೀಠಾಕಾರದ ಒಂದು ಕಲ್ಲು ಹಲಗೆಯ ಮೇಲಿದೆ. ೧೦೬೬ ಮತ್ತು ೧೧೩೫ರ ಶಾಸನಗಳು ಇನ್ನೊಂದು ಕಲ್ಲಿನ ಮೇಲೆಯೂ ೧೧೯೯, ೧೧೨೮ ಮತ್ತು ೧೩೦೮ರವು ಮತ್ತೊಂದು ಕಲ್ಲಿನ ಮೇಲೆಯೂ ಇವೆ. ಪ್ರತಿಯೊಂದು ಶಾಸನದಲ್ಲಿಯೂ ಜಡೆಯ ಶಂಕರ ದೇವರ ಉಲ್ಲೇಖವು ತಪ್ಪದೆ ಇದೆ. ಕಾಲಾನುಕ್ರಮವಾಗಿ ಶಾಸನಗಳ ಸಾರಾಂಶ ಹೀಗಿವೆ:

೧. ಕಲ್ಯಾಣ ಚಾಲುಕ್ಯ ಚಕ್ರವರ್ತಿ ೫ನೇ ವಿಕ್ರಮಾದಿತ್ಯ(ತ್ರಿಭುವನಮಲ್ಲದೇವ)ನ ಆಳ್ವಿಕೆ ಕಾಲ. ಯುವರಾಜ ಇಮ್ಮಡಿ ಜಯಸಿಂಹನು ಎಡೆತೊರೆ ೨೦೦೦(ಈಗಿನ ರಾಯಚೂರು ಕೊಪ್ಪಳ ಜಿಲ್ಲೆಗಳ ಬಹುಭಾಗ) ರಾಜ್ಯ ಘಟಕವನ್ನು ಆಳುತ್ತಿದ್ದಾಗ, ಪರಿಧಾವಿ ಸಂವತ್ಸರ ಕಾರ್ತಿಕ ಬಹುಳ ಅಷ್ಟಮಿ ಸೋಮವಾರ(=೧೦ ನವೆಂಬರ್ ೧೧೧೨)ದಂದು ನವಿಲೆ ತೀರ್ಥಸ್ಥಾನದ "ಜಡೆಯ ಶಂಕರದೇವರ ದಕ್ಷಿಣ ಮೂರ್ತಿಯೋಳ್ಳಿವ ಸಮಾನರದ" ಇವರ ರಾಜಗುರು ಭಟ್ಟಾರಕರ ಪಾದುಕಂಗಳ ಪೂಜಾನಿಮಿತ್ತಂ, ಕರಡಿಕಲ್ಲಿನ ಶ್ರೀಮತ್ ಜೋಗಿ ಶಿವಾಚಾರ್ಯರು ದೇವಾಲಯದ ಸ್ಥಾನಪತಿಗಳಾದ ಮಾಣಿಕ ಬಳಾರ, ತ್ರಿಭುವನ ಬಳಾರ ಮೊದಲಾದವರಿಗೆ ೬ ಗದ್ಯಾಣವನ್ನು ಕೊಟ್ಟು, ಭೂಮಿಯನ್ನು ಕೊಂಡು ಶಕವರ್ಷ ೯೩೬ ಆನಂದ ಸಂವತ್ಸರ ವೈಶಾಖ ಶುದ್ಧ ೩ ಸೋಮವಾರದಂದು(=೫ ಏಪ್ರಿಲ್ ೧೧೧೪) ದಾನ ಮಾಡಿದರು.

೨. ಚಾಲುಕ್ಯ ಅರಸು ೧ನೇ ಸೋಮೇಶ್ವರನ (ತ್ರೈಲೋಕ್ಯಮಲ್ಲ) ಆಳ್ವಿಕೆಯ ಕಾಲ. ಇವನ ಮನ್ನೆಯ ಕದಂಬ ನಾಗವರ್ಮರಸನು ಕರಡಿಕಲ್ ೩೦೦ ವಿಭಾಗದಲ್ಲಿಯ ನವಿಲೆ ಮನ್ನೆಯವನ್ನು ಜಡೆಯ ಶಂಕರದೇವರಿಗೆ ಪರಾಭವ ಸಂವತ್ಸರ(ಅಧಿಕ) ಆಷಾಢ ಅಮಾವಾಸ್ಯ ಭಾನುವಾರ ದಕ್ಷಿಣಾಯನ ಸಂಕ್ರಾಂತಿ(=೨೫-೬-೧೦೬೬)ಯಂದು ಕೊಟ್ಟು ದೇವಾಲಯದ ತಪೋಧನರಿಗೆ ಅದನ್ನು ವಹಿಸಿದನು. ಚೋಳ ರಾಜ್ಯದ ಚಕ್ರವರ್ತಿ ರಾಜರಾಜನನ್ನು

ಸೋಲಿಸಿದ ಚಾಲುಕ್ಯ ಸೋಮೇಶ್ವರನ ಮಹಾದಂಡನಾಯಕ ಮಾರ ಪೆರುಮಾಳದೇವನ ಹೆಸರನ್ನೂ ಈ ಶಾಸನದಲ್ಲಿ ಉಲ್ಲೇಖಿಸಿದೆ.

೩. ೬ನೇ ವಿಕ್ರಮಾದಿತ್ಯ(ತ್ರಿಭುವನಮಲ್ಲ) ಅರಸನ ಆಳ್ವಿಕೆ ಕಾಲ. ಇವನ ಮಹಾಮಂಡಲೇಶ್ವರ ಕದಂಬ ಭೂತರಸನು ಜಡೆ ಶಂಕರದೇವರ ದೇವಾಲಯಕ್ಕೆ ಚಾಲುಕ್ಯ ವಿಕ್ರಮ ಆಳ್ವಿಕೆ ವರ್ಷ ೪೪. ವಿಕಾರಿ ಸಂವತ್ಸರ ಕಾರ್ತಿಕ ಸು.೧೩. ಬೃಹಸ್ಪತಿವಾರ(=೦೮-೧೦-೧೧೧೯. ಆದರೆ ಅಂದು ಶನಿವಾರ)ದಂದು ಚಿನ್ನದ ಕಲಶವನ್ನು ಏರಿಸಿದನು; ನದಿ ದಂಡೆಯ ಮೇಲೆ ತ್ರೈಪುರುಷ(=ಬ್ರಹ್ಮ-ವಿಷ್ಣು-ಮಹೇಶ್ವರ) ದೇವರನ್ನು ಸ್ಥಾಪಿಸಿ, ದೇವರ ಪೂಜೆಗೆ ಕರಡಿಕಲ್ ೩೦೦ದಲ್ಲಿಯ ಮುತ್ತಗೆ ಗ್ರಾಮವನ್ನು ದಾನ ಮಾಡಿದನು. ದೇವಾಲಯವನ್ನು ನೋಡಿಕೊಳ್ಳಲು ಜಕ್ಕೆಯ ಶಣಂಗಿ ಹಾಗೂ ಇತರ ಮೂರು ಜನರಿಗೆ ಭೂಮಿಯನ್ನು ದಾನವನ್ನು ಮಾಡಿದನು.

೪. ಚಾಲುಕ್ಯ ಅರಸು ಮುಮ್ಮಡಿ ಸೋಮೇಶ್ವರನ (ಭೂಲೋಕಮಲ್ಲ) ಆಳ್ವಿಕೆ ಕಾಲ. ಅರಸನು ನವಿಲೆಯ ಕುಪ್ಪದಿಂದ ಆಳುತ್ತಿರುವಾಗ, ಅವನ ಆಳ್ವಿಕೆ ೩ನೇ ವರ್ಷದಂದು ಕೀಲಕ ಸಂವತ್ಸರ ಚೈತ್ರ ಶು.೪ ಸೋಮವಾರ ಸಂಕ್ರಮಣ(=೭-೩-೧೧೨೯, ಆದರೆ ಅಂದು ಬುಧವಾರ)ದಂದು ಕರಡಿಕಲ್ ೩೦೦ದಲ್ಲಿಯ ಒಂದು ಗ್ರಾಮವನ್ನು ಜಡೆಯ ಶಂಕರ ದೇವರ ದೇವಾಲಯದ ಜೀರ್ಣೋದ್ಧಾರಕ್ಕೆ ಮತ್ತು ದೇವರ ಪೂಜೆಗೆ ದಾನ ಮಾಡಿದನು.

೫. ಅದೇ ಅರಸನ ಆಳ್ವಿಕೆ ಕಾಲ. ಇವನ ಮಹಾ ಮಂಡಲೇಶ್ವರ(ಭೂತರಸನ ಮಗ) ಮಾಧವತ್ತಿಯರಸನು ತ್ರೈಪುರುಷ ದೇವಾಲಯದ ಹತ್ತಿರ ಭೂಲೋಕಮಲ್ಲನ ಆಳ್ವಿಕೆ ವರ್ಷ ೧೦, ರಾಕ್ಷಸ ಸಂವತ್ಸರ ಚೈತ್ರ ಶುದ್ಧ ೫ ಬೃಹಸ್ಪತಿವಾರ(=೨೧-೦೩-೧೧೩೫)ದಂದು ಜಲಶಯನ(ಅನಂತಶಯನ?)ದೇವರನ್ನು ಸ್ಥಾಪಿಸಿದನು. ತನ್ನ ತಂದೆಯು ಜಡೆಯ ಶಂಕರ ದೇವಾಲಯಕ್ಕೆ ಕೊಟ್ಟ ಮುತ್ತಗೆ ಗ್ರಾಮ ದಾನವನ್ನು ದೃಢೀಕರಿಸಿದನು. ಜಾವೂರಿನಲ್ಲಿಯ ಛತ್ರಕ್ಕೆ, ಶಾಲೆಗೆ ಹಾಗೂ ದೇವಾಲಯವನ್ನು ನೋಡಿಕೊಳ್ಳುವ "ನವಿಶ್ವ"ರಿಗೆ ಭೂಮಿದಾನ ಮಾಡಿದನು.

೬. ಈ ಶಾಸನವು ತುಂಬಾ ಹಾಳಾಗಿದೆ. "ಜಡೆಯ ಶಂಕರದೇವ" ಮತ್ತು "ಸರಸ್ವತಿ ಮಠ" ಈ ಪದಗಳು ಮಾತ್ರ ಸ್ಪಷ್ಟವಾಗಿ ಕಾಣುತ್ತವೆ.

## ಕೆಲವು ಸಾಂಸ್ಕೃತಿಕ ವಿಷಯಗಳು

### ದೇವಾಲಯ ನಿರ್ಮಾಣ

ಕಲ್ಯಾಣ ಚಾಲುಕ್ಯ 'ಎಡೆತೊರೆ ೨೦೦೦' ರಾಜ್ಯ ಘಟಕದ ಕರಡಿಕಲ್ ೩೦೦ ವಿಭಾಗದಲ್ಲಿದ್ದ ನವಿಲೆ ಗ್ರಾಮದ ಉತ್ತರಭಾಗದ ಕೃಷ್ಣಾ ನದಿ ದಂಡೆಯ ಪರಿಸರದಲ್ಲಿರುವ ಜಡೆಯ ಶಂಕರ ದೇವಾಲಯವು, ಕ್ರಿ.ಶ. ೧೧೦೦ಕ್ಕಿಂತಲೂ ಪ್ರಾಚೀನವಾದ

'ತೀರ್ಥಸ್ಥಾನ'ವೆಂದೇ ಪ್ರಸಿದ್ಧಿಯಾಗಿತ್ತು. ಶಿವಲಿಂಗದ ಆಕಾರ, ಲಕ್ಷಣ ಮತ್ತು ಶೈಲಿಯಿಂದ ಇದನ್ನು ಬಹುಶಃ ೯ನೇ ಶತಮಾನದ ಉತ್ತರ ಭಾಗದಲ್ಲಿ ಕಟ್ಟಲಾಯಿತೆಂದು ಹೇಳಬಹುದು. ಈ ದೇವಾಲಯಕ್ಕೆ ೧೦೬೬ರಲ್ಲಿ ಕರಡಿಕಲ್ ೩೦ ವಿಭಾಗದ ಮನ್ನೆಯ ನಾಗವರ್ಮನು ಚಿನ್ನದ ಕಲಶವನ್ನು ಏರಿಸಿದನು. ೧೧೨೮ರಲ್ಲಿ ಸ್ವತಃ ಚಾಲುಕ್ಯ ಚಕ್ರವರ್ತಿ ಮುಮ್ಮಡಿ ಸೋಮೇಶ್ವರನು ನವಿಲೆಯಲ್ಲಿ ಬೀಡು ಬಿಟ್ಟಾಗ, ಈ ದೇವಾಲಯದ ಜೀರ್ಣೋದ್ಧಾರಕ್ಕೆ ಗ್ರಾಮದಾನ ಮಾಡಿದನು. ಆಗ ಬಹುಶಃ ದೇವಾಲಯದ ಕಟ್ಟಡವು ದುಸ್ಥಿತಿಯಲ್ಲಿತ್ತೆಂದು ಕಾಣುತ್ತದೆ. ರಾಜನ ಗ್ರಾಮದಾನದ ಸಹಾಯದಿಂದ ಸ್ವಲ್ಪ ಹೆಚ್ಚು ಕಡಿಮೆ ಆಗಲೇ ಅದನ್ನು ಪ್ರಚಲಿತ ಶೈಲಿಯಲ್ಲಿ ಪುನರ್ನಿರ್ಮಾಣ ಮಾಡಿರಬೇಕು. ಏಕೆಂದರೆ ಈಗ ಕಾಣುವ ಹಾಳು ಬಿದ್ದಿರುವ ದೇವಾಲಯವು ೧೨ನೇ ಶತಮಾನದ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದೆ. ೧೪ನೇ ಶತಮಾನದ ಆದಿಭಾಗದ ದಶಕಗಳವರೆಗೂ ಇದರ ಮಹತ್ವವು ಶಾಸನಗಳಿಂದ ತಿಳಿಯುತ್ತದೆ. ವಿಜಯನಗರ ಸಾಮ್ರಾಜ್ಯದ ಅಂತ್ಯ ಕಾಲದಲ್ಲಿ ಮತ್ತೆ ದುರವಸ್ಥೆಗೆ ಬಂದಿರುವ ಸಾಧ್ಯತೆ ಹೆಚ್ಚು. ೧೮ನೇ ಶತಮಾನದ ಆದಿ ಭಾಗದಲ್ಲಿ ಪ್ರಾಯಶಃ ಮರಾಠರ ಆಳ್ವಿಕೆ ಕಾಲದಲ್ಲಿ ಇದನ್ನು ಮತ್ತೆ ಜೀರ್ಣೋದ್ಧಾರ ಮಾಡಲಾಯಿತು. ಈಗ ಮತ್ತೆ ದುಸ್ಥಿತಿಯಲ್ಲಿದೆ.

ಈಗ ಈ ದೇವಾಲಯದ ಎಡ ಬದಿಗಿರುವ ಪಾದುಕೆಗುಡಿಯು ಶಾಸನೋಕ್ತ ರಾಜಗುರುಗಳ ಪಾದಗಟ್ಟೆಯಾಗಿರಬಹುದು

## ಜಡೆ ಶಂಕರಲಿಂಗ

ಇಂಥ ತೀರ್ಥಸ್ಥಾನಗಳು ಬೇರೆಡೆಗಳಲ್ಲಿಯೂ ಇವೆ. ಒಂದೊಂದೂ ವಿಶೇಷತೆಯಿಂದ ಹೆಚ್ಚು ಹೆಸರುವಾಸಿಯಾಗಿರಬಹುದು. ಚಾಲುಕ್ಯ ಅರಸು ಇಮ್ಮಡಿ ಜಯಸಿಂಹನ ರಾಜಗುರುಗಳನ್ನು ಆಕರ್ಷಿಸಿದ ಜಡೆಯ ಶಂಕರ ದೇವರು ಅವರಿಗೆ ಮುಕ್ತಿಧಾಮವಾದನು. ಇವರೊಬ್ಬ ಮಹಾನ್ ತಪಸ್ವಿಯೆಂದು ಕಾಣುತ್ತದೆ. ಇದನ್ನು ೧೦೧೪ನೇ ಶಾಸನದಲ್ಲಿ ಮಾರ್ಮಿಕವಾಗಿ ಹಾಗೂ ವೈಶಿಷ್ಟ್ಯಪೂರ್ಣವಾಗಿ ಹೇಳಿದೆ. ಜಡೆ ಶಂಕರಲಿಂಗವನ್ನು ದಕ್ಷಿಣ(ಣಾ?)ಮೂರ್ತಿಯೆಂದು ವರ್ಣಿಸಲಾಗಿದೆ. ಶಿವನ ಹಲವಾರು ರೂಪಗಳಲ್ಲಿ ಒಂದಾದ ದಕ್ಷಿಣಾಮೂರ್ತಿಯು ಅಪರೋಕ್ಷ ಜ್ಞಾನದ ಸಂಕೇತ, ಮುಮುಕ್ಷುಗಳು ಶಿವನನ್ನು ಈ ರೂಪದಲ್ಲಿ ಆರಾಧಿಸುತ್ತಾರೆ. ದಕ್ಷಿಣ ಭಾರತದ ಶೈವ ದೇವಾಲಯಗಳಲ್ಲಿ ಈ ದೇವರ ಮೂರ್ತಿಯಿರುವುದು ಸರ್ವೆ ಸಾಮಾನ್ಯ. ಈ ದೇವರ ಶಿಲ್ಪದಲ್ಲಿ ಜಟಾಭಾರವು ಎದ್ದು ಕಾಣುತ್ತದೆ. ಅದೊಂದು ವಿಶಿಷ್ಟ ಲಕ್ಷಣ. ನವಿಲೆಯ ಶಿವಲಿಂಗದಲ್ಲಿ ಜಟೆಯನ್ನು ರೂಪಿಸಿರುವುದರಿಂದ ಅದು ದಕ್ಷಿಣಾಮೂರ್ತಿ ಪರಿಕಲ್ಪನೆಯನ್ನು ಸಂಕೇತಿಸಬಹುದು. ಆದ್ದರಿಂದಲೆ ಈ ಲಿಂಗವನ್ನು ಜಡೆಯ ಶಂಕರ ದೇವರ ದಕ್ಷಿಣಮೂರ್ತಿ ಎಂದು ವರ್ಣಿಸಲಾಗಿದೆಯೆಂದು ತರ್ಕಿಸಬಹುದು. ಈ ಸಂದರ್ಭದಲ್ಲಿ ಶಂಕರದೇವರ ಎಂಬ ಪದವು ಷಷ್ಠಿ ವಿಭಕ್ತಿಯಲ್ಲಿರುವುದು ಗಮನಾರ್ಹ. ನಿರಾಕಾರ ತತ್ವವನ್ನು ಸೂಚಿಸುವ ಶಿವಲಿಂಗವನ್ನು

ಹೀಗೆ ತೋರಿಸುವುದರಲ್ಲಿ ಇದೊಂದೆ ಮಾದರಿಯಲ್ಲ. ಶಿವನ ಸದ್ಯೋಜಾತ(ಪೃಥ್ವಿ) ಮೊದಲಾದ ಪಂಚತತ್ವಗಳನ್ನು ಸಂಕೇತಿಸುವ ಚತುರ್ಮುಖಿ (ಲಿಂಗ ತುದಿಯು ಈಶಾನ ಅಂದರೆ ಆಕಾಶ ತತ್ವನ್ನು ಸೂಚಿಸುವುದರಿಂದ ಮುಖವನ್ನು ತೋರಿಸಿರುವುದಿಲ್ಲ) ಲಿಂಗದಂತೆ. ಆದರೆ ಇಲ್ಲಿ ಒಂದು ಮೂಲಭೂತ ಪ್ರಶ್ನೆ ಏಳಬಹುದು. ಶಾಸನದಲ್ಲಿಯ "ದಕ್ಷಿಣಮೂರ್ತಿ" ಪದವನ್ನು ಪುರಾಣಗಳಲ್ಲಿ, ಪ್ರತಿಮಾಶಾಸ್ತ್ರದ ಗ್ರಂಥಗಳಲ್ಲಿ ವರ್ಣಿಸಲಾದ ದಕ್ಷಿಣಾಮೂರ್ತಿ ಪರಿಕಲ್ಪನೆಗೆ ಸಮೀಕರಿಸುವುದು ಸರಿಯೆ? ಜಡೆಯ ಶಂಕರ ದೇವರ ದಕ್ಷಿಣಕ್ಕಿರುವ ಮೂರ್ತಿಯೆಂದೇಕೆ ಅರ್ಥೈಸಬಾರದು? ನಿಜ, ಆಗಮೋಕ್ತ ಪ್ರಕಾರ ಕಟ್ಟಿದ ದೇವಾಲಯದ ಪ್ರಾಕಾರದಲ್ಲಿ ಸುತ್ತಲೂ ಗರ್ಭಗುಡಿಯಲ್ಲಿಯ ದೇವರ ಪರಿವಾರ ದೇವರುಗಳ ಗುಡಿಗಳಿರುತ್ತವೆ. ಗರ್ಭಗುಡಿಯ ಗೋಡೆಯ ಹೊರಮೈಯಲ್ಲೂ ದಕ್ಷಿಣ, ಪಶ್ಚಿಮ ಮತ್ತು ಉತ್ತರ ದಿಕ್ಕುಗಳಿಗೆದುರಾಗಿ ಒಂದೊಂದು ದೇವಕೋಷ್ಠವಿದ್ದು ಅದರಲ್ಲಿ ಶಿವ ದೇವಾಲಯವಾಗಿದ್ದರೆ ಗಣೇಶ, ವಿಷ್ಣು ಮತ್ತು ಮಹಿಷಾಸುರಮರ್ದಿನೀ ದುರ್ಗಾ ಮೂರ್ತಿಗಳಿರುತ್ತವೆ. ಆದರೆ ರಾಜಗುರುಗಳು ಮೋಕ್ಷವನ್ನು ಪಡೆದ ವಿಷಯವನ್ನು ಹೇಳುವಾಗ್ಗೆ, ಗರ್ಭಗುಡಿಯಲ್ಲಿಯ ಮೋಕ್ಷಪ್ರದಾಯಕ ದೇವರನ್ನು ಬಿಟ್ಟು ಪರಿವಾರ ದೇವತೆಯನ್ನು ಸೂಚಿಸುವ ಸಾಧ್ಯತೆ ಇಲ್ಲ. ಪರಿವಾರ ದೇವತೆಯೊಳಗೆ ಶಿವಸಮಾನರಾದರೆಂದು ಹೇಳುವುದು ಉಚಿತವೂ ಶಾಸ್ತ್ರ ಬದ್ಧವೂ ಅಲ್ಲ. ಅಷ್ಟೆಲ್ಲ ಏಕೆ, ದಕ್ಷಿಣಾಮೂರ್ತಿಯ ಸಂಕೇತವಾದ ಜಡೆಯ ಲಿಂಗವೆ ನೇರ ಪ್ರಮಾಣವಿರುವಾಗ ಆ ಪದವನ್ನು ದಕ್ಷಿಣಾಮೂರ್ತಿಯೆಂದೇ ಸಮೀಕರಿಸುವುದು ಯೋಗ್ಯ. ಇಂಥ ಮಹತ್ವದ ವಿಷಯವನ್ನು ತಿಳಿಸುವ ಶಾಸನ ಶಿಲೆಯನ್ನೂ ಕೂಡ ಲಿಂಗ ಪೀಠಾಕಾರದಲ್ಲಿ ರೂಪಿಸಿರುವುದು ತುಂಬ ಮಾರ್ಮಿಕವಾಗಿದೆ. ಹೀಗೆ ತರ್ಕ ಮತ್ತು ಪ್ರಮಾಣಬದ್ಧವಾಗಿ ಸಮೀಕರಣವು ಸರಿಯಾಗಿದ್ದಲ್ಲಿ, ಲಿಂಗರೂಪದ ದಕ್ಷಿಣಾಮೂರ್ತಿಯು ಬೆಳಕಿಗೆ ಬರುತ್ತಿರುವುದು ಇದೇ ಪ್ರಥಮ ಎಂದು ನನ್ನ ಅಭಿಪ್ರಾಯ. ಆದ್ದರಿಂದಲೇ ರಾಜಗುರುಗಳೂ ಸೇರಿದಂತೆ ಸಪಸ್ವಿಗಳಿಗೂ ಸಾಧು-ಸಂತರಿಗೂ ಈ ತೀರ್ಥಸ್ಥಾನವು ಮಹಾತ್ಮೆಯುಳ್ಳದ್ದಾಗಿತ್ತು.

ಇಲ್ಲಿ ಇನ್ನೊಂದು ಗಮನಾರ್ಹ ವಿಷಯವಿದೆ. ರಾಜಗುರುಗಳು ಜಡೆಯ ಶಂಕರ ದಕ್ಷಿಣಾಮೂರ್ತಿಯೊಳೂ ಶಿವಸಮಾನರು ಆದರೆಂದು ಶಾಸನದಲ್ಲಿ ಹೇಳಿರುವುದು, ಅವರ ಸೈದ್ಧಾಂತಿಕದ ನೆಲೆ ಮತ್ತು ವಿಚಾರಧಾರೆಯನ್ನು ಸೂಚಿಸುತ್ತದೆ. ವೈದಿಕ ಕಾಲದಿಂದಲೂ ಹರಿದು ಬಂದ ಹಲವಾರು ತತ್ವ ವಿಚಾರಗಳಲ್ಲಿ 'ಸೋಹಂ' 'ತತ್ವಮಸಿ' ಮೊದಲಾದವುಗಳನ್ನು ವ್ಯವಸ್ಥಿತವಾಗಿ ಘನೀಕರಿಸಿದ ಶಂಕರಾಚಾರ್ಯರು ಪ್ರತಿಪಾದಿಸಿದ 'ಅಹಂ ಬ್ರಹ್ಮಾಸ್ಮಿ' ಎಂದು ಹೇಳಿದಂತಾಗಿದೆ. ಒಟ್ಟಿನಲ್ಲಿ ಇವರೊಬ್ಬ ಘನ ವಿದ್ವಾಂಸರಲ್ಲದೆ ಪರಮ ಜ್ಞಾನಿಗಳೂ ಆಗಿದ್ದರೆಂದು ತೋರುತ್ತದೆ.

### ಸ್ಥಳೀಯ ನಂಬಿಕೆಗಳು

ಈ ದೇವಾಲಯಕ್ಕೆ ಸಂಬಂಧಿಸಿದಂತೆ ಇನ್ನೊಂದು ಗಮನಾರ್ಹ ವಿಷಯವಿದೆ. ೧೨ನೇ ಶತಮಾನದ ಬಸವೇಶ್ವರರ ಸಮಕಾಲೀನ ಕಂದಗಲ್ಲಿನ ಶಂಕರ ದಾಸಿಮಯ್ಯ ಈ ಜಡೆಯ ಶಂಕರ ದೇವರ ಆರಾಧಕರಾಗಿದ್ದರೆಂಬ ಪ್ರತೀತಿಯಿದೆ. ಈ ಬಗ್ಗೆ ಒಂದು ಸ್ಥಳೀಯ ಪುರಾಣವೂ ಇದೆಯಂತೆ. ಇವರ ಬಗ್ಗೆ ಸಿಂಪಿ ಲಿಂಗಣ್ಣನವರು ಒಂದು ಪುಸ್ತಿಕೆಯನ್ನು ಪ್ರಕಟಿಸಿದ್ದಾರಂತೆ. ಈ ಕೆಲವೊಂದು ವಿಷಯಗಳನ್ನು ಕೂಲಂಕಷವಾಗಿ ಮತ್ತು ವ್ಯಾಪಕವಾಗಿ ಅಧ್ಯಯನ ಮಾಡಿ ಪರಿಶೀಲಿಸಬೇಕಾಗಿದೆ. ಇವು ಹೇಗೆ ಇರಲಿ, ಶ್ರೀ ಜಡೆ ಶಂಕರಲಿಂಗ ದೇವಾಲಯವು ಪುರಾತನ ಕಾಲದಿಂದಲೂ ಅಪರೂಪದ ತೀರ್ಥಸ್ಥಾನವೆಂಬುದು ಐತಿಹಾಸಿಕ ಸತ್ಯ.

### ಇತರ ದೇವಾಲಯಗಳು

ಈ ಗ್ರಾಮದಲ್ಲಿ ಜಡೆಯ ಶಂಕರ ದೇವಾಲಯವಲ್ಲದೆ ೧೧೧೯ ಮತ್ತು ೧೧೩೫ರಲ್ಲಿ ತ್ರೈಪುರುಷ ಮತ್ತು ಜಲಶಯನ ದೇವರುಗಳ(ದೇವಾಲಯಗಳನ್ನು) ಸ್ಥಾಪಿಸಲಾಯಿತು. ಹೀಗೆ ಈ ಗ್ರಾಮದಲ್ಲಿ ೧೨ನೇ ಶತಮಾನದ ಮೂರು ದೇವಾಲಯಗಳಿದ್ದವು. ಉಳಿದ ಎರಡು ದೇವಾಲಯಗಳ ಕುರುಹುಗಳನ್ನು ಹುಡುಕಬೇಕಾಗಿದೆ.

ಇಲ್ಲಿ ಇನ್ನೊಂದು ವಿಷಯ ಗಮನಾರ್ಹ. ತ್ರೈಪುರುಷ ದೇವಾಲಯವಿದ್ದೆಡೆಯಲ್ಲಿ ಸಾಮಾನ್ಯವಾಗಿ ವಿದ್ಯಾಕೇಂದ್ರ(ಅಗ್ರಹಾರ)ವಿರುತ್ತದೆ. ಬಹುಶಃ ನವಿಲೆ ಗ್ರಾಮವು ವೇದ, ಪುರಾಣ, ಇತಿಹಾಸ, ಶಾಸ್ತ್ರಗಳ ಅಧ್ಯಯನದ ಕೇಂದ್ರವಾಗಿದ್ದಿರಬೇಕು. ೧೩೦೮ರ ಶಾಸನದ ಸರಸ್ವತಿ ಮಠವು ಆ ವಿದ್ಯಾಕೇಂದ್ರವಾಗಿರಬಹುದು.*

### ಆಧಾರ ಗ್ರಂಥಗಳು

೧. ಶ್ರೀನಿವಾಸ ರಿತ್ತಿ ಮತ್ತು ಗೋಪಾಲ, ಬಿ.ಅರ್.:ಇನ್ಸ್ಕ್ರಿಪ್ಷನ್ ಫ್ರಂ ನವಲಿ, ಶಕ ೯೩೬. ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೩೪, ಪುರಾತತ್ವ ಸರ್ವೇಕ್ಷಣ ಇಲಾಖೆ, ಕೇಂದ್ರ ಸರ್ಕಾರ, ನವದೆಹಲಿ. ೧೯೬೧-೬೨. ಪುಟಗಳು: ೧೬೪-೬೬

೨. ಪಾಟೀಲ್,ಸಿ.ಎಸ್.:ಇನ್ಸ್ಕ್ರಿಪ್ಷನ್ಸ್ ಫ್ರಂ ರಾಯಚೂರ್ ಡಿಸ್ಟ್ರಿಕ್ಟ್ (ಇನ್ಸ್ಕ್ರಿಪ್ಷನ್ಸ್ ಆಫ್ ಕರ್ನಾಟಕ, ಸಂಪುಟ ೪.) ಮೈಸೂರು, ೧೯೯೮. ಶಾಸನ ಸಂಖ್ಯೆಗಳು: ನವಲಿ ೨೨೧-೨೨೬

* ಶ್ರೀ ಜಡೆ ಶಂಕರಲಿಂಗ ದೇವಾಲಯದ ನನ್ನ ಪರಿಶೀಲನೆಯಲ್ಲಿ, ದೇವಾಲಯ ಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರುಗಳಾದ ಸರ್ವ ಶ್ರೀ ಎಂ.ಎನ್.ಹೇರಲಗಿ, ಎಸ್.ಎಸ್. ಹೇರಲಗಿ, ಎಂ.ಎಚ್.ಕುರ್ಲೆ, ಜಿ.ಬಿ. ಸುರೇಬಾನ್, ವ್ಹಿ.ಸಿ. ದಾನಪ್ಪನವರ, ಸೂರ್ಯಕಾಂತ ಮಿರ್ಜಿ, ಪಿ.ಎಸ್. ಛಪ್ರೆ ಮತ್ತು ಸ್ಥಳೀಯರು ಸ್ಥಳದಲ್ಲಿ ಹಲವು ವಿಧಗಳಲ್ಲಿ ಸಹಾಯ ಮತ್ತು ಸಹಕಾರವನ್ನು ನೀಡಿದ್ದಾರೆ. ಅವರೆಲ್ಲರ ಉಪಕಾರವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

## ನವಲಿಯ ಶಕ ೯೩೬ನೆ ವರ್ಷದ ಶಾಸನ

೧. ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರಿ ಪ್ರಿಥ್ವೀವಲ್ಲಭ ಮಹಾರಾ
೨. ಜಾಧಿರಾಜ ಪರಮೆಸ್ವ(ಶ್ವ)ರ ಪರಮ ಭಟ್ಟಾರಕ ಸತ್ಯಸ್ರ(ಶ್ರಯ)-
೩. ಕುಳ ತ್ರಿಳಕ ಚಾಳುಕ್ಯಾಭರಣ ಶ್ರಿಮತ್ ತ್ರಿಭುವನಮಲ್ಲದೇವ ಪಾ
೪. ದ ಪಂಕಜ ಭ್ರಮರಂ ಕೊಮಾರ ಗಜ ಕೇಸರಿ ಕೀ(ರ್ )ತ್ತಿ ವಿದ್ಯಾ
೫. ಧರಂ ಮ್ಮ(ಮ)ಲ್ಲಿಕಾಮೋದಂ ಪ್ಪಾ(ಮಾ)ರ್ಪ್ಪಡೆ ಭೀಮಂ ಕೋದಂಡರಾಮಂ (ಮಂ)ಗ
೬. ಣ್ಣರೋಳ್ಗಂಡಂ ತೇಜ ಮಾರ್ತಣ್ಣಂ ಗಂಡಬಂಗಾಜಿನಾರೋಹ ಕದ-
೭. ಬ್ಬಕಂ ಶ್ರೀಮಜ್ ಜಯಸಿಂಘದೇವರ್ ಎಡದೊಜೆ ಯಿಲ್ಪಾಸಿರಮು
೮. ಮಂ ದುಷ್ಟ ನಿಗ್ರಹ ಪಿಸಿ(ಶಿ)ಷ್ಟ ಪ್ರತಿಪಾಳನೆಯಿನ್ನಂ ಆಳ್ದು ಸುಖ
೯. ಸಂಕಥಾ ವಿನೋದದಿ(ಂ) ರಾಜ್ಯಂಗೆಯ್ಯುತ್ತುಮಿರೆ ತದ್ರಾಜಗುರು ಭ
೧೦. ಟ್ಟಾರಕರ್ಪ್ಪರಿಧಾವಿ ಸಂವತ್ಸರದ ಕಾರ್ತ್ತಿಕ ಬಹುಳ ಅಷ್ಟ
೧೧. ಮಿ ಸೋಮ(ವಾ)ರದೋಳ್ ತೀರ್ಥಸ್ಥಾನನ್ನವಿಲೆಯ ಜೆ(ಜ)ಡೆಯಸ(ಶ)ಂ-
೧೨. (ಕ)ರ ದೇವರ ದಕ್ಷಿಣಮೂ(ರ್ )ತ್ತಿಯೋಳ್ ಸಿವ(ಶಿ)ವ ಸಮಾನರಾ
೧೩. (ದೊ)ಡ್ ಅವರ ಪಾದುಕನ್ನಳ ಪೂಜಾ ನಿಮಿತ್ಯ(ತ್ತ)ದಿಂ ಸ(ಶ)ಕ ವರ್ಷ
೧೪. (೯)೩೬ನೆಯ ಆನಂದ ಸಂವತ್ಸರದ ವೈಸಾ(ಶಾ)ಖ ಸು(ಶು) ೩ ಸೋ
೧೫. (ವಾ)ರಂ ( ) ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾ
೧೬. (ರಣ) ಮೋನಾನುಷ್ಟಾ(ಷ್ಠಾ)ನ ಪರಾಯಣ ಸಮಾಧಿ ಸಂಪ್ಪನ್ನರ್ ಅಪ್ಪ
೧೭. (ಶ್ರೀ)ಮತ್ ಕರಡಿಕಲ್ಲ ಜೋಗಸಿ(ಶಿ)ವಾಚಾರ್ಯರ್ ನವಿಲೆ
೧೮. (ಯ ಜೆ)ಡೆಯ ಸ(ಶ)ಂಕರದೇವರ ಸ್ಥಾನಪತಿ ಮಾಣಿಕಬಳಾರಗ್ಗ್ಗಂ
೧೯. ...(ಭ)ಆರಗ್ಗ್ಗಂ ತ್ರ(ತ್ರಿ)ಭುವನ ಬಳಾರಗ್ಗ್ಗಂ ಅಂತು ಸ್ಥಾನಪತಿ ಬಳಾರ
೨೦. ..ಗ್ಗ್ಗೆ ೬ ಗದ್ಯಾನ ಹೊನ್ನಂ ಕೊಟ್ಟು ಸರ್ವ್ವ ಬಾದ(ಧ)ಪರಿಹಾರಮು(ಂ)
೨೧. (ಸರ್ವ್ವ ನ) (ಮ)ಸ್ಯಮುಮಾಗಿ ಮೆಲ್ಲಾ ಕಾಲಕ್ಕಂ ಅವ(ರ್)ಕ್ಕಾದೂಡುವ
೨೨. .... ತ್ತಿ ಯೊಂ(ದ)ನೆಯ ವೃತ್ತಿಯಾಗಿರ್ ಅಚಂದ್ರಾರ್ಕ್ಕ ತಾ
೨೩. ....(ಅ)ಂತು ಧಾರಾಪೂರ್ಬ(ರ್ವ)ಕಂ ಕೊಂಡ ಕರಿಯ ನೆಲಂ ಮ್ಮ(ಮ)ತ್ತರ್ ಪ್ಪತ್ತು
೨೪. .... ನಿವೇಸ(ಶ)ನವೊಂದು ( )ಕಾಲ ಕಾಲಾಂತರದೊಳ್ ಈ ವೃತ್ತಿ
೨೫. .... ಬಾ(ವಾ)ಣರಾಸಿಯೋಳ್ ಕವಿಜೆಯನ್ ಅಱದ(ಸಿ)ತು ದೋಷಂ ಸಾ
೨೬. ಗ್ಗ್ಗಂ( ) ಸ್ವದತ್ತಾಮ ಪರದತ್ತಾಂ ವಾಯೋ ಹರೇತುರ್ತ) ವಸುಂಧ(ರಾಂ)ಷಷ್ಟಿರ್ ವರಿ(ರ್)
೨೭. (ಷ ಸಹಸ್ರಾಣಿ)(ವಿ)ಷ್ಟಾಯಾಂ ಜಾಯತೆ ಕ್ರಿಮಿಃ.

ಹಿಂದಣ ಹೆಜ್ಜೆ

# ‘ಕನ್ನಡ ಮಾತು ತಲೆಯೆತ್ತುವ ಬಗೆ’

● ಬಿ.ಎಂ. ಶ್ರೀಕಂಠಯ್ಯ

(ಬಿ ಎಂ ಶ್ರೀಕಂಠಯ್ಯನವರು, ಈ ಶತಮಾನದ ಮೊದಲ ದಶಕಗಳಲ್ಲಿ, ಕನ್ನಡ ಭಾಷೆ ಮತ್ತು ಸಾಹಿತ್ಯ ಎದುರಿಸುತ್ತಿರುವ ಬಿಕ್ಕಟ್ಟುಗಳನ್ನು ಕುರಿತು ಅನೇಕ ಸರಣಿ ಲೇಖನಗಳನ್ನು ಬರೆದರು. 'ಕನ್ನಡ ಮಾತು ತಲೆಎತ್ತುವ ಬಗೆ' (೧೯೧೧), 'ಕನ್ನಡಿಗರಿಗೆ ಒಳ್ಳೇ ಸಾಹಿತ್ಯ'(೧೯೨೮), 'ಕನ್ನಡದ ಪುನರುಜ್ಜೀವನ'(೧೯೩೫), 'ಕನ್ನಡಕ್ಕೆ ಒಂದು ಕಟ್ಟು' ಮುಂತಾದುವು. ವಾಸ್ತವವಾಗಿ ಇವೆಲ್ಲ ಬೇರೆಬೇರೆ ಸಭೆಗಳಲ್ಲಿ ಮಾಡಿದ ಭಾಷಣಗಳು.

ಭಾಷಿಕ ಸಮುದಾಯಗಳು (ಅಂದರೆ ಅವುಗಳ ಭಾಷೆ, ಸಂಸ್ಕೃತಿ, ಆರ್ಥಿಕತೆಗಳು) ಎಲ್ಲ ಕಾಲಘಟ್ಟದಲ್ಲೂ ಒಂದಲ್ಲಾ ಒಂದು ಬಗೆಯ ಅನ್ಯಾಯಪ್ರಜ್ಞೆ, ಅಪಮಾನ, ಅಭಿಮಾನ, ಘರ್ಷಣೆಗಳನ್ನು ಎದುರಿಸುತ್ತ ಇರುತ್ತವೆ. ಹಲವು ಭಾಷೆ, ಧರ್ಮ, ಸಂಸ್ಕೃತಿಗಳು ಶ್ರೇಣೀಕರಣ ನೆಲೆಯಲ್ಲಿ ಇರುವ ಭಾರತದಲ್ಲಿ, ಇದು ಸಾಮಾನ್ಯ. ಈ ಬಿಕ್ಕಟ್ಟುಗಳನ್ನು ಸಮುದಾಯ ಪ್ರಜ್ಞೆಯ ಕೆಲವು ವ್ಯಕ್ತಿಗಳು ಸಾಂಸ್ಕೃತಿಕವಾಗಿ, ಆಳವಾಗಿ ಪರಿಭಾವಿಸುತ್ತಾರೆ. ಇವನ್ನು ಮುಖಾಮುಖಿ ಮಾಡುವ ಚಿಂತನೆ ಮತ್ತು ಕ್ರಿಯಾಯೋಜನೆಗಳನ್ನು ರೂಪಿಸುತ್ತಾರೆ. ಮೇಲೆ ಉಲ್ಲೇಖಿಸಿದ ಶ್ರೀಕಂಠಯ್ಯನವರ ಲೇಖನಗಳು ಕನ್ನಡ ಸಾಹಿತ್ಯ ಮತ್ತು ಭಾಷೆ ಎದುರಿಸುತ್ತಿದ್ದ ಬಿಕ್ಕಟ್ಟು, ಅದನ್ನು ಅವರು ಅರ್ಥಮಾಡಿಕೊಂಡ ರೀತಿ ಹಾಗೂ ಅವುಗಳ ಪರಿಹಾರಕ್ಕೆ ಮಾಡಿದ ಪ್ರಯತ್ನಗಳ ಪರಿಯನ್ನು ಸೂಚಿಸುವ ಅಪೂರ್ವ ದಾಖಲೆಗಳಾಗಿವೆ.

ಶ್ರೀಯವರು ಕನ್ನಡದ 'ಪುನರುಜ್ಜೀವನ'ಕ್ಕೆ, ಅದು 'ತಲೆಯೆತ್ತು'ವಂತೆ ಮಾಡುವುದಕ್ಕೆ, ಅದಕ್ಕೊಂದು 'ಕಟ್ಟು' ಕೊಡುವುದಕ್ಕೆ ಮಾಡಿದ ಪ್ರಯತ್ನಗಳೆಲ್ಲ, ಮಹಾರಾಜಾ ಕಾಲೇಜಿನಲ್ಲಿ ಇಂಗ್ಲಿಶ್ ಪ್ರಾಧ್ಯಾಪಕರಾಗಿ, ಬ್ರಿಟಿಶರ ರಾಜಕೀಯ ಆಡಳಿತವನ್ನು ಒಪ್ಪಿಕೊಂಡು ಮಾಡಿದವು. ಮಹಾರಾಜರ ಬಗ್ಗೆ ಅಪಾರ ಭಕ್ತಿಯುಳ್ಳ 'ರಾಜಸೇವಾಸಕ್ತ'ರಾಗಿ, ರಾಜಕೀಯವಾಗಿ ಪರಕೀಯ ಆಡಳಿತ ವಿರೋಧಿಸದೆ, ರಾಜಪ್ರಭುತ್ವದ ಬೆಂಬಲಿಗರಾಗಿ, ಭಾಷೆ ಮತ್ತು ಸಾಹಿತ್ಯಗಳ ಪುನರುಜ್ಜೀವನಕ್ಕಾಗಿ ಚಳುವಳಿಯನ್ನು ಕಟ್ಟುವುದು ಅವರಿಗೆ ಹೇಗೆ ಸಾಧ್ಯವಾಯಿತು' ಇದೊಂದು ವೈರುಧ್ಯ

ಆದರೂ ಇದು ಸತ್ಯವಾಗಿತ್ತು. ಇದಕ್ಕೆ ಕಾರಣಗಳನ್ನು ೨೦ರ ದಶಕದ ಕನ್ನಡದ ಪರಿಸ್ಥಿತಿಯಲ್ಲೂ ಶ್ರೀಕಂಠಯ್ಯನವರ ಪ್ರಯತ್ನಗಳ ಸ್ವರೂಪದಲ್ಲೂ ಕಾಣಬೇಕು. ಇದನ್ನು ಕನ್ನಡಿಯಂತೆ ಅವರ ಮೇಲಿನ ಲೇಖನಗಳು ಕಾಣಿಸುತ್ತವೆ.

ಶ್ರೀಕಂಠಯ್ಯನವರು ರಾಜಕೀಯವಾಗಿ ಬ್ರಿಟೀಶರ ಆಳ್ವಿಕೆಯನ್ನು ವಿರೋಧಿಸಲಿಲ್ಲ. ಮಾತ್ರವಲ್ಲ, ಅದರ ಸಮರ್ಥಕರೂ ಆಗಿದ್ದರು. ಇದಕ್ಕೆ ಉದಾಹರಣೆಯಾಗಿ 'ಆಳೌ ಬ್ರಿಟಾನಿಯಾ' ಪದ್ಯದ ಅನುವಾದವಾಗಲೀ, ಅನೇಕ ಕವನಗಳಲ್ಲಿ 'ಕಡಲರಾಣಿ ಬ್ರಿಟಾನಿಯಾ'ಳನ್ನು ಕೃತಜ್ಞತೆಯಿಂದ ನೆನೆಯುವುದನ್ನಾಗಲೀ ಹೇಳಬಹುದು. ಅವರ ಪ್ರಕಾರ 'ಕಡಲರಾಣಿ' ತಾನಾಗಿ ಬಂದವಳಲ್ಲ. ಸ್ವತ: ಭಾರತಮಾತೆಯು ತನ್ನ 'ಮನೆತನ ನೇರವಾಗುವ' ಉದ್ದೇಶದಿಂದ, ತನ್ನ 'ಇನಿಯತಂಗಿಯ ನೆರವನು' ಕೋರಿ ನೆನೆದಾಗ ಬಂದವಳು. ಬಂದು ಅವಳು ಮಾಡಿದ್ದಾದರೂ ಏನು? ''ಸಕಲ ಜ್ಞಾನವ ತೆರೆದಳು ಸಕಲ ಸೀಮೆಯ ಬಳಕೆಗೆಳೆದಳು. ಸಕಲ ಕುಶಲವನೊರೆದಳು''; ಈ ಹೊಸ ನೆಂಟಸ್ತಿಕೆಯಲ್ಲಿ ಅವಳು ಮಕ್ಕಳಿಗೆ ಹೇಳಿಕೊಡುವ ಗುಟ್ಟೆಂದರೆ-''ಹಿರಿಯ ಸಿರಿಯೊಕ್ಕಲಲಿ ಹೊಕ್ಕಿರಿ, ನಂಟನಳಿಯದೆ ಬಲಿಯಿರಿ. ಮನೆಯನಾಳಲು ಕಲಿಯಿರಿ''(ಭರತಮಾತೆಯ ನುಡಿ: ೧೯೧೪).

ಶ್ರೀಕಂಠಯ್ಯನವರು, ಕನ್ನಡಿಗರು ಹಾಗೂ ಅವರ ಭಾಷೆ ಸಾಹಿತ್ಯಗಳು 'ಜೀವಂತಿಕೆ' ಪಡೆಯಬೇಕಾದರೆ, ಅನುಸರಿಸಬೇಕಾದ ದಾರಿಯನ್ನು ಈ ಪದ್ಯದಲ್ಲಿ ಸೂಚಿಸಿದ್ದಾರೆ (ಭಾಷೆ ಮತ್ತು ಸಾಹಿತ್ಯಗಳಿಗೆ ಜೀವ ತುಂಬುವ ಕೆಲಸ ಮಾಡಿದರು ಎನ್ನುವಾಗ, ಅದು ಬರಹ ಪರಂಪರೆಯ ಭಾಷೆ ಮತ್ತು ಸಾಹಿತ್ಯಗಳಿಗೆ ಎನ್ನುವುದನ್ನು ಮರೆಯಬಾರದು). ಪ್ರಣಾಳಿಕಾ ರೂಪಿಯಾದ ಅವರ ಲೇಖನಗಳಿಗೂ ಈ ಪದ್ಯಕ್ಕೂ ಸಂಬಂಧವಿದೆ. ವಸಾಹತುಶಾಹೀ ಆಳ್ವಿಕೆಯು ದೇಶೀಭಾಷೆ ಮತ್ತು ಸಂಸ್ಕೃತಿಗಳ ಅನನ್ಯತೆ ನಾಶಮಾಡುತ್ತದೆ ಎಂಬುದು ನಿಜ; (ಇದರ ಪರಿಣಾಮವನ್ನು ಬೇರೆ ಬೇರೆ ರೂಪಗಳಲ್ಲಿ ಕನ್ನಡ ಒಳಗೊಂಡಂತೆ ದೇಶೀ ಭಾಷೆಗಳು ಅನುಭವಿಸುತ್ತಿವೆ); ಆದರೆ ಶತ್ರುರೂಪಿಯಾದ ವಸಾಹತುಶಾಹಿ ಭಾಷೆ ಮತ್ತು ಸಂಸ್ಕೃತಿಗಳನ್ನು, ಔಷಧಿಯಾಗಿ ಬಳಕೆಯಾಗುವ ವಿಚಿತ್ರ ಚಾರಿತ್ರಿಕ ಸನ್ನಿವೇಶವಿದು. ಹೀಗಾಗಿ 'ಇಂಗ್ಲಿಷ್' ಗೀತಗಳು ಆಧುನಿಕ 'ಕನ್ನಡ'ಸಾಹಿತ್ಯದ ಒರತೆಗೆ ಜಲದಕಣ್ಣಾಗಿದ್ದು, 'ಇಂಗ್ಲಿಷ್' ಪ್ರಾಧ್ಯಾಪಕರು 'ಕನ್ನಡ'ದ ಉದ್ಧಾರಕರಾಗಿದ್ದು ವೈರುಧ್ಯವಾಗಲಿಲ್ಲ. ಈ ಕುರಿತು ಶ್ರೀಯವರಿಗೂ ಯಾವುದೇ ದ್ವಂದ್ವಗಳಿರಲಿಲ್ಲ. ಅವರ ನಿಲುವು ಸ್ಪಷ್ಟವಾಗಿತ್ತು: ''ನಮಗೇನೋ ಇದು ಸ್ವತಸ್ಸಿದ್ಧವಾಗಿ ಕಾಣುತ್ತದೆ. ಇಂಗ್ಲಿಷ್ ಸಾಹಿತ್ಯವೇ ಜೀರ್ಣವಾದ ನಮ್ಮ ಕಾವ್ಯಮಾಲೆಯನ್ನು ಕೈಕೊಟ್ಟು ಎತ್ತಬೇಕು, ಇಂಗ್ಲಿಷ್ ಸಾಹಿತ್ಯವೇ ಸಂಸ್ಕೃತ ಸಾಹಿತ್ಯದಿಂದ ನಮ್ಮ ಕಾವ್ಯ ರೂಪಿಸಿ ಇಳಿದಿರುವ ದೋಷಗಳನ್ನು ಪರಿಹಾರ ಮಾಡಬೇಕು''

ರಾಜರ ಆಸ್ಥಾನ ಎಂದರೆ ಜಡತೆಯ ಸಂಕೇತ. ಆದರೆ ರಾಜಭಕ್ತರಾದ ಶ್ರೀಯವರು ಈ ರಾಜರು ಮತ್ತು ಅವರ ಪ್ರಭುತ್ವವನ್ನು ದೇಶೀಭಾಷೆಯಾದ ಕನ್ನಡಕ್ಕೆ ಜೀವಕೊಡುವ ಇನ್ನೊಂದು ಶಕ್ತಿ ಎಂದೇ ಭಾವಿಸಿದ್ದರು. ಸಂಸ್ಕೃತದ ಪ್ರಾಚೀನಪತ್ರಗಳನ್ನು ಮರು

ಮುಟ್ಟಿಸುವ ಕೆಲಸಗಳನ್ನು ಮೈಸೂರು ಅರಸರು ಮಾಡುತ್ತಿದ್ದರೂ, ಬ್ರಿಟಿಶರ ಯಜಮಾನಿಕೆ ಒಪ್ಪಿಕೊಂಡು ಆಧುನಿಕ ಅಭಿವೃದ್ಧಿಯ ಕೆಲಸಗಳನ್ನೂ (ಅಣೆಕಟ್ಟು, ವಿಶ್ವವಿದ್ಯಾಲಯ, ಕಾಲೇಜು, ನಿರ್ಮಾಣ ಇತ್ಯಾದಿ) ಮಾಡುತ್ತಿದ್ದವರು; ಇದರ ಭಾಗವಾಗಿ ಕೂಡ ಕನ್ನಡಕ್ಕೆ ಹೊಸರೂಪ ಬರುವುದು ಅನಿವಾರ್ಯವಾಗಿತ್ತು. ಹೀಗಾಗಿ ಶ್ರೀಯವರಿಗೆ ಕನ್ನಡಕ್ಕೆ ಚೈತನ್ಯ ನೀಡುವುದೂ ರಾಜರಿಗೆ ಭಕ್ತಿ ತೋರುವುದೂ ವೈರುಧ್ಯವಾಗಿ ಕಾಣಿಸಲಿಲ್ಲ. ಮೈಸೂರು ರಾಜರನ್ನು ಕುರಿತು ಅವರು ಬರೆದಿರುವ ಪದ್ಯಗಳಲ್ಲಿ ಇದು ಸ್ಪಷ್ಟವಾಗಿದೆ. 'ಶ್ರೀ ಜಯನ ಬೆಳಕು' (ಜಯಚಾಮರಾಜರ ಮೇಲೆ ಬರೆದ ಪದ್ಯ) ಅವರ ಪ್ರಕಾರ - 'ಕನ್ನಡಿಗರೊಲುಮೆ ತೆರೆಹೊಮ್ಮಿಸುವ ಬೆಳಕು, ಹೊನ್ನ ಕನಸನು ತರುವ ಹೊಸ ಕಳೆಯ ಬೆಳಕು'.

ಶ್ರೀಯವರ ಪ್ರಕಾರ ಕನ್ನಡದ ಜಡತೆಗೆ ಕಾರಣವಾಗಿರುವುದು ಪರಕೀಯವಾದ ಇಂಗ್ಲಿಶಲ್ಲ, ಒಳಗಿನದಾದ 'ನಮ್ಮ'ದೇ ಆದ ಸಂಸ್ಕೃತ. ಹೀಗಾಗಿ ಅವರು ಕನ್ನಡ ಭಾಷೆಗೆ ಸಂಸ್ಕೃತದ ತುರುಕುವಿಕೆಯಿಂದ ಉಂಟಾಗುವ ಜಡತೆಯ ಬಗ್ಗೆ ಕಟುವಿರೋಧ ವ್ಯಕ್ತಪಡಿಸಿದರು ('ಕನ್ನಡಕ್ಕೆ ಒಂದು ಕಟ್ಟು'); ಸಂಸ್ಕೃತ ಸಾಹಿತ್ಯ ಪರಂಪರೆಯಿಂದ ಕನ್ನಡ ಸಾಹಿತ್ಯದ ಮೇಲೆ ಆವರಿಸಿರುವ ಜಡತೆಯ ಬಗೆಗಿನ ವಿರೋಧವು ಇದರ ಮುಂದುವರಿಕೆಯಾಗಿತ್ತು. ಇದು ಸಾಹಿತ್ಯಕ ಪ್ರಭಾವಗಳ ಪ್ರಶ್ನೆ ಮಾತ್ರವಾಗಿರಲಿಲ್ಲ. ಆಳದಲ್ಲಿ ಆ ಸಾಹಿತ್ಯಕ ಪ್ರಭಾವಗಳ ಒಳಗಿದ್ದ ದೃಷ್ಟಿಕೋನಗಳ ಬಗೆಗಿನ ಜಗಳವೂ ಆಗಿತ್ತು. ಸಂಸ್ಕೃತದ ಜಡತೆಯುಳ್ಳ ಪ್ರಾಚೀನಸಾಹಿತ್ಯವನ್ನು ಅವರು 'ಕನ್ನಡಕ್ಕೆ ಒಂದು ಸೃಷ್ಟಿಯನ್ನಾಗಲಿ, ಶಕ್ತಿಯನ್ನಾಗಲಿ ಸೌಂದರ್ಯವನ್ನಾಗಲಿ ಕೊಡದ ನಿಸ್ಸಾರವಾದ ಪುಸ್ತಕದ ಸಂಸ್ಕೃತ ಶಬ್ದಗಳಿಂದ ಹೆಣೆದುಕೊಂಡಿರುವ ಸೀಗೆಯ ಮಳೆ' ಎಂದು ಟೀಕಿಸಬಲ್ಲವರಾಗಿದ್ದರು.

'ವಿಮರ್ಶೆಯ ಮೂಲಕವಾಗಿ ನಮ್ಮ ಪೂರ್ವಸಾಹಿತ್ಯರಾಶಿಯಿಂದ ಉತ್ತಮ ಕಾವ್ಯಗಳನ್ನು ಕಾವ್ಯಭಾಗಗಳನ್ನು ಶೋಧಿಸಿ ತೆಗೆದು ಕಾವ್ಯಕೋಶ ಸಿದ್ಧಪಡಿಸಬೇಕು ಎಂದು ಶ್ರೀಯವರು ಒಂದು ಕಡೆ ಹೇಳುತ್ತಾರೆ. ('ಕನ್ನಡಿಗರಿಗೆ ಒಳ್ಳೆ ಸಾಹಿತ್ಯ) ಇಲ್ಲಿನ ಮುಖ್ಯ ಮಾತು 'ವಿಮರ್ಶೆಯ ಮೂಲಕವಾಗಿ' ಎಂಬುದು. ಶ್ರೀಯವರ ಭಾಷೆ ಮತ್ತು ಸಾಹಿತ್ಯ ಚಿಂತನೆಯ ಮುಖ್ಯ ಲಕ್ಷಣವೇ ವಿಮರ್ಶಾತ್ಮಕತೆ. ೨೦ರ ದಶಕಗಳಲ್ಲಿ ಇದು ಅಪರೂಪದ ನಿಲುವಾಗಿತ್ತು. ವಿಮರ್ಶಾತ್ಮಕವಲ್ಲದ ಮನಸ್ಸು ಎಂದಿಗೂ ಪರಂಪರೆಯ ಜತೆ ಅರ್ಥಪೂರ್ಣ ಅನುಸಂಧಾನ ಮಾಡಲಾರದು ಹಾಗೂ ಕಟ್ಟಲಾರದು. ಸಂಸ್ಕೃತದ ವಿರುದ್ಧ ಅವರು ತಳೆದ ನಿಷ್ಠುರ ವಿಮರ್ಶಾತ್ಮಕ ನಿಲುವಿನಿಂದಲೇ ಕನ್ನಡಕ್ಕೆ 'ಪುನರುಜ್ಜೀವನ' 'ತಲೆ ಎತ್ತುವ' ಹೊಸದಾರಿ ತೆರೆದಂತಾಯಿತು. ಕನ್ನಡ ಭಾಷೆ ಮತ್ತು ಸಾಹಿತ್ಯಗಳು ಯಾವತ್ತೂ ಕ್ರಿಯೇಟಿವ್ ಆಗಿರುವುದು ಸಂಸ್ಕೃತದ ಜತೆ ವಿಮರ್ಶಾತ್ಮಕ ಬಾಳ್ವೆ ಮಾಡಿದಾಗಲೇ ಹೊರತು, ಪೂಜ್ಯ ಶರಣಾಗತಿಯಿಂದಲ್ಲ.

ಆದರೆ ಶ್ರೀಯವರು ಪರಂಪರೆಯನ್ನು ಹಳಗನ್ನಡ ಮತ್ತು ಸಂಸ್ಕೃತ ಪರಂಪರೆಗಳನ್ನು ಇಡಿಯಾಗಿ ತಿರಸ್ಕರಿಸಲಿಲ್ಲ. ಹಾಗೆಯೇ ಆಧುನಿಕತೆಯ ಶಕ್ತಿಸಂಕೇತವಾಗಿದ್ದ ಇಂಗ್ಲಿಶ್

ಮತ್ತು ಅದರ ಸಾಹಿತ್ಯವನ್ನು ಹುಂಬವಾಗಿ ಹೇರಿಕೊಳ್ಳಲಿಲ್ಲ. ಈ ವಿಷಯದಲ್ಲಿ ತಮ್ಮನ್ನು ‘ಮಧ್ಯಮಮಾರ್ಗಿ’ ಎಂದು ಕರೆದುಕೊಂಡರು. ಹೊಸತಾಗಿ ಉದಯಿಸಿದ ಅಕ್ಷರಸ್ಥ ಮಧ್ಯಮವರ್ಗಕ್ಕೆ ಕಷ್ಟವಾಗಬಹುದಾದ ‘ಗ್ರಾಮ್ಯಭಾಷೆ’ಯ ಬಳಕೆಯನ್ನು, ಸಂಸ್ಕೃತ ಭೂಯಿಷ್ಠ ಹಳಗನ್ನಡವನ್ನು ವಿರೋಧಿಸುವಂತೆಯೇ, ಅವರು ನಿರಾಕರಿಸಿದರು ಎಂಬುದು ಗಮನಾರ್ಹ; ಅವರು ‘ಮೇಲುಜಾತಿಯವರು ಆಡತಕ್ಕ ಸ್ಫುಟವಾದ ಕನ್ನಡ’ದ ಪರವಾಗಿದ್ದರು. ಪರಂಪರೆ ಮತ್ತು ಆಧುನಿಕತೆಗಳನ್ನು ಬ್ಯಾಲೆನ್ಸ್ ಮಾಡುವ ಈ ತಂತ್ರ ಅದ್ಭುತವಾಗಿ ಕೆಲಸಮಾಡಿತು.“ಜೇನುಹುಳು ಯಾವ ಹೂವಿನ ಮಕರಂದವನ್ನು ತಂದರೂ ಕೊನೆಗೆ ಎಲ್ಲಾ ತನ್ನ ಜೇನುತುಪ್ಪವನ್ನಾಗಿಯೇ ಹೇಗೆ ಮಾಡಿಕೊಳ್ಳುವುದೋ ಹಾಗೆ ಎಲ್ಲವೂ ಕನ್ನಡವೇ ಆಗಿಹೋದರೆ, ಆಗ ಹೊರಗಿನದು ಎಲ್ಲಿ ಬಂತು?” ಎಂಬ ಅವರ ಮಾತಿನ ಅಥವಾ “ಅವಳ ಸೊಬಗನಿವಳಿಗಿಟ್ಟು ನೋಡಬಯಸಿದೆ” ಎಂಬ ಕವಿತೆಯ ಸಾಲಿನ (‘ಕಾಣಿಕೆ’) ಒಳಗಿರುವ ರೂಪಕಗಳು ಈ ಸಮನ್ವಯ ನಿಲುವನ್ನು ಸಮರ್ಥವಾಗಿ ಹೇಳುತ್ತವೆ.

ಈ ಅರ್ಥದಲ್ಲಿ ಶ್ರೀಯವರು ಅತ್ಯಂತ ಚತುರ ಭಾಷಾಸುಧಾರಣಾವಾದಿ. ಪರಿಸ್ಥಿತಿಯನ್ನು ಅವರು ಅರ್ಥಮಾಡಿಕೊಂಡ ಬಗೆ ಹಾಗೂ ಅತ್ಯಂತ ಬಿಕ್ಕಟ್ಟಿನಲ್ಲಿ ಕೈಗೊಂಡ ನಿರ್ಣಾಯಕ ನಿಲುವುಗಳಲ್ಲಿ ಕಾಣಬಹುದು. ಅವರ ಪ್ರಯತ್ನಗಳು ಕನ್ನಡದ ಮುಂದಿನ ನೂರುವರ್ಷಗಳ ಬೆಳೆಯಲ್ಲಿ ಪ್ರಭಾವಶಾಲಿ ಮಾದರಿಗಳಾಗಲು ಕಾರಣ, ಈ ‘ಮಧ್ಯಮಮಾರ್ಗ’ದ (ಅಂದರೆ ಅತಿಯಾದ ಎಲ್ಲವನ್ನು ನಿರಾಕರಿಸುವುದರ) ವಿವೇಕವೇ ಆಗಿದೆ. ೨೦ನೇ ಶತಮಾನದ ಕನ್ನಡದ ಅತ್ಯುತ್ತಮ ಕೃತಿಗಳ / ಮನಸ್ಸುಗಳ ಪ್ರಧಾನ ಲಕ್ಷಣವಾದರೂ ಇದೇ. ತಕ್ಷಣಕ್ಕೆ ಹೊಳೆಯುವುದು ಕುವೆಂಪು ಕಾದಂಬರಿ ಹಾಗೂ ಬೇಂದ್ರೆ ಕವಿತೆಗಳು. ‘ಕರುಣಾಳು ಬಾ ಬೆಳಕೆ’ ಪದ್ಯ ಅನುವಾದವಾದರೂ ಕನ್ನಡದ ಸಂವೇದನೆಗೆ ಯಾಕೆ ಒಳಗಿನದಾಗಿಯೂ, ಗಿರಿಯವರ ‘ಗತಿಸ್ಥಿತಿ’ ಕನ್ನಡದದ್ದಾದರೂ ಹೊರಗಿನ ದೆಂಬಂತೆಯೂ ಭಾವಿಸಲ್ಪಟ್ಟವು? ಇದು ಕನ್ನಡದ ಮೂಲಭೂತ ಸ್ವಭಾವವನ್ನು ಹೇಳುವ ಮಾರ್ಮಿಕ ಸಂಗತಿ; ಹೀಗೆಯೇ ಆಧುನಿಕ ಕಾಲದಲ್ಲಿ ಹುಟ್ಟಿದ ‘ರಾಮಾಯಣಂದರ್ಶನಂ; ‘ಶ್ರೀ ಹರಿಚರಿತ’ಗಳನ್ನೂ ೧೨ನೇ ಶತಮಾನದ ವಚನಕಾರರನ್ನು ಕನ್ನಡದ ಓದುಗರು ಸ್ವೀಕರಿಸಿದ ರೀತಿಯನ್ನೂ ಇಲ್ಲಿ ಯೋಚಿಸಬೇಕು.

ಶ್ರೀಯವರ ಸಾಹಿತ್ಯ ಚಿಂತನೆಯ ದೊಡ್ಡ ಗುಣಗಳೆಂದರೆ - ಅದರ ಕ್ರಿಯಾಶೀಲತೆ (Activisim), ತಾಯ್ತನದ ಕಳಕಳಿ ಮತ್ತು ಸಾಮಾನ್ಯರಿಗೆ ಮುಟ್ಟಬೇಕೆಂಬ ಸಮಾಜವಾದಿ ತುಡಿತ. ಭಾಷೆ ಮತ್ತು ಸಾಹಿತ್ಯದ ಫಲಗಳು ಕೆಲವೇ ಉನ್ನತವರ್ಗದವರಿಂದ ಸಮುದಾಯಗಳತ್ತ ಹರಿಯಬೇಕು ಎಂದು ಚಿಂತಿಸುವುದೇ ಸಮಾಜವಾದೀ ತುಡಿತ. ಕನ್ನಡ ಭಾಷೆಯ ಅನನ್ಯತೆ ಕುರಿತ ಚಿಂತನೆಗಳು ‘ಕವಿರಾಜಮಾರ್ಗ’ದಿಂದ ಕುವೆಂಪುರವರೆಗೆ ನಡೆದಿವೆ; ಕಾವ್ಯವನ್ನು ಬೀದಿಗೆ ತರುವ ಪ್ರಯತ್ನಗಳು ಬಸವಣ್ಣನಿಂದ ಸಿದ್ದಲಿಂಗಯ್ಯ ನವರಿಗೆ ನಡೆದಿವೆ. ಈ ಸರಣಿಯಲ್ಲಿ ಶ್ರೀಯವರೂ ಒಂದು ಕೊಂಡಿ. ಕಾವ್ಯ ಮತ್ತು ಭಾಷೆಯನ್ನು ವಿಶಾಲ ಜನಸಮುದಾಯಗಳಿಗೆ ತಲುಪಿಸಬೇಕೆನ್ನುವವರು, ಸಹಜವಾಗಿ

ಹಾಗೆ ತಲುಪಿಸಲು ನಿರಾಕರಿಸುವ ಯಜಮಾನಿಕೆಗಳ ಜತೆ ನಿಷ್ಠುರ ಕಟ್ಟಿಕೊಳ್ಳ ಬೇಕಾಗುತ್ತದೆ. ಈ ನಿಷ್ಠುರ ಕಟ್ಟಿಕೊಳ್ಳಲು ಬೇಕಾದ ಧೈರ್ಯವನ್ನೂ ಮುಂಗಾಣ್ಕೆಯನ್ನೂ ಶ್ರೀಯವರು ಪಡೆದಿದ್ದರು. ವ್ಯವಸ್ಥೆಯ ನಿರಾಕರಣೆಯ ನಿಷ್ಠುರತೆಯೂ ಜನರನ್ನು ತಲುಪುವ ತಾಯ್ತನದ ಕಳಕಳಿಯೂ ಸದಾ ಜತೆಜತೆಯಲ್ಲಿಯೇ ಹೋಗುತ್ತವೆ.

ಶ್ರೀಯವರು ತಮ್ಮ ಕಾಲದ ಕವಿಗಳಿಗೆ ವ್ಯಾಕರಣದಲ್ಲಿ ಶಬ್ದಕೋಶದಲ್ಲಿ ವಾಕ್ಯರಚನೆಯಲ್ಲಿ ಯಾವ್ಯಾವ ಹೊಸತನ ರೂಢಿಸಿಕೊಳ್ಳಬಹುದು ಎಂಬ ಬಗ್ಗೆ ತಿಳಿಹೇಳುವ ಗುರುವಿನಂತಿದ್ದವರು. ('ಕನ್ನಡಕ್ಕೆ ಒಂದು ಕಟ್ಟು'): ''ಇಂಗ್ಲಿಷನ್ನು ಕಲಿತವನು ಕಾಣಬಹುದಾದ, ಹೊಕ್ಕು ಬಳಸಬಹುದಾದ, ಸಾಹಿತ್ಯದ ರಮಣೀಯ ಉದ್ಯಾನವನಗಳನ್ನು, ಕನ್ನಡವನ್ನು ಬಲ್ಲವನು ಕಾಣುವಂತೆ, ಬಳಸುವಂತೆ ಮಾಡುತ್ತೀರಾ? ಇಲ್ಲವಾದರೆ ಬಂಗಾರದ ಬೆಳೆಯೂ ಇಲ್ಲದೆ, ಒತ್ತಾಳೆಯ ಕಡಗವೂ ಇಲ್ಲದೆ ಹಾಗೂ ಕೆಟ್ಟೆ, ಹೀಗೂ ಕೆಟ್ಟೆ ಎಂಬ ಸ್ಥಿತಿಗೆ ನಮ್ಮ ಮಕ್ಕಳನ್ನು ತಳ್ಳಿದ ಹಾಗೆ ಆಗುವುದಿಲ್ಲವೆ ?'' ಎಂದು ('ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ') ಕಾಳಜಿ ಮಾಡಬಲ್ಲವರಾಗಿದ್ದವರು: ''ನಾವು ಆಡುವ ಮಾತು, ನಾವು ಮೆಚ್ಚುವ ವಿಷಯ, ನಾವು ಏಳಿಗೆಯಾಗುವ ದಾರಿ, ಇದಕ್ಕೆ ನೀವು ಬರುವವರೆಗೂ ನಮಗೂ ನಿಮಗೂ ಗಂಟಿಲ್ಲ. ಎಚ್ಚರವಿರಲಿ. ಸ್ಪಷ್ಟವಾದ ಸುಂದರವಾದ ಜಗತ್ತನ್ನು ನಿರ್ಮಾಣ ಮಾಡುವವರೆಗೂ ನಿಮ್ಮ ಮಾತೆಲ್ಲ ಮಂಜಿನ ಮಬ್ಬೆ'' ಎಂದು ಚಳುವಳಿಗಾರನ ಆಕ್ರೋಶದಿಂದ ಎಚ್ಚರಿಕೆ ನೀಡಬಲ್ಲವರಾಗಿದ್ದರು. ಈ ಗುರುತನ, ತಾಯ್ತನ, ಚಳುವಳಿಗಾರತನಗಳೆಲ್ಲವೂ ಅವರ ಚಿಂತನೆಗೆ ಒಂದು ಬಗೆಯ ಹೊಣೆಗಾರಿಕೆಯನ್ನೂ ದಾರ್ಶನಿಕತೆಯನ್ನೂ, ಕ್ರಿಯಾಶೀಲತೆಯನ್ನೂ ತಂದುಕೊಟ್ಟಿವು.

ಭಾಷೆ ಮತ್ತು ಸಾಹಿತ್ಯದ ಸಮಸ್ಯೆಯನ್ನೂ ಅವರು ಅರ್ಥ ಮಾಡಿಕೊಂಡ, ವಿಶ್ಲೇಷಿಸಿದ ಹಾಗೂ ಪರಿಹಾರ ಸೂಚಿಸಿದ ರೀತಿಯಲ್ಲಿ ಅನೇಕ ಸಮಸ್ಯೆಗಳಿವೆ. ಅದರಲ್ಲೂ ಗ್ರಾಮ್ಯ ಭಾಷೆ ಕುರಿತ ಅವರ ವಿರೋಧ, ಪ್ರಾಚೀನ ಸಾಹಿತ್ಯ ಕುರಿತ ಸರಳೀಕೃತ ನಿರಾಕರಣೆ ಕುರಿತು ಪ್ರಶ್ನೆ ಎತ್ತಬಹುದು. ಆದರೆ ೨೦ನೇ ಶತಮಾನದ ಮೊದಲ ದಶಕಗಳ ಚಾರಿತ್ರಿಕ ಸಂದರ್ಭದಲ್ಲಿ ಅವರ ಚಿಂತನೆಗಳನ್ನು ಇಟ್ಟು ನೋಡಿದರೆ, ಇವು ಕನ್ನಡ ರಾಷ್ಟ್ರೀಯತೆಯ ಆದಿಮ ಚಿಂತನೆಗಳಂತೆ ತೋರುತ್ತವೆ. ಈ ಚಿಂತನೆಗಳು ಆಧುನಿಕ ಕನ್ನಡ ಸಾಹಿತ್ಯದ ಮೇಲೆ ಬೀರಿದ ಪ್ರಭಾವವನ್ನು ಗಮನಿಸಿದರಂತೂ ಶ್ರೀಯವರ ಆಧುನಿಕ ಮನಸ್ಸಿನ ವಿವೇಕ ಹಾಗೂ ಡೆಮಾಕ್ರಟಿಕ್ ಗುಣಗಳು ತಿಳಿಯುತ್ತವೆ.)

ಅಧ್ಯಕ್ಷರೆ, ಆರ್ಯರೆ,

೧. ಕನ್ನಡ ವಿದ್ಯೆಯನ್ನು ವೃದ್ಧಿಮಾಡುವುದಕ್ಕೆ ಏರ್ಪಟ್ಟಿರುವ ಈ ಸಂಘದಲ್ಲಿ ಆ ಭಾಷೆಯ ಮುಂದಿನ ಏಳಿಗೆಯನ್ನು ಕುರಿತು ಪ್ರಸ್ತಾಪಿಸುವುದು ಒಚಿತವಾಗಿಯೇ ಇರುತ್ತದೆ. ಆದರೆ ಈ ವಿಷಯದಲ್ಲಿ ಉತ್ಸಾಹ ಎಲ್ಲರಿಗೂ ಒಂದೇ ಸಮವಾಗಿರುವುದಿಲ್ಲ: ಕೆಲವರು ಇದಕ್ಕೆ ವಿರೋಧಿಗಳೇ ಇರಬಹುದು. ಇದಲ್ಲದೆ ನಮ್ಮಲ್ಲಿಯೂ ಕೆಲವರಿಗೆ ಸಭೆ ಕೂಡಿದಾಗ ಉತ್ಸಾಹ ಹೆಚ್ಚಿ ತುಂಬುವುದು. ಮನೆಗೆ ತಿರುಗಿದಾಗ ಮಾಯವಾಗುವುದೂ ಉಂಟು. ಈ

ಕಾರಣಗಳಿಂದ ಭಾಷೆಯ ಪ್ರಕೃತ ಸ್ಥಿತಿಯನ್ನೂ ವೃದ್ಧಿ ಮಾರ್ಗವನ್ನೂ ತಿಳಿಸುವುದಕ್ಕೆ ಮುಂಚೆ, ಸಂಘದ ಕಾರ್ಯದಲ್ಲಿ ಅಸಮಾಧಾನ ಪಡತಕ್ಕವರ ಕಾರಣಗಳೇನು, ಅಸಡ್ಡೆ ಮಾಡತಕ್ಕವರ ಕಾರಣಗಳೇನು, ಇವರಿಬ್ಬರಿಗೂ ಹೇಳಬಹುದಾದ ಸಮಾಧಾನಗಳೇನು, ಈ ಅಂಶಗಳನ್ನು ವಿಚಾರಮಾಡುವುದು ಅವಶ್ಯಕವಾಗಿದೆ.

೨. ದೇಶಭಾಷೆಗಳು ಪ್ರಬಲವಾಗುವುದಕ್ಕೆ ಇಷ್ಟವಿಲ್ಲದವರ ಅಭಿಪ್ರಾಯಗಳನ್ನು ಹೀಗೆ ಸೂಚಿಸಬಹುದು: "ಇಂಗ್ಲಿಷ್ ಚಕ್ರಾಧಿಪತ್ಯ ನೆಲೆಯಾಗುವುದಕ್ಕೆ ಮುಂಚೆ ಇದ್ದ ಸ್ಥಿತಿ ಈಗ ಇಂಡಿಯದಲ್ಲಿ ಇಲ್ಲ. ಆಗ ಹೊರಗಿನ ಪ್ರಪಂಚದ ಸೆಲೆಯೇ ಇರಲಿಲ್ಲ. ರಾಜ್ಯವೂ ಎಂಟು ಹತ್ತು ಪ್ರಾಂತ್ಯಗಳಾಗಿ, ಒಂದಕ್ಕೊಂದು ಸಂಪರ್ಕವೇ ಇಲ್ಲದೆ ಇತ್ತು. ಜೀವನ ಸುಲಭವಾಗಿ ಜರುಗುತ್ತಿತ್ತು. ಅದೆಲ್ಲಕ್ಕೂ ತಕ್ಕ ಹಾಗೇ ಪ್ರಪಂಚವನ್ನು ಮಾಯವೆಂದು ಎಣಿಸಿ, ಸಂಸಾರವನ್ನು ಪಾಶವೆಂದು ಹೇಳಿ ಬೇಸರಪಟ್ಟು, ಈ ಲೋಕಯಾತ್ರೆ ಎಷ್ಟು ಬೇಗ ಮುಗಿದೀತೋ ಎಂದು ಯಾವಾಗಲೂ ಕಾಡಿನ ಮೇಲೇ ದೃಷ್ಟಿಯಿಟ್ಟುಕೊಂಡು ಇರುತ್ತಿದ್ದರು. ಈಗ ಇದೊಂದೂ ನಡೆಯುವುದಿಲ್ಲ. ದೇಶಕ್ಕೆಲ್ಲಾ ಚಕ್ರವರ್ತಿ ಒಬ್ಬನಾದನು; ದೇಶವೆಲ್ಲಾ ಕಬ್ಬಿಣದಿಂದ ಕಟ್ಟಿ ಬಿಗಿದಂತೆ ಏಕವಾಯಿತು; ಕೆಂಪುಜನರ ವಿದ್ಯೆ, ವ್ಯಾಪಾರ, ಕೈಗಾರಿಕೆ, ಇವುಗಳ ಉರುಬಿನಲ್ಲಿ ನಾವು ಮೂಲೆಗೆ ಬೀಳುತ್ತಿದ್ದೇವೆ. ಅವರ ಆಳಿಕೆಯಿಂದ ಶಾಂತಿಯೇನೋ ದೊರಕಿತು. ಆದರೆ ಮಿಕ್ಕ ಪುರುಷಾರ್ಥಗಳೆಲ್ಲಾ ನಾವೇ ಶ್ರಮಪಟ್ಟು ಸಂಪಾದಿಸಿದಲ್ಲದೆ ಬರುವುವಲ್ಲ. ಹಿಂದಿನಂತೆ ಒಡೆದುಕೊಂಡೇ ಇದ್ದೆವೇ, ಬಿದ್ದೇ ಹೋಗುವೆವು; ಒಗ್ಗಟ್ಟಾದೆವೇ, ಇನ್ನೂ ನಿಲ್ಲುವ ಆಸೆಯುಂಟು. ಒಗ್ಗಟ್ಟು ಬಾಯಿಮಾತಿಗೆ ಬರತಕ್ಕದ್ದಲ್ಲ. ಯಾವ ಯಾವ ಭೇದಗಳಿಂದ ಆರ್ಯಭೂಮಿಯಲ್ಲಿ ಒಗ್ಗಟ್ಟು ಹುಟ್ಟಲಿಲ್ಲವೋ, ಆಯಾ ಭೇದಗಳನ್ನೆಲ್ಲಾ ಸುಟ್ಟು ಬೂದಿಮಾಡಿ ನೀರಿನಲ್ಲಿ ಕಲಸಿಬಿಡಬೇಕು. ಆಚಾರ, ಜಾತಿ, ಮತ, ಇಲ್ಲಾ ಒಂದೇ ಆಗುವಂತೆ ಪ್ರಯತ್ನಮಾಡುತ್ತ ಹೋಗಬೇಕು. ಇವೆಲ್ಲಕ್ಕೂ ಮೊದಲು ಭಾಷೆ ಒಂದಾಗಬೇಕು; ಇಂಗ್ಲಿಷ್, ಇಲ್ಲವೆ ಹಿಂದಿ, ಯಾವುದೋ ಒಂದು ಸಾಧ್ಯವಾದದ್ದು. ಮಿಕ್ಕ ಭಾಷೆಗಳು ಸತ್ತುಹೋಗಲಿ; ಈಗ ತಾವಾಗಿಯೇ ಸಾಯುತ್ತಾ ಬಿದ್ದಿರುವುವು; ಎರಡು ದಿನ ನಾವು ತಟಸ್ಥರಾಗಿದ್ದರೆ ಹೋಗಿ ಹಳ್ಳಿಗಳಲ್ಲಿ ಅಡಗಿಕೊಳ್ಳುವುವು; ಆಗ ರಾಜಭಾಷೆಯೊಂದು ಹಿಮಾಲಯದಿಂದ ರಾಮೇಶ್ವರದವರೆಗೂ ಸ್ವೇಚ್ಛೆಯಾಗಿ ಓಡಾಡುವುದು. ಇದು ಬಿಟ್ಟು, ನರಳುತ್ತಿರುವ ದೇಶಭಾಷೆಗಳನ್ನು ಗುಣಮಾಡಿ ತಲೆಯೆತ್ತಿಸಬೇಕು ಎನ್ನುವರು, ಇಂಡಿಯದ ಒಗ್ಗಟ್ಟಿಗೆ ಅಡ್ಡಬಂದು ನಿಲ್ಲುವರು; ಅವರು ರಾಜ್ಯದ ಹಿತಚಿಂತನೆಗೆ ಮೃತ್ಯುಗಳು."

೩. ಹೀಗೆ ಯೋಚಿಸತಕ್ಕವರು ತಿಳಿಯದವರು, ಕೆಡುಕಿಗಳು, ಅಭಿಮಾನವಿಲ್ಲದವರು ಎದು ಹೇಳುವುದಕ್ಕಾಗುವುದಿಲ್ಲ. ಇವರು ಬಹುದೂರ ಯೋಚನೆಮಾಡಿ, ಒಗ್ಗಿ ಬಂದ ಪಕ್ಷಪಾತವನ್ನು ತೊರೆದು, ಅಲ್ಪಲಾಭಕ್ಕೇ ದಣಿದುಹೋಗದೆ, ರಾಜ್ಯಕ್ಕೆಲ್ಲಾ

ಒಟ್ಟಿಗೆ ಬೆಸೆಯುತ್ತಿವೆ. ಈ ನಾಗರಿಕತೆ ಇಂಡಿಯದಲ್ಲಿ ಮೊದಲಿಂದ ಉಂಟು; ಈ ತಿಳಿವಳಿಕೆ ಈಗೀಗ ಹುಟ್ಟುತ್ತಿದೆ. ಐಕಮತ್ಯವೆಂದರೆ ಎಲ್ಲರೂ ಒಂದೇ ಪಡಿಯಚ್ಚಾಗಿ ಸ್ವತಂತ್ರವನ್ನು ನೀಗಿಕೊಳ್ಳಬೇಕೆಂದಲ್ಲ; ಭೇದವಿರಬೇಕಾದ ಕಡೆ ಭೇದವೂ, ಸಾಮ್ಯವಿರಬೇಕಾದ ಕಡೆ ಸಾಮ್ಯವೂ, ಮುಖ್ಯ ಪರಸ್ಪರ ವಿಶ್ವಾಸವಿದ್ದಲ್ಲಿ ಎರಡೂ ಐಕಮತ್ಯದಲ್ಲಿ ಸೇರಬಹುದು. ಆದಕಾರಣ, ಅಭಿಮಾನದಿಂದ ದೇಶಭಾಷೆಗಳನ್ನು ಉದ್ಧಾರಮಾಡಿ ಆಯಾ ಪ್ರಾಂತ್ಯಗಳ ಜನಸಾಮಾನ್ಯಕ್ಕೂ, ಅನುಕೂಲಕ್ಕೆ ಇಂಗ್ಲಿಷ್ ಭಾಷೆಯನ್ನು ಸ್ವೀಕರಿಸಿ ಒಗ್ಗಟ್ಟಿಗಾಗಿ ಒಪ್ಪಾಡುವ ಇಂಡಿಯದ ವಿದ್ಯಾವಂತರಿಗೂ, ಇಬ್ಬರಿಗೂ ಲಾಭವಾಗುವಂತೆ ನಡೆಯತಕ್ಕದ್ದೇ ಮೇಲು. ಈ ರೀತಿ ಈಗ ನಡೆಯುತ್ತಲೇ ಇದೆ, ಮುಂದೆಯೂ ಅದನ್ನೇ ಬಲಪಡಿಸಿಕೊಂಡು ಹೋಗುವುದು ಮೇಲೆಂದು ಕಾಣುತ್ತದೆ.

೫. ನಾವು ಸ್ವೀಕರಿಸತಕ್ಕ ಭಾಷೆಗಳನ್ನು ಹೇಳುತ್ತಿರುವಾಗ ಸಂಸ್ಕೃತವನ್ನು ಬಿಡುವುದಕ್ಕಿಲ್ಲ. ಇದು ನಮ್ಮ ಪೂರ್ವಿಕರಾದ ಆರ್ಯರ ಭಾಷೆ; ಇದರಲ್ಲೇ ನಮ್ಮ ಪುಸ್ತಕ ಭಂಡಾರವೆಲ್ಲಾ ಅಡಗಿದೆ. ಇದನ್ನು ತಿಳಿದಹೊರತು ಹಿಂದಿದ್ದ ಸ್ಥಿತಿಯಾಗಲಿ, ಈಗಿನ ಸ್ಥಿತಿಗೆ ಕಾರಣವಾಗಲಿ, ಮುಂದೆ ತಿದ್ದಬೇಕಾದ ರೀತಿಯಾಗಲಿ ತಿಳಿಯುವುದಿಲ್ಲ. ಆದ್ದರಿಂದ ಇಂಡಿಯದಲ್ಲಿ ವಿದ್ಯಾವಂತನೆನ್ನುವ ಪ್ರತಿಯೊಬ್ಬನೂ ಇಂಗ್ಲಿಷ್, ಸಂಸ್ಕೃತ, ತನ್ನ ಕಡೆಯ ದೇಶಭಾಷೆ ಈ ಮೂರನ್ನೂ ಚೆನ್ನಾಗಿ ತಿಳಿದಿರಬೇಕು. ತನಗೆ ಹರ್ಷವೂ ಲಾಭವೂ, ದೇಶಕ್ಕೆ ಉನ್ನತಿಯೂ ಸೌಖ್ಯವೂ ಬರುವಂತೆ ಶ್ರಮಬೀಳಬೇಕೆನ್ನುವವನಿಗೆ ಈ ಮೂರೂ ಬಂದೇ ತೀರಬೇಕು; ಇಲ್ಲದಿದ್ದರೆ ಅಷ್ಟು ನೇರ್ಪಿಲ್ಲ.

೬. ಈ ಮೂರನ್ನೂ ಕಲಿಸತಕ್ಕ ಭಾರ ಯೂನಿವರ್ಸಿಟಿಯ ಪಂಡಿತರ ಮೇಲೆ ಬಿದ್ದಿದೆ; ಉಳಿಸಿಕೊಂಡು ತೇಜಸ್ಸನ್ನು ಹೊಂದಿರುವ ಭಾರ ವಿದ್ಯಾವಂತರ ಮೇಲಿದೆ. ಆದರೆ ಈ ಎರಡು ಕಡೆಯಿಂದಲೂ ಇವಕ್ಕೆ ಸರಿಯಾದ ಶ್ರದ್ಧೆ ಕಾಣಬರುವುದಿಲ್ಲ. ಇಂಗ್ಲಿಷೇನೋ ಬಲವಾಗುತ್ತಿದೆ; ಮಿಕ್ಕ ನಮ್ಮ ಭಾಷೆಗಳೆರಡೂ ಕುಗ್ಗುತ್ತಿವೆ. ಇಂಗ್ಲಿಷ್ ಕಲಿಯುವ ಹುಡುಗರೆಲ್ಲಾ ಹಿಂದೆ ಕನ್ನಡವನ್ನಾಗಲಿ, ಸಂಸ್ಕೃತವನ್ನಾಗಲಿ ಒಂದನ್ನಾದರೂ ಕಲಿಯುತ್ತಿದ್ದರು. ಈಗ ಅದೂ ಹೋಯಿತು. ಕನ್ನಡ ಸಂಸ್ಕೃತಗಳನ್ನು ಈಗ ಒಟ್ಟಿಗೆ ಕಲಿಯುತ್ತಾರಲ್ಲ ಎನ್ನಬಹುದು; ಇದೇನೋ ಸರಿಯೆ; ಆದರೆ ಎಷ್ಟು ಜನ! ಹೀಗೆ ಮಾಡಿದ್ದರಿಂದ ಮೇಲೆ ಮೇಲೆ ತೇಲಿಸಿಕೊಂಡು ಓದಿ ಬಿ.ಎ.ಡಿಗ್ರಿ ಪಡೆದು ತಾವಾಗಿ ಒಂದು ಗ್ರಂಥವನ್ನು ನೋಡಿಕೊಳ್ಳಲಾರದ ವಿದ್ಯಾರ್ಥಿಗಳು ಹೇಗೂ, ಪ್ರಚಂಡ ಪಂಡಿತರು ಬಂದು ಭಾಷೆಯನ್ನು ಉದ್ಧರಿಸುತ್ತಾರೆ, ಎಂದು ಯೋಚಿಸಿ ಏರ್ಪಡಿಸಿದ ಹಾಗೆ ತೋರುತ್ತದೆ. ಹೇಳಿಕೆಯಲ್ಲೇನೋ ಇದು ಮುದ್ದಾಗಿದೆ; ನಡವಳಿಕೆ ತಾನೇ ಅಷ್ಟು ಮುದ್ದಾಗಿಲ್ಲ. ಸಂಸ್ಕೃತ-ಕನ್ನಡವನ್ನು ಆರಿಸಿಕೊಂಡವರು ಈ ಏರ್ಪಾಟಿನಲ್ಲಿ ಪೂರ್ಣ ಪಾಂಡಿತ್ಯವನ್ನು ಪಡೆಯಬಹುದು. ನಿಜ; ಆದರೆ ಆರಿಸಿಕೊಳ್ಳುವವರು ಯಾರಾದರೂ ಉಂಟೋ, ತಿಳಿಯದೆ

ಅರಿಸಿಕೊಂಡು ಆಮೇಲೆ ಕೊರಗುವವರು ಉಂಟೋ? ಪ್ರಶಸ್ತವಾದ ಗ್ರಂಥಗಳಿಂದ ತುಂಬಿ, ಬಹುಮಾನಕ್ಕೆ ಪಾತ್ರವಾದ ಸಂಸ್ಕೃತವನ್ನು ತೆಗೆದುಕೊಳ್ಳುವುದೇ ಒಂದು ರೀತಿ; ಬಹುಮಾನ ದೊರೆಯಬಿದ್ದರೂ ಪ್ರಶಸ್ತವಾದ ಸಂಸ್ಕೃತವನ್ನು ತೆಗೆದುಕೊಳ್ಳುವುದೂ ಒಂದು ರೀತಿ; ಇವರ ಮೇಲೆ, ಎರಡೂ ಇಲ್ಲದೆ, ದುರ್ಬಲವಾಗಿ, ಸಂಸ್ಕೃತ ಪಂಡಿತರಿಂದಲೂ, ಇಂಗ್ಲಿಷ್ ವಿದ್ಯಾರ್ಥಿಗಳಿಂದಲೂ, ಲೋಕವ್ಯಾಪಾರದಲ್ಲಿ ತೊಡರಿಕೊಂಡ ಜನಸಾಮಾನ್ಯದಿಂದಲೂ ಅಸಡ್ಡೆ ಮಾಡಿಸಿಕೊಂಡು, ಕೈಕೊಟ್ಟು, ಎತ್ತುವರಿಲ್ಲದೆ ಮುರಿದುಬೀಳುತ್ತಿರುವ ಕನ್ನಡದ ವಿಷಯ ಹೇಳಬೇಕಾದದ್ದೇ ಇಲ್ಲ. ಕೇವಲ ಜ್ಞಾನವಿಕಾಸಕ್ಕಾಗಿಯೇ ಯಾರೂ ಕನ್ನಡವನ್ನು ಓದುವುದಿಲ್ಲ; ಜೀವನಕ್ಕೆ ಮಾರ್ಗವೋ, ಅದು ಕನಸಿಗೂ ಬರಲಿಲ್ಲ. ಜ್ಞಾನವೂ ಇಲ್ಲ, ಜೀವನವೂ ಇಲ್ಲ. ಇನ್ನು ಯಾವ ಪುರುಷಾರ್ಥಕ್ಕೆ ಇದನ್ನು ಕಲಿಯುವುದು? ಒಳ್ಳೆಯದು, ಮುಂದಾದರೂ ವೃದ್ಧಿಯಾದೀತೆಂದು ಅಭಿಮಾನದಿಂದ ಬಹುಮಾನದ ಆಶೆಯನ್ನು ತೊರೆದು, ವರ್ಷಕ್ಕೆ ಮೂರು ನಾಲ್ಕು ಜನ ಸೇರುತ್ತಾರಲ್ಲಾ, ಅವರೆಲ್ಲರೂ ಭಾಷಾಸೇವೆಯಲ್ಲಿ ಬದ್ಧಕಂಕಣರಾಗುತ್ತಾರೆ ಎಂದೇ ಭಾವಿಸೋಣ. ಆಯಿತು, ಇವರ ಪ್ರಯತ್ನವನ್ನೂ ಇವರ ಪಾಂಡಿತ್ಯದ ಫಲವನ್ನೂ ಮೆಚ್ಚತಕ್ಕವರು ಯಾರು? ಕನ್ನಡವನ್ನು ಹಿಡಿದದ್ದಕ್ಕಾಗಿ ಇವರನ್ನು ಆಡಿಕೊಳ್ಳುತ್ತಾ, ಹುಟ್ಟುಗನ್ನಡವನ್ನೂ ಮರೆಯುತ್ತಾ, ದೊಡ್ಡಮನುಷ್ಯರಾಗುವ ಇವರ ಸಹಪಾಠಿಗಳೇ ಅಲ್ಲವೇ? ಇದು ಹೇಗಾಯಿತು ಎಂದರೆ, ಊರಕಿವಿಗೆಲ್ಲಾ ಹತ್ತಿಯಿಟ್ಟು, ಒಬ್ಬನಿಗೆ ವೀಣೆ ಹೇಳಿದ ಹಾಗಾಯಿತು ಸರಸ್ವತೀದೇವಿ. ಜನರಿಗೆ ಹಿರಿಯರಿಂದ ಬರುವ ಒಡವೆಗಳಲ್ಲಿ ಭಾಷೆ ಒಂದು; ಅದು ಚೆನ್ನಾಗಿದ್ದಷ್ಟೂ ಭೂಷಣ. ಅದರಲ್ಲಿ ಎಲ್ಲರಿಗೂ ಪರಿಶ್ರಮವಿದ್ದು, ಪ್ರಮುಖರಾದವರಿಗೆ ಪೂರ್ಣಜ್ಞಾನವಿದ್ದರೆ, ಅವರಿಗೆ ಲಾಭವೂ, ಇವರಿಗೆ ಉತ್ಸಾಹವೂ ಉಂಟಾಗಿ, ಭಾಷೆಯೂ ಉತ್ಕೃಷ್ಟವಾಗುತ್ತದೆ. ಹಾಗೆ ಗರಿಬೆಳೆದು ಪೋಷಣೆಯನ್ನು ಕೇಳದ ಕಾಲಬಂದಾಗ ನೋಡಿಕೊಳ್ಳೋಣ. ಬಲವಂತದಿಂದ ಬದುಕಿಸಿಕೊಂಡು ಪ್ರಾಣವನ್ನು ಹುಯ್ಯುವ ಅಲ್ಲ. ಇದರ ಕೆಡಕು ಆಗಲೇ ಕಾಣುತ್ತದೆ; ಬೇಗ ಕಣ್ಣುಬಿಟ್ಟು ನೋಡಿ ಯೂನಿವರ್ಸಿಟಿಯವರು ಸಮರ್ಪಕವಾದ ಏರ್ಪಾಟನ್ನು ಮಾಡಲೆಂದು ಹಾರೈಸಬೇಕಾಗಿದೆ.

೭. ಕನ್ನಡ ವಿದ್ಯೆಯನ್ನು ಕಲಿಸತಕ್ಕವರು ಅದಕ್ಕೆ ತಂದ ಅಪಾಯವನ್ನು ನೋಡಿದೆವಷ್ಟೆ; ಅದನ್ನು ಹಿಂದೆ ಓದಿ ಬಿರುದು ಪಡೆದವರು ಮಾಡುವ ಸಹಾಯವೇನು ನೋಡೋಣ. ಇವರಿಗೆ ಕನ್ನಡದ ಏಳಿಗೆಯ ಆತಂಕವೇ ಇಲ್ಲ. ಇಂಗ್ಲಿಷ್ ಕಾವ್ಯದ ಉತ್ತಮ ಗುಣಗಳನ್ನು ಭೋಗಿಸಿ, ಅದರ ಅಂದವನ್ನು ಕಂಡ ಇವರ ಕಣ್ಣಿಗೆ, ಇಂಪನ್ನು ಕೇಳಿದ ಇವರ ಕಿವಿಗೆ, ಕನ್ನಡ ಸೊಗಸದು. ಓದುವುದು ಆನಂದಕ್ಕೆ, ಇಲ್ಲ ಅರ್ಥಕ್ಕೆ, ಇವರ ಮನಸ್ಸಿನಲ್ಲಿ ಇಂಗ್ಲಿಷಿನಿಂದ ಎರಡೂ ಉಂಟು; ಕನ್ನಡದಿಂದ ಒಂದೂ ಇಲ್ಲ. ನಿಮ್ಮ ತಾಯಿಮಾತಿನಲ್ಲಿ ನಿಮಗೆ ಅಕ್ಕರೆಯೇ ಇಲ್ಲವಲ್ಲ ಎಂದು ಕೊರಗಿನಿಂದ ನಾವು ಆಕ್ಷೇಪಣೆ ಎತ್ತಿದರೆ [illegible]

ಮಾಡುವುದೇನು, ನಾವೂ ನಾಲ್ಕುದಿನ ಅದಕ್ಕೆ ಮಣ್ಣುಹಾಕಿದೆವು. ಅಪ್ಪ ನೆಟ್ಟ ಆಲದಮರ ಎಂದು ನೇತುಹಾಕಿಕೊಳ್ಳೋಣವೇ! ಕೆಲಸಕ್ಕೆ ಬಾರದ ಮಾತು; ಎಲ್ಲೋ ಒಂದು ಮೂಲೆಯಲ್ಲಿ ಹತ್ತುಜನ ಆಡುತ್ತಾರೆ; ಅದೂ ಅವರೂ ಎರಡು ಮೂರು ಸರ್ಕಾರಕ್ಕೆ ಸಿಕ್ಕಿ ಹೋಳು ಒಡೆದಿದ್ದಾರೆ. ಬರವಣಿಗೆಯನ್ನು ನೋಡೇವೇ, ಮೇಲೆ ತೋಟ ಶೃಂಗಾರ, ಒಳಗೆ ಗೋಣಿಸೊಪ್ಪು, ಯಾವುದಾದರೂ ಒಂದು ನಮ್ಮ ಹೃದಯವನ್ನು ಆನಂದಪ್ರವಾಹದಲ್ಲಿ ತೊಳೆದು, ದು:ಖಮಯವಾದ ಈ ಸಂಸಾರದಲ್ಲೇ ಸ್ವರ್ಗಸುಖವನ್ನು ತಂದುಕೊಡುವಂತದು ಇದೆಯೇ? ಹಿತವಾಗಿ ಸಾರ್ಥಕವಾಗಿ ಹೊತ್ತು ಕಳೆಯಬಹುದಾದ ವಚನ ಕಾವ್ಯಗಳುಂಟೇ? ಹಿಂದಿನ ಕಾಲದ ಸತ್ಯವಾದ ವೃತ್ತಾಂತವಿಲ್ಲ; ಸಾಮಾನ್ಯವಾದ ವ್ಯವಹಾರಜ್ಞಾನವನ್ನು ಕೊಡುವ ಪ್ರಸಂಗವಿಲ್ಲ; ಅದ್ಭುತ ಇಲ್ಲ ತುಚ್ಛವಾದ ಮಹಾತ್ಮೆಯಿಂದ ಪೊಳ್ಳಾಗದಂಥ ದೇಶದ ಮಹನೀಯರ ಜೀವನಚರಿತ್ರೆ ಇಲ್ಲ; ಎಲ್ಲಕ್ಕಿಂತ, ಮನುಷ್ಯನ ಜೀವನೋಪಾಯಕ್ಕೂ ಸುಖಲೋಲುಪ್ತಿಗೂ ಅನುಕೂಲಿಸತಕ್ಕ ಶಾಸ್ತ್ರಗಳ ಪರಿಚಯಕ್ಕೆ ಅವಕಾಶವಿಲ್ಲ. ಈ ನಮ್ಮ ಕನ್ನಡವನ್ನು ಏನು ಕೊಳ್ಳೆ ಹೋಗುತ್ತದೆಂದು ಕಾಪಾಡಬೇಕು; ಕಷ್ಟಬಿದ್ದು ಹೆಚ್ಚಿಸಬೇಕು? ಅದರಲ್ಲಿ ನಮಗೆ ವೈರವೂ ಇಲ್ಲ, ಅದು ಇದ್ದರೆಷ್ಟು, ಹೋದರೆಷ್ಟು? ನಿಮಗೆ ಇನ್ನೇನೂ ಕೆಲಸವಿಲ್ಲದಿದ್ದರೆ, ಅದನ್ನು ಹಚ್ಚಿಸಿಕೊಂಡು ಹೊತ್ತುಕಳೆಯಿರಿ, ನಮಗೆ ದು:ಖವಿಲ್ಲ. ನಮ್ಮ ಪಾಲಿಗೆ ಸಾಕಾದಷ್ಟು ಕನ್ನಡ ತಾಯಹಾಲಿನಲ್ಲೇ ಬೆರೆದು ಬಂದು ಹೋಯಿತು; ಅಷ್ಟು ಆಡುತ್ತೇವೆ, ಸಾಲದಕ್ಕೆ ಇಂಗ್ಲಿಷ್ ಹಿಂದುಸ್ಥಾನಿ ಜೋಡಿಸುತ್ತೇವೆ. ಕಾಗದಗಳು ಬೇಕಾದರೆ ಇಂಗ್ಲಿಷಿನಲ್ಲಿ ಬರೆಯುತ್ತೇವೆ. ಏನೋ ಎರಡುದಿನ ನಾಲ್ಕುಜನಕ್ಕೆ ಮೇಲಾಗಿ ಬಾಳಿ ಹೊರಟು ಹೋಗುತ್ತವೆ. ನಿಮ್ಮ ಕನ್ನಡದಿಂದ ನಮಗೆ ಆಗಬೇಕಾದದ್ದು ಏನೂ ಇಲ್ಲ; ಆ ಹಾಳು ಕನ್ನಡಕ್ಕೆ ನಾವು ಪಟ್ಟ ರಗಳೆಯೇ ಸಾಕಾಗಿದೆ; ಒಂದು ಸಲ ಪರೀಕ್ಷೆ ಕೂಡ ಆಗದೆ ಹೋಗುವ ಸಂಕಟಕ್ಕೆ ಬಂದುಬಿಟ್ಟಿತು. ನಮ್ಮ ಹುಡುಗರನ್ನೂ "ಏತಕ್ಕೆ ಗೋಳು ಹುಯ್ದುಕೊಳ್ಳುತ್ತೀರಿ?" ಎಂದು ಹಾಸ್ಯವಾಡುತ್ತಾ ಉತ್ತರ ಹೇಳುವರು.

೮. ಆರ್ಯರೆ, ಇವರ ಮಾತನ್ನು ನಾವು ಮನಸ್ಸಿಗೆ ತೆಗೆದುಕೊಂಡರೆ ಒಳ್ಳೆಯದೆಂದು ತೋರುತ್ತದೆ. ಏಕೆಂದರೆ ಅದು ಬಲುಮಟ್ಟಿಗೆ ವಾಸ್ತವ. ಬಲುಮಟ್ಟಿಗೆ ಅದನ್ನು ನಾವು ಒಪ್ಪಬೇಕಾಗುತ್ತದೆ. ಆಕ್ಷೇಪಣೆಗೆ ಗಮನಕೊಡುವುದರಿಂದ ಮುಂದೆ ಯಾವ ದೋಷಗಳನ್ನು ಬಿಟ್ಟು, ಯಾವ ಗುಣಗಳನ್ನು ಸೇರಿಸಿ, ಸರ್ವಜನಸಮ್ಮತವಾಗುವಂತೆ ಕನ್ನಡ ಕಾವ್ಯಮಾಲೆ ಯನ್ನು ಬೆಳಸಬಹುದೋ, ಆ ಮಾರ್ಗ ಕಣ್ಣಿಗೆ ಹೊಳೆಯುತ್ತದೆ. ಅವರಿಗೂ ನಮಗೂ ಇಷ್ಟೇ ಭೇದ. ಕನ್ನಡ ಪುಸ್ತಕಗಳಲ್ಲಿ ಅವರಿಗೆ ಬರಿಯ ಹುಳುಕೇ ಕಾಣುತ್ತದೆ; ನಮಗೆ ಅಷ್ಟಿಲ್ಲ, ಆದರೂ ಬಲವಾದ ಕೊರತೆಗಳುಂಟೆಂದು ನಾವೂ ಬಲ್ಲೆವು. ಹುಳುಕನ್ನು ಕಂಡು ಅವರು ವಾತ್ಸಲ್ಯವನ್ನು ತೊರೆದಿದ್ದಾರೆ; ನಮಗೆ ಆ ಹುಳುಕೇ ವಾತ್ಸಲ್ಯವನ್ನು ಹೆಚ್ಚಿಸುತ್ತಿದೆ. ಇತರ ಹವ್ಯಾಸಗಳಲ್ಲಿ ಅವರು ಮಗ್ನರಾಗಿ, ಕನ್ನಡದ ಪಾಡು ಏನು ಎನ್ನುವ ಚಿಂತೆಯೇ

ಅವರಿಗೆ ಹತ್ತುವುದಿಲ್ಲ. ನಮಗೆ ಮೊದಲಿಂದಲೂ ಕನ್ನಡದಲ್ಲಿ ಬಳಕೆಯೂ ಅಕ್ಕರೆಯೂ ಸಡಗರವೂ ಹುಟ್ಟಿ, ಎಂದಿಗೆ ನಾವೂ ಕೈಯಲ್ಲಾದಷ್ಟು ಸೇವೆ ಮಾಡಿ ಕನ್ನಡವನ್ನು ಬೆಳೆಯುವ ಪದವಿಗೆ ತಂದೇವು ಎಂದು ಕುದ್ದುಕೊಳ್ಳುತ್ತೇವೆ. ಮುಖ್ಯಭಾಷೆಯಲ್ಲದಿದ್ದರೂ. ತನ್ನ ಪ್ರಾಂತ್ಯದಲ್ಲಿ ತಾನು ಉಪಭಾಷೆಯಾಗಿರುವಂತೆ ಆದರೂ ಮಾಡಬೇಕು. ಹೀನಸ್ಥಿತಿಯನ್ನು ನೋಡಿ ಕೈಬಿಡಬಾರದು; ದೋಷಗಳನ್ನೇ ಎತ್ತಿಹಾಕುತ್ತಾ ಅಲ್ಲಗಳೆಯಬಾರದು; ಭಾಷೆಯ ಮತ್ತು ಕಾವ್ಯಮಾಲೆಯ ಪೂರ್ವೋತ್ತರವನ್ನು ತಿಳಿದು, ಅವು ಮುಂದೆ ಶೋಭಿಸಿ ತಮ್ಮ ಸತ್ವದಿಂದಲೇ ಜನರು ಮೋಹಿಸುವಂತೆ ಮಾಡುವುದಕ್ಕಾಗಿ, ಎಲ್ಲರೂ ಅಭಿಮಾನಪಟ್ಟು ಕೊಂಡು ಯೋಗ್ಯತಾನುಸಾರ ಸಹಾಯಮಾಡಬೇಕು. 'ಹಳ್ಳಕ್ಕೆ ಬಿದ್ದ ಹುಲಿಗೆ ತಲೆಗೊಂದು ಕಲ್ಲು' ಎನ್ನುವ ಗಾದೆಯ ಉಪದೇಶಕ್ಕೆ ಸರಿಯಾಗಿ ನಡೆಯಬಾರದು. ನಮ್ಮ ಭಾಷೆಯನ್ನು ನಾವು ಎತ್ತದೇ ಹೋದರೆ, ಎತ್ತುವರು ಯಾರು? ಎತ್ತುವುದಕ್ಕೆ ನಿಂತರೆ, ತಡೆಯುವರು ಯಾರು?

೯. ಇದಲ್ಲದೆ, ನಮ್ಮ ಕನ್ನಡವನ್ನು ಮುಂದಕ್ಕೆ ತರುವುದಕ್ಕೆ ಬೇಕಾದ ಹೆಮ್ಮೆಯೂ ಹೆಬ್ಬುಬ್ಬೂ ನಮ್ಮಲ್ಲಿ ಉಂಟು. ನಮ್ಮ ಮಾತೇನೂ ನೆನ್ನೆಮೊನ್ನೆಯ ಕಾಡುಮಾತಲ್ಲ; ನಮ್ಮ ಕಾವ್ಯಮಾಲೆ ಓದುಬರಹ ಬರದ ಒಡ್ಡರು ಹೇಳುವ ಕುರುಕುಪದವೂ ಅಲ್ಲ. ಆರ್ಯರು ಇಂಡಿಯಕ್ಕೆ ಬರುವುದಕ್ಕೆ ಮೊದಲೇ ಇಲ್ಲಿ ದ್ರಾವಿಡಭಾಷೆ ನೆಲಸಿತ್ತು. ಈಚೆಗೆ ಒಡೆದು ಮುಖ್ಯವಾಗಿ ತೆಲುಗು, ತಮಿಳು, ಕನ್ನಡ, ಮಲೆಯಾಳ ಎಂದು ನಾಲ್ಕು ಕವಲಾಗಿದೆ. ಇವುಗಳು ಪ್ರತಿಯೊಂದರಲ್ಲಿಯೂ ವಿಸ್ತಾರವಾದ ಗ್ರಂಥಮಾಲೆ ಹುಟ್ಟಿದೆ. ಕನ್ನಡದಲ್ಲಿ ಸುಮಾರು ಐದು ಆರನೆಯ ಶತಮಾನದಿಂದಲೂ ಕಾವ್ಯಗಳನ್ನು ಬರೆದಿದ್ದಾರೆಂದು ಸ್ಪಷ್ಟವಾಗಿದೆ. ಈಚೆಗೆ ಸಾಧಾರಣವಾಗಿ ಹೊಸಗನ್ನಡದಲ್ಲಿಯೂ ಬರೆದಿರುತ್ತವೆ; ಕೆಲವರು ಹಳಗನ್ನಡವನ್ನು ಕಲಿತು ಆಗಾಗ್ಗೆ ಅದರಲ್ಲಿ ಬರೆದಿರುವುದೂ ಉಂಟು. ನಮ್ಮ ಹಿರಿಯರು ಹೇಳಿಕೊಳ್ಳುತ್ತಿದ್ದ ಇತಿಹಾಸಗಳೂ, ನಂಬುತ್ತಿದ್ದ ಮತಗಳೂ, ನಡೆಯುತ್ತಿದ್ದ ಆಚಾರಗಳೂ, ಈ ಪುಸ್ತಕಗಳಲ್ಲಿ ಕಾಣಬರುತ್ತವೆ. ಇದಲ್ಲದೆ, ಕಾವ್ಯಲಕ್ಷಣ, ವ್ಯಾಕರಣ, ನಿಘಂಟು, ಕೆಲವು ಪ್ರಕೃತಿಶಾಸ್ತ್ರಗಳು ಕೂಡ ಸಿಕ್ಕುತ್ತವೆ. ಈ ಭಂಡಾರವನ್ನೆಲ್ಲಾ ಕೆರೆಯಲ್ಲಿ ಮುಳುಗಿಸಿ ಕೈಬೀಸಿಕೊಂಡು ಮನೆಗೆ ಬರುವಷ್ಟು ಮರುಳುತನ ಎಲ್ಲಾದರೂ ಉಂಟೆ?

೧೦. ಆದರೆ ಈ ರೀತಿ ನಮ್ಮ ಕಾವ್ಯಮಾಲೆಯನ್ನು ಬಲಮಾಡಬೇಕೆಂದು ಹೊರಡುವವರು ಮೊದಲು ಗಮನಿಸತಕ್ಕ ಅಂಶಗಳು ಕೆಲವಿವೆ. ಭಾಷೆಯಲ್ಲೂ ಕಾವ್ಯಮಾಲೆಯಲ್ಲೂ ಇರತಕ್ಕ ಗುಣಗಳನ್ನು ಉಳಿಸಿಕೊಳ್ಳಬೇಕೆಂದು ಹೇಳಬೇಕಾಗಿಯೇ ಇಲ್ಲ. ಅವನ್ನು ತೆಗೆದು ತೋರಿಸ ಬೇಕಾಗಿಯೂ ಇಲ್ಲ. ಆದರೆ ಇವು ಎರಡೂ ಯಾವ ಆಶ್ರಯದಲ್ಲಿ, ಯಾವ ಸಂದರ್ಭಗಳಲ್ಲಿ ಬೆಳೆದುವು? ಇವುಗಳಲ್ಲಿ ಬಂದಿರತಕ್ಕ ದೋಷಗಳೇನು? ಮುಂದೆ ಇವಕ್ಕೆ ಸೇರತಕ್ಕ ಗುಣಗಳು ಯಾವುವು? ಈ ವಿಚಾರವನ್ನು ನಿಷ್ಪಕ್ಷಪಾತದಿಂದ ಮಾಡುವುದು ಒಳ್ಳೆಯದು. ಹಾಗೆ ಮಾಡಿ

ಕೆಲವು ವಿಧಿಗಳನ್ನು ಏರ್ಪಡಿಸಿಕೊಳ್ಳದೆ ಹೋದರೆ, ನೀವು ಎಷ್ಟೇ ಪುಸ್ತಕ ಬರೆಯುತ್ತಾ ಹೋಗಿ, ವಿದ್ಯಾವಂತರು ನಿಮ್ಮ ಕಡೆ ಕಣ್ಣೆತ್ತಿ ಕೂಡ ನೋಡುವುದಿಲ್ಲ; ಸಾಮಾನ್ಯ ಜನರಿಗಂತೂ ಅದರ ಸೆಲೆಯೇ ತಿಳಿಯುವುದಿಲ್ಲ.

೧೧. ಕನ್ನಡ ಭಾಷೆ ಪ್ರಬಲವಾಗುವುದಕ್ಕೆ ಸಂಸ್ಕೃತವೇ ಆಧಾರವೆಂದು ಎಲ್ಲರೂ ಬಲ್ಲ ವಿಷಯವಾಗಿದೆ. ಆರ್ಯರು ದಕ್ಷಿಣಕ್ಕೆ ಬಂದು ದ್ರಾವಿಡರಲ್ಲಿ ಉತ್ತಮವಾದ ನಾಗರಿಕತೆಯನ್ನು ಹರಡಿದರು; ಆ ನಾಗರಿಕತೆಗೆ ತಕ್ಕ ಭಾವಗಳಿಗೆ ಶಬ್ದಗಳನ್ನು ಹೊಂದಿಕೊಟ್ಟು ಭಾಷೆಯನ್ನು ಪುಷ್ಟಿಮಾಡಿದರು; ಬರಹವನ್ನು ಕಲಿಸಿಕೊಟ್ಟರು; ಕಾವ್ಯಸ್ವರೂಪವನ್ನು ತೋರಿಸಿಕೊಟ್ಟರು; ಆ ಕಾವ್ಯಕ್ಕೆ ಬೇಕಾದ ವೃತ್ತಗಳನ್ನೂ ಅಲಂಕಾರ ವ್ಯಾಕರಣಗಳನ್ನೂ, ಪುರಾಣ ಇತಿಹಾಸಗಳನ್ನೂ ಒದಗಿಸಿಕೊಟ್ಟರು. ಈ ರೀತಿ ಉಳದ ಹೊಲದಲ್ಲಿ ಬೆಳೆಮಾಡಿ ನಾಡೆಲ್ಲಾ ಜೀವಕಳೆಯಿಂದ ತುಂಬಿ ತುಳುಕಾಡುವಂತೆ ಮಾಡಿಟ್ಟರು. ತಮ್ಮ ಸಂಸ್ಕೃತಭಾಷೆಯ ಮತ್ತು ಕಾವ್ಯದ ಬಲದಿಂದ ದ್ರಾವಿಡಜನರಿಗೆ, ಲಾಭವನ್ನು ಕಾಣಿಸಿದರೇ ಹೊರತು ನಷ್ಟವೇನೂ ತರಲಿಲ್ಲ. ಅವರ ಭಾಷೆ ಪುಷ್ಟಿಯಾಯಿತು, ಅವರ ಜ್ಞಾನ ವೃದ್ಧಿಯಾಯಿತು, ಅವರ ಮತ ಶ್ರೇಷ್ಠವಾಯಿತು. ಆದರೆ ಕನ್ನಡದಲ್ಲಿ ಕಾವ್ಯಗಳನ್ನು ಬರೆಯತೊಡಗಿದ ಜೈನರು ಮತ್ತು ಬ್ರಾಹ್ಮಣರು ಇದೇ ರೀತಿ ಕರ್ಣಾಟಕರ ಶ್ರೇಯಸ್ಸನ್ನು ಕೋರಲಿಲ್ಲ. ಇವರೂ ಮತವಿಷಯವಾದದ ತತ್ವಗಳನ್ನು ಜನರಿಗೆ ಬೋಧಿಸಿದ್ದು ನಿಜ; ಆದರೆ ಇವರ ಗ್ರಂಥಗಳೆಲ್ಲಾ ಮುಕ್ಕಾಲು ಪಾಲು ವಸ್ತುವಿನಲ್ಲಾಗಲಿ, ಭಾವಗಳಲ್ಲಾಗಲಿ, ಶೈಲಿಯಲ್ಲಾಗಲಿ, ಜನಸಾಮಾನ್ಯಕ್ಕೆ ರುಚಿಸುವಂತೆ ಬರೆಯದೇ ಇರುವುದು ವ್ಯಸನಪಡತಕ್ಕದ್ದಾಗಿದೆ. ಇವರ ಗ್ರಂಥಗಳನ್ನು ಸಾಮಾನ್ಯಜನರು ಓದುತ್ತಿದ್ದರೋ - ಎಲ್ಲರೂ ಓದುವುದೆಲ್ಲಿ ಬಂತು? - ಓದಿಸಿ ಕೇಳುತ್ತಿದ್ದರೋ ಇಲ್ಲವೋ ಹೇಳುವುದು ಕಷ್ಟ. ಸಾಮಾನ್ಯ ಜನರೆಂದರೆ ದಕ್ಷಿಣದಲ್ಲಿ ಆರ್ಯರಲ್ಲ, ಶೂದ್ರರು; ಶೂದ್ರರನ್ನು ಕಂಡರೆ ಆರ್ಯರಿಗೆ ತಿರಸ್ಕಾರ ಈಗಲೂ ಇದೆ; ಹಿಂದೆ ಇನ್ನೂ ಹೆಚ್ಚೇ ಇದ್ದಿರಬೇಕು. ಈ ಶೂದ್ರರು ತಮ್ಮನ್ನು ಗೌರವದಿಂದ ಕಾಣುವುದಕ್ಕೆ ಎಷ್ಟು ಬೇಕೋ ಅಷ್ಟು ಅವರಿಗೆ ಉಪದೇಶವನ್ನು ಮಾಡಿದರು; ಮಿಕ್ಕದ್ದನ್ನೆಲ್ಲಾ ತಮ್ಮಲ್ಲೇ ಬಚ್ಚಿಟ್ಟುಕೊಂಡರು. ಗ್ರಂಥಗಳನ್ನು ಅವರ ಏಳಿಗೆಗೆ ಬರೆಯಲಿಲ್ಲ. ರಾಜಸಭೆಗಳಲ್ಲಿ ಸುಖಪುರುಷನಾದ ಪೋಷಕನಿಗೆ ಹೊಗಳುಭಟ್ಟರಾಗಿ, ತಮ್ಮೊಳಗೆ ಒಬ್ಬರನ್ನೊಬ್ಬರು ಜರೆಯುತ್ತಾ, ಸಂಸ್ಕೃತ ಕವಿಗಳನ್ನು ತಲೆಮೆಟ್ಟಿ ಹಾರಿದೆವೆಂದು ಪ್ರತಿಷ್ಠೆ ಕೊಚ್ಚುತ್ತಾ, ಹತ್ತು ಎಳೆ ಸಂಸ್ಕೃತ ಒಂದು ಎಳೆ ಕನ್ನಡ, ಹೀಗೆ ಕೂಡಿಸಿ ಬರಿಯ ಶಬ್ದಾಡಂಬರದ ಮಗ್ಗವನ್ನು ಹೆಣೆಯುತ್ತಾ, ದೊಡ್ಡ ಬಿರುದುಗಳನ್ನೂ ಧನವನ್ನೂ ಅಗ್ರಹಾರಗಳನ್ನೂ ಪಡೆಯುವುದಕ್ಕಾಗಿ ಸಂಸ್ಕೃತ ಪಂಡಿತರಾದ ಕವಿಗಳು ಈ ಗ್ರಂಥಗಳನ್ನು ಬರೆದದ್ದು. ರಾಜರ ಪ್ರಾಬಲ್ಯ ಮುರಿದು ಹೋದ ಹಾಗೆಲ್ಲಾ ಈ ಕವಿಗಳ ಅಬ್ಬರವೂ ಅಡಗುತ್ತ ಬಂತು. ಶಿವಭಕ್ತರ ಕಾಲದಿಂದ ಸ್ವಲ್ಪಮಟ್ಟಿಗೆ ಅತಿ ಪಾಂಡಿತ್ಯಕ್ಕೆ ಹೋಗದೆ ಜನಮಂಡಲಿಗಾಗಿ ಬರೆದ ಕಾವ್ಯಗಳು

ದೊರಕುತ್ತವೆ. ಆದರೆ ಪಾಂಡಿತ್ಯ ಅತಿವೃಷ್ಟಿಯಾಗಿ ಬ್ರಾಹ್ಮಣ ಜೈನರ ಕಾವ್ಯಗಳು ನರೆತು ಕೊಂಡುವು; ಲಿಂಗಾಯಿತರ ಕಾವ್ಯಗಳು ಪಾಂಡಿತ್ಯ ಸಾಲದೆ ಬಂದು ಕಣ್ಣಿಗೆ ಒಣಬರಲಾಗಿ ಬೆಂತುಕೊಂಡಿವೆ. ಈಚೀಚೆಗಂತೂ ಯಕ್ಷಗಾನ, ದೊಂಬಿದಾಸರ ಪದ, ಶುಕಸಪ್ತತಿ, ಹಲ್ಲಿಯ ಶಕುನ, ಇವೇ ಜನಗಳಿಗೆ ಮಹಾಕಾವ್ಯಗಳು! ಏನು ಇಕ್ಕಟ್ಟಿನಲ್ಲಿ ಸಿಕ್ಕಿದೆವು ! ಹಿಂದಿನ ಸಂಸ್ಕೃತದ ಪ್ರಾಬಲ್ಯವೂ ಅದರ ಕಾವ್ಯಮಾರ್ಗವೂ ಕುಗ್ಗಿ ಹೋದುವು; ಮುಂದೆ ಇಂಗ್ಲಿಷಿನ ಪ್ರಾಬಲ್ಯವೂ ಅದರ ಕಾವ್ಯಮಾರ್ಗವೂ ಹೆಚ್ಚುವಂತೆ ತೋರುತ್ತದೆ. ಆದರೆ ಇದು ಇನ್ನೂ ದೃಢವಾಗಿ ಎಲ್ಲರ ಮನಸ್ಸಿಗೂ ಹತ್ತಿಲ್ಲ. ನಮಗೇನೋ ಇದು ಸ್ವತಸ್ಸಿದ್ಧವಾಗಿ ಕಾಣುತ್ತದೆ; ಇಂಗ್ಲಿಷ್ ಸಾಹಿತ್ಯವೇ ಜೀರ್ಣವಾದ ನಮ್ಮ ಕಾವ್ಯಮಾಲೆಯನ್ನು ಕೈಕೊಟ್ಟು ಎತ್ತಬೇಕು; ಇಂಗ್ಲಿಷ್ ಸಾಹಿತ್ಯವೇ ಸಂಸ್ಕೃತ ಸಾಹಿತ್ಯದಿಂದ ನಮ್ಮ ಕಾವ್ಯಮಾಲೆಗೆ ಇಳಿದಿರುವ ದೋಷಗಳನ್ನು ಪರಿಹಾರಮಾಡಬೇಕು.

೧೨. ಹಾಗೆ ಪರಿಹಾರವಾಗತಕ್ಕ ದೋಷಗಳು ಯಾವುವು ವಿಚಾರಿಸೋಣ. ಇವನ್ನು ಮುಖ್ಯವಾಗಿ ಕಾವ್ಯಗಳ ವಸ್ತು, ರೀತಿ, ಭಾವ, ವರ್ಣನೆ, ಶೈಲಿ, ರೂಪ ಎಂದು ಆರು ಬಗೆಯಾಗಿ ತೆಗೆದುಕೊಳ್ಳಬಹುದು.

(i) ಕಾವ್ಯವಸ್ತುವಿನ ವಿಷಯದಲ್ಲಿ ಎಲ್ಲಾ ಹಳೆಯ ಕಥೆಗಳೇ ಹೊರತು ಹೊಸಹೊಸ ಸಂಗತಿಗಳು ಯಾವಕವಿಯಲ್ಲಿಯೂ ಸಿಕ್ಕುವುದಿಲ್ಲ. ಜನರ ಬಾಳಿಕೆಯಲ್ಲಿ ನಡೆಯತಕ್ಕ ವಿಚಿತ್ರಗಳನ್ನು ಅನುಸರಿಸಿ ಕಥೆಯನ್ನು ಕಟ್ಟಿ ಕುತೂಹಲವನ್ನು ಹುಟ್ಟಿಸಬಲ್ಲ ಕವಿಯೇ ಇಲ್ಲ... ಆಯಾ ಮತದ ಪುರಾಣ, ಇತಿಹಾಸ, ಇವು ಬಿಟ್ಟರೆ ಬೇರೆ ಹಾಡತಕ್ಕ ದಾಸರೇ ಇಲ್ಲವೋ!

(ii) ಕಾವ್ಯರೀತಿಯೂ ಅಷ್ಟೆ, ಎಲ್ಲಾ ಒಂದೇ ಕ್ರಮ. ಸೂತ್ರಕ್ಕೆ ಸ್ವತಂತ್ರವನ್ನು ಮಾರಿಕೊಂಡ ಕವಿಗಳಿಗೆ ಚಮತ್ಕಾರ ಏನು ಇದ್ದೀತು? ಒಂದರ ಪಡಿಯಚ್ಚು ಒಂದು; ಇಲ್ಲದಿದ್ದರೆ ಮಹಾಕಾವ್ಯವಾಗುವ ಪಾಪ ಉಂಟೆ? ಕವಿಯ ಕಂಠಕ್ಕೆ ಸೂತ್ರವೆಂಬ ಹೆಬ್ಬಾವು ಸುಲಿದುಕೊಂಡು ಬಿಗಿಯುತ್ತ ಹೋದಹಾಗೆಲ್ಲಾ ಕೀಲುಕೊಟ್ಟಂತೆ ಹೊರಡುತ್ತವೆ ನೋಡಿ ಒಂದಾದ ಮೇಲೊಂದು----ದೇವತಾಸ್ತುತಿ, ಆತ್ಮಶ್ಲಾಘನೆ, ಕುಕವಿನಿಂದೆ, ಸಮುದ್ರವರ್ಣನೆ, ದೇಶ, ಪುರ, (ಅದರಲ್ಲೂ ಹೂವಿನಂಗಡಿ, ಸೂಳೆಗೇರಿ ಮರೆಯುವದೇ ಇಲ್ಲ). ರಾಜ, ರಾಣಿ, ಮಕ್ಕಳ ಬಯಕೆ, ವರ, ಮಗುವಿನ ಆಟ, ಹೀಗೆ ತೇರಿನ ಹೊರಜಿಯಂತೆ ಎಷ್ಟು, ಕಾವ್ಯದ ಉದ್ದಕ್ಕೂ!

(iii) ಒಂದೇ ಕಥೆ, ಒಂದೇ ಕ್ರಮವಾದರೂ ಭಾವಗಳೇನಾದರೂ ಹೊಸವು ಕಲಿಯ ಬಹುದೇ? ನಾಟಕವೇ, ನಾಯಕನಾಯಕಿಯರು ಹೀಗೇ ಇರಬೇಕು, ಇಂತ ಮಾತೇ ಆಡಬೇಕು. ಇಷ್ಟು ಸಲವೇ ಮೂರ್ಛೆ ಬೀಳಬೇಕು. ಕಾವ್ಯವೇ, ಕವಿಸಮಯಗಳು ಭದ್ರ, ಅಲಂಕಾರ ಕಂಠಹಾರವಾಗಿರಲಿ. ಬಾಯಿಬಿಟ್ಟರೆ ಒಂದು ಮುತ್ತು ಸುರಿಯಬೇಕು. ಅವರ ಹಾಗೆ ನೆಟ್ಟಗಿ

ಪದ್ಯವನ್ನು ಬರೆದವನೂ ಒಬ್ಬ ಪಂಡಿತನೇ? ಆ ವಿಜಾತೀಯವಾದದ ಶ್ಲೇಷೆ, ವಿರೋಧಾಭಾಸ ಗಳಿಗೆ ಇವರಿಲ್ಲದಿದ್ದರೆ ಆಸರೆ ಇನ್ನೆಲ್ಲಿ? ಸವೆದ ದಾರಿಯಿಂದ ಕದಲಕೂಡದು.

(iv) ಇನ್ನು ವರ್ಣನೆಯನ್ನು ಕುರಿತು ಹೇಳಬೇಕಾಗಿಲ್ಲ. ಕಣ್ಣಿಗೆ ಹಬ್ಬವಾದ ಸೃಷ್ಟಿಯ ಅಂದಚಂದಗಳನ್ನು ಸಹಜವಾಗಿ ಚಿತ್ರಿಸುವ ಕೌಶಲವನ್ನೇ ಅರಿಯರು ನಮ್ಮ ಕವಿಗಳು. ಎಲ್ಲಕ್ಕೂ ಕಿವಿ ಮೂಗು ಹರಿದು, ಕೊಂಬು ಕೋಡು ಹತ್ತಿಸಿ ವಿಕಾರಮಾಡುತ್ತಾರೆ. ಇವರ ಉತ್ಪ್ರೇಕ್ಷೆಗಳೂ ಅತಿಶಯೋಕ್ತಿಗಳೂ ಲೋಕದಲ್ಲಿ ಯಾರೂ ಕಾಣದಂತವು.ಇದ್ದದ್ದನ್ನು ಇದ್ದಹಾಗೆ ಹೇಳುವುದು ಎಷ್ಟು ಅಪೂರ್ವವೆಂದರೆ, ಎಲ್ಲಾದರೂ ಪ್ರಜ್ಞೆತಪ್ಪಿ ಬಂದುಬಿಟ್ಟರೆ, ಅದನ್ನೂ ಸ್ವಭಾವೋಕ್ತಿ ಎಂಬ ಅಲಂಕಾರವನ್ನಾಗಿ ತಿಳಿಯುತ್ತಾರೆ.

(v) ಶೈಲಿ.. ಎಲ್ಲೋ ಸಂಸ್ಕೃತದಲ್ಲಿ ಬರೆಯುವುದಕ್ಕೆ ಹೊರಟು, ಮರೆತು ಕನ್ನಡದ ಪ್ರತ್ಯಯಗಳನ್ನು ಹತ್ತಿಸಿದ ಹಾಗೆ ಕಾಣುತ್ತದೆ. ಪುಟ್ಟವಾಗಿಯೂ ಇಂಪಾಗಿಯೂ, ತಿರುಳುಳ್ಳವಾಗಿಯೂ ಇರುವ ಕನ್ನಡ ಮಾತುಗಳನ್ನು ಮೂಲೆಗೆ ತಳ್ಳಿ, ಎರಡು ಮೂರು ಪಾದ ಉದ್ದವಾದ ಸಂಸ್ಕೃತ ಸಮಾಸಗಳ ಆಡಂಬರದಿಂದ ಅನ್ಯಾಯವಾಗಿ ಭಾಷೆಯನ್ನು ಹಿಂದುಮಾಡಿದರಲ್ಲ! ಸಂಸ್ಕೃತದ ಆರ್ಭಟವಿಲ್ಲದೆ ಕನ್ನಡದಲ್ಲಿ ಗ್ರಂಥವನ್ನೇ ಬರೆಯುವುದಕ್ಕೆ ಆಗುವುದಿಲ್ಲ ಎಂದು ಬಾಯಿಬಡಿಯುವರಲ್ಲ! ದಿಟ, ಈ ಕಾಲದ ಭಾಷೆ ಯಾವುದೂ ಬೆರಕೆಯಾಗದೆ ಶುದ್ಧವಾಗಿಲ್ಲ; ಆದರೆ ಯಾವ ಮಾತುಗಳನ್ನು ಜನಮಂಡಲಿ ಪರಭಾಷೆ ಯೆಂಬ ಗಮನವೇ ಇಲ್ಲದೆ ಬಳಸುವುದೋ ಅವೆಲ್ಲಾ ಕನ್ನಡಕ್ಕೇ ಸೇರಿಹೋದವು. ಅಷ್ಟುಬಿಟ್ಟು, ಬೇಡವಾದ ಕಡೆ ಕೂಡ, ಸಂಸ್ಕೃತ ಬಲ್ಲೆವೆಂಬ ಕೊಬ್ಬಿನಿಂದ ಸ್ವೇಚ್ಛೆಯಾಗಿ ಶಬ್ದಗಳನ್ನು ಗಿಡಿದು, ಹತ್ತುಜನ ತಮ್ಮ ಪುಸ್ತಕವನ್ನು ಮುಟ್ಟದಂತೆ ಮಾಡಿಕೊಂಡರಲ್ಲ! ಇದಲ್ಲದೆ ಕನ್ನಡದ ಭಾಷೆಯ ಕ್ರಮಕ್ಕೆ ಸರಿಹೋಗದ ಕರ್ಮಣಿ ಮೊದಲಾದ ಪ್ರಯೋಗ ಗಳನ್ನು ಅಡಕುತ್ತಿರುವರಲ್ಲ! ಇದೇನು ಕನ್ನಡವೋ ನೀವೇ ನೋಡಿ:

"ವಿಲುಠತ್ ಘಂಟಾಪಟಿಷ್ಠಧ್ವನಿಬಧಿರಿತದಿಙ್ಮಂಡಲಂ ಕರ್ಣತಾಳಾ<br>
ನಿಲಲೋಲದ್ವೀಚಿಮಾಲಾಂಬರಸರಿದುದಕಂ ಪುಷ್ಕರೋಚ್ಚಾಟನವ್ಯಾ<br>
ಕುಲಿತ ಬ್ರಹ್ಮಾಸನಾಂಭೋರುಹವತಿವಿತತಾಯೋಗ ರತ್ನಪ್ರಭಾಪಿಂ<br>
ಗಲಿತಸ್ವರ್ಗಾತರಾಳಂ ಹಿಮಗಿರಿಧವಳಂ ಬಂದುದಿಂದ್ರದ್ವಿಪೇಂದ್ರಂ"

ಈ ಕನ್ನಡವನ್ನು ನೋಡಿ:

"ಮಹಾರಾಜಾ ದುರ್ಯೋಧನನು ನಿಮ್ಮಿಂದ ಈ ಸ್ಥಳದಲ್ಲಿ ನೋಡಲ್ಪಟ್ಟನೆ?" "ದುರ್ಯೋಧನನ ತೊಡೆಗಳೆಂಬ ಸ್ತಂಭಗಳನ್ನು ಮುರಿಯತಕ್ಕದ್ದರಲ್ಲಿ ನಿಶ್ಚೈಸಲ್ಪಟ್ಟ ವಿಜಯವುಳ್ಳ ಭೀಮಸೇನನು"

ಅಯ್ಯೋ ಕನ್ನಡ ಮಾತಾಡುವ ಜನರಾ, ನಿಮಗಾಗಿ ಪುಸ್ತಕವನ್ನು ಬರೆಯುವರು ಯಾರೂ

ಕಾಣಲಿಲ್ಲ; ತಮ್ಮ ಪಾಂಡಿತ್ಯವನ್ನು ತಮ್ಮಂತ ಪಂಡಿತರಲ್ಲಿ ಮೆರೆಯುವುದಕ್ಕೋ ಬರೆಯುವಂತೆ ಕಾಣುತ್ತದೆ.

(೧೧) ಕಾವ್ಯದ ರೂಪವೋ ಸಾಮಾನ್ಯವಾಗಿ ಎಲ್ಲಾ ಪದ್ಯವೇ. ಜನರು ಹೆಚ್ಚಾಗಿ ಮೋಹಿಸ ತಕ್ಕುವು ನಾಟಕಗಳು, ವಚನಕಾವ್ಯಗಳು. ಇವೆರಡೂ ಕನ್ನಡದಲ್ಲಿ ಕಡಿಮೆ. ಹೆಸರಿಗೊಂದು ಹಿಂದಿನ ನಾಟಕವಿದೆ; ಸಂಸ್ಕೃತ ಆಡುವುದು ನಿಂತುಹೋದ ಎರಡು ಸಾವಿರ ವರ್ಷದ ಮೇಲೂ ಅದೇ ಭಾಷೆಯಲ್ಲಿ ಬರೆಯುತ್ತಿದ್ದರೇ ಹೊರತು, ಜನರು ಆಡುವ ದೇಶಭಾಷೆಗಳಲ್ಲಿ ಬರೆಯುವ ಯೋಚನೆಯೇ ಯಾರಿಗೂ ಬರಲಿಲ್ಲ. ಇದೊಂದರಿಂದಲೇ ಪಂಡಿತರಿಗೆ ಪಾಮರರ ಮೇಲೆ ಇದ್ದ ಮಮತೆ ಎಷ್ಟು ಎನ್ನುವುದು ಹೊರಪಡುತ್ತದೆ. ವಚನ ಕಾವ್ಯಗಳೂ ಎಲ್ಲೋ ಕೆಲವು ಇವೆ; ಆದರೆ ಇವೂ ಛಂದಸ್ಸಿಲ್ಲದ ಪದ್ಯಕಾವ್ಯಗಳೆಂದೇ ಹೇಳಬಹುದು. ಸುಲಭಶೈಲಿಯಲ್ಲಿ ಲೌಕಿಕ ವಿಷಯಗಳನ್ನು ರಂಜನೆ ಮಾಡತಕ್ಕುವು ಇಲ್ಲವೇ ಇಲ್ಲ. ಈಗೀಗ ಈ ಕೊರತೆಗಳನ್ನು ಹೋಗಲಾಡಿಸುವ ಪ್ರಯತ್ನದಲ್ಲಿರುತ್ತಾರೆ.

೧೨. ಮೇಲೆ ಹೇಳಿದ ದೋಷಗಳಿಂದ ನಮ್ಮ ಕಾವ್ಯಮಾಲೆಯನ್ನು ಸಾಧಾರಣ ಜನರು ಓದಿ ಅರ್ಥಮಾಡಿಕೊಳ್ಳಲೇ ಆರರು; ಇಂಗ್ಲಿಷ್ ಬಲ್ಲ ವಿದ್ಯಾವಂತರು ಎಳ್ಳಷ್ಟಾದರೂ ಹರ್ಷವಿಲ್ಲ, ಲಾಭವಿಲ್ಲ, ಎಲ್ಲಾ ಕೃತ್ರಿಮ, ಅಸಂಬದ್ಧ, ಎಂದು ಕೈಬಿಟ್ಟುಬಿಟ್ಟರು; ಸಂಸ್ಕೃತ ವಿದ್ವಾಂಸರಂತೂ ಕನ್ನಡದಲ್ಲೇನಿದೆ ಸ್ವಾರಸ್ಯ, ಸಂಸ್ಕೃತದ ಎಂಜಲು, ಉಗಿದ ಕಬ್ಬಿನ ಸಿಪ್ಪೆ ಎಂದು ಧಿಕ್ಕರಿಸುತ್ತಾರೆ. ಮುಖ್ಯ, ನಮ್ಮ ಕಾವ್ಯಮಾಲೆ ಕೀಳೆಂದೂ ನಿಸ್ಸಾರವೆಂದೂ ತೆಗೆದೆಸೆಯುವ ಹೊತ್ತು ಬಂದಿದೆ. ಸಾವಿರ ವರ್ಷದಿಂದ ಬೆಳೆದು ಬಂದದ್ದನ್ನು ಹಾಗೆ ಎಂದಿಗೂ ಬಿಡತಕ್ಕದ್ದಲ್ಲ. ಜನರೆಲ್ಲ ಮುಂದಾದರೂ ಪುಸ್ತಕದ ಕಡೆ ಆಸಕ್ತಿಯಿಡುವಂತೆ ಮಾಡಿಯೇ ತೀರಬೇಕು; ಇಂಗ್ಲಿಷ್ ಮತ್ತು ಸಂಸ್ಕೃತ ಪಂಡಿತರು ಸರಿಯಾದ ಮಾರ್ಗದಲ್ಲಿ ಅವರಿಗೆ ಹಿತವಾದ ಪುಸ್ತಕಗಳನ್ನು ಒದಗಿಸಿಕೊಟ್ಟು ದೇಶಾಭಿಮಾನಿಗಳಾಗಬೇಕು. ಈ ಕಾರ್ಯಸಾಧನೆಯಲ್ಲಿ ನಾವು ಮಾಡಬೇಕಾಗಿರುವ ಕೆಲಸಗಳೇನು, ಅದನ್ನು ತಿಳಿಸುತ್ತೇನೆ.

೧೩. ಮೊದಲು, ಹಿಂದಿನಿಂದ ಬಂದ ಕಾವ್ಯಗಳನ್ನು ಏನು ಮಾಡುವುದು? ಇವು ನಮ್ಮ ಹಿರಿಯರು ಗಳಿಸಿದ ಸ್ವತ್ತು-ಬಡತನವೋ, ಸಿರಿಯೋ, ಇದ್ದದ್ದನ್ನು ಉಳಿಸಿಕೊಂಡು, ಮುಂದಕ್ಕೆ ಹೆಚ್ಚಿಸುತ್ತಾ ಹೋಗಬೇಕು. ಇದಲ್ಲದೆ ಇವು ತೀರ ಕೆಲಸಕ್ಕೆ ಬಾರದುವೂ ಅಲ್ಲ. ಪೂರ್ವದ ಶಾಸನಗಳಿಂದ ಮೈಸೂರಿನ ಚರಿತ್ರೆಯನ್ನು ಕೂಡಿಸಬಹುದು; ಕಾವ್ಯಗಳಲ್ಲಿ ಚರಿತ್ರಾಂಶಗಳೂ, ಆಚಾರ ವ್ಯವಹಾರಗಳೂ, ದೇಶಕಾಲ ಭೇದಗಳೂ ತಿಳಿಯುತ್ತವೆ. ಮತಸಂಬಂಧವಾದ ವಿಷಯಗಳು ಎಷ್ಟೋ ಅಡಕವಾಗಿವೆ. ಇದರ ಜೊತೆಗೆ, ಭಾಷೆಯ ಚರಿತ್ರೆಯನ್ನೂ ಕಾವ್ಯಮಾಲೆಯ ಬೆಳವಣಿಗೆಯನ್ನೂ ಸಂಗ್ರಹಿಸುವ ಅವಶ್ಯಕತೆ ಬೇರೆ ಇದೆ. ತಾಯಿಬೇರನ್ನು ಕಡಿದು ಮರವನ್ನು ಚಿಗುರಿಸುವುದಕ್ಕೆ ಹೇಗೆ ಆಗಲಾರದೋ, ಹಾಗೆಯೇ ನಮ್ಮ ಪೂರ್ವವನ್ನು ಅಳಿಸಿಟ್ಟು ಭವಿಷ್ಯಕ್ಕೆ ಹಾರುವುದಕ್ಕೆ ಆಗಲಾರದು. ಆದ್ದರಿಂದ

ಪೂರ್ವದ ಕಾವ್ಯಗಳ ವಿಷಯದಲ್ಲಿ ಹೀಗೆ ಮಾಡಬೇಕು:

(i) ದೇಶದಲ್ಲಿ ಹುಳು ತಿಂದುಹೋಗದೆ ಉಳಿದಿರುವ ಗ್ರಂಥಗಳನ್ನೆಲ್ಲಾ ಶೇಖರಿಸಿ ಒಂದನ್ನೂ ಬಿಡದಂತೆ ಅಚ್ಚುಹಾಕುವುದು.

(ii) ಈ ಲಕ್ಷ್ಯಗ್ರಂಥಗಳೆಲ್ಲಾ ಅಚ್ಚಾದಮೇಲೆ ಎಲ್ಲವನ್ನೂ ಕೊನೆಮುಟ್ಟ ಶೋಧಿಸಿ, ಹೊಸದಾಗಿ ಲಕ್ಷಣಗ್ರಂಥಗಳನ್ನು ಕಾಲಕ್ಕೆ ತಕ್ಕಂತೆ ರಚಿಸುವುದು...ಈ ಲಕ್ಷಣಗಳನ್ನು ಕಲ್ಪಿಸತಕ್ಕವರು ಹಿಂದಿನ ಸಂಸ್ಕೃತಮಾರ್ಗವನ್ನೂ, ಈಗಿನ ಇಂಗ್ಲಿಷ್ ಮಾರ್ಗವನ್ನೂ, ಪ್ರಕೃತತದಲ್ಲಜನರ ಸ್ವಭಾವ ಅಭಿಪ್ರಾಯ ಲಾಭಗಳನ್ನೂ, ಗಣನೆಗೆ ತಂದು, ಸರ್ವಮತವನ್ನೂ ತೂಕಮಾಡಿ, ವಿಪರೀತಕ್ಕೆ ಹೋಗದೆ, ಉತ್ತಮ ಪಕ್ಷವನ್ನೇ ಹಿಡಿಯತಕ್ಕದ್ದಾಗಿದೆ.

(iii) ಪೂರ್ವಕಾವ್ಯಗಳಲ್ಲಿ ಉತ್ತಮ ಭಾಗಗಳನ್ನು ಆಯ್ದುಕೊಂಡು ಬಾಲಶಿಕ್ಷೆಗಾಗಿ ಉಪಯೋಗಿಸುವುದು. ಮತ್ತು ಇದಕ್ಕೆ ಕೈನೆರವಾಗಿ ಐದಾರು ಹಳಗನ್ನಡದ ಪಾಠಪುಸ್ತಕಗಳನ್ನು ಏರ್ಪಡಿಸುವುದು.

ಇಷ್ಟು ಕೆಲಸ ಮಾಡಿದಲ್ಲಿ, ಜನರರಿಗೆ ಹಳಗನ್ನಡ ಸುಲಭವಾಗುತ್ತದೆ. ಏಕೆಂದರೆ, ಹಳಗನ್ನಡಕ್ಕೂ ಹೊಸಗನ್ನಡಕ್ಕೂ ಶಬ್ದಗಳು ಕೆಲವು ಬಿಟ್ಟುಹೋಗಿರುವುದು, ರೂಪ ಕೊಂಚ ಮಾರ್ಪಟ್ಟಿರುವುದು ಇಷ್ಟೇ ಹೊರತು ಎರಡೂ ಬೇರೆ ಭಾಷೆ ಎನ್ನುವಷ್ಟು ಭೇದವೇನೂ ಇಲ್ಲ. ಕಾವ್ಯಗಳ ವಿಷಯದಲ್ಲಿ, ಎಲ್ಲಾ ಕಾವ್ಯಮಾಲೆಗಳ ಲಕ್ಷಣಗಳನ್ನೂ ತೆಗೆಯುವುದರಿಂದ, ಸಹಜವಾದ ರೀತಿಯಲ್ಲಿ ಗುಣದೋಷ ವಿವೇಚನೆ ಹುಟ್ಟುತ್ತದೆ. ಪೂರ್ವದ ಕಥೆಗಳೂ, ಅಭಿಪ್ರಾಯಗಳೂ ಮರೆತುಹೋಗುವುದಿಲ್ಲ.

೧೫. ಹಿಂದಿನ ಭಂಡಾರವನ್ನು ಹೀಗೆ ಕಾಪಾಡಿಕೊಂಡು ಕ್ರಮಪಡಿಸುವುದಲ್ಲದೆ, ಮುಂದಕ್ಕೆ ಉತ್ತಮಕಾವ್ಯಗಳು ಸಾಧ್ಯವಾಗುವಂತೆ ಈಗಿನಿಂದ ಉಳುಮೆ ಮಾಡಬೇಕು. ಕೆಲವರು ಹೊಸಮಾರ್ಗ ಆಗಲೇ ದೇಶದಲ್ಲಿ ಬೇರೂರಿತೆಂದೂ, ಬೇಕಾದಷ್ಟು ಜನ ಕವಿಗಳು ಆಗಲೇ ಹುಟ್ಟಿರುವರೆಂದೂ ತಿಳಿಯುತ್ತಾರೆ. ಇದರಲ್ಲಿ ನನಗೆ ನಂಬಿಕೆ ಸಾಲದು. ನನ್ನ ಬುದ್ಧಿಗೆ ಈಗ ಇನ್ನೂ ನಮಗೆ ವ್ಯವಸಾಯಕಾಲವೇ ಹೊರತು ಫಲಬಿಡುವ ಕಾಲವಲ್ಲ. ಅದು ಹೇಗಾದರೂ ಇರಲಿ, ಮುಂದೆ ಎಲ್ಲರೂ ನಮ್ಮ ಕನ್ನಡ ಎಂಬ ಹೆಮ್ಮೆಪಟ್ಟುಕೊಂಡು ಓದಬಹುದಾದ ಪುಸ್ತಕಗಳನ್ನು ಬರೆಯತಕ್ಕವರು ಈ ಅಂಶಗಳನ್ನು ನೆನಪಿನಲ್ಲಿ ಇಟ್ಟಿದ್ದರೆ ಒಳ್ಳೆಯದು.

(i) ಭಾಷೆಯ ವಿಚಾರದಲ್ಲಿ ಹೊಸಗನ್ನಡವನ್ನೇ ಬರೆಯಬೇಕು. ಹಳಗನ್ನಡದಲ್ಲಿ ನನಗೂ ಅಕ್ಕರೆ ಉಂಟು; ತಿಳಿಯಾದ ಬಿಗಿಯಾದ ತಿರುಳಾದ ಇಂಪಾದ ಆ ನುಡಿಯನ್ನು ಕೈಬಿಡುವುದೆಂದರೆ ನನಗೂ ವ್ಯಸನವೆ. ಮುಂದೆ ಜನರಲ್ಲಿ ಅದರ ತಿಳಿವಳಿಕೆ ಹೆಚ್ಚಿದ ಮೇಲೂ, ಇಲ್ಲ, ಕೇವಲ ವಿದ್ಯಾವಂತರೇ ತಿಳಿಯಬೇಕಾದ ತತ್ವಗಳಿಗಾಗಿಯೋ, ಇಲ್ಲ, ಪರಮೋತ್ಕೃಷ್ಟ

ವಾದ ಕಾವ್ಯ-ನಾಟಕ-ಗೀತೆಗಳಿಗಾಗಿಯೋ ಅದನ್ನು ಉಪಯೋಗಿಸಿದರೂ ಉಪಯೋಗಿಸಬಹುದು. ಆದರೆ ಸದ್ಯಕ್ಕೆ ಜನರಿಗೆ ತಿಳಿಯದ ಭಾಷೆಯಲ್ಲಿ ಬರೆಯುವುದರಲ್ಲಿ ಯಾವ ಬುದ್ಧಿವಂತಿಕೆಯೂ ಇಲ್ಲ. ಹೊಸಗನ್ನಡವನ್ನೇ ಎಲ್ಲರೂ ಹಿಡಿಯಬೇಕು. ಅದಕ್ಕೆ ಹಳಗನ್ನಡದ ಬೆರಕೆಯಾಗಲಿ, ಜನರ ಬಾಯಲ್ಲಿ ಬಳಕೆಗೆ ಬಂದಿರುವಷ್ಟು ಮಟ್ಟಿಗಲ್ಲದೆ ಹೆಚ್ಚಿನ ಪುಸ್ತಕದ ಸಂಸ್ಕೃತವಾಗಲಿ ತದ್ಭವವಾಗಲಿ ಸೇರಕೂಡದು. ಗ್ರಾಮ್ಯವನ್ನು ಬಿಟ್ಟು ವಿದ್ಯಾವಂತರೂ ಉತ್ತಮ ಜಾತಿಯವರೂ ಆಡತಕ್ಕ ಸ್ಫುಟವಾದ ಕನ್ನಡವನ್ನು ಗ್ರಂಥ ಭಾಷೆಯಾಗಿ ತಿರುಗಿಸಿಬಿಟ್ಟರೆ, ಅಚ್ಚುಹಾಕುವುದರಿಂದಲೂ ಮಕ್ಕಳಿಂದ ಕಲಿಸುವುದರಿಂದಲೂ ಇದೇ ನೆಲೆಯಾಗಿ ನಿಂತು ಎತ್ತಲೂ ಹರಡುತ್ತದೆ. ಮುಂದಿನ ಗ್ರಂಥಗಳಿಗೆಲ್ಲಾ ಒಂದೇ ಸಮನಾದ ಭಾಷೆ ಸಿಕ್ಕುತ್ತದೆ. ಅನ್ಯಶಬ್ದಗಳನ್ನು ವಿಶೇಷವಾಗಿ ಸೇರಿಸಬಾರದಾದರೂ, ಜನಗಳು ರೂಢಿಗೆ ತಂದ ಮಾತುಗಳನ್ನು ಕಲ್ಪನೆ ಮಾಡಬಾರದು; ಹಾಗೆ ಮಾಡಿದರೂ ಕನ್ನಡ ಮಾತುಗಳನ್ನೇ, ಬಳಸುತ್ತಿರುವ ಸಂಸ್ಕೃತ ಪದಗಳನ್ನೇ ಕೂಡಿಸುವುದು ಅನುಕೂಲ. ರೈಲನ್ನು ರೈಲೆಂದೇ ಕರಯುವುದು ಉತ್ತಮ: ಹೊಗೆಬಂಡಿ, ಹೊಗೆಗಾಡಿ ಎನ್ನುವುದು ಮಧ್ಯಮ; ಧೂಮಶಕಟವೆನ್ನುವುದು ಅಧಮ. ಮುಖ್ಯ, ಬರೆಯುವವರು ಕಠಿಣ ಪದಗಳಲ್ಲಿ ಕೈವಲ್ಯವುಂಟೆಂದು ಮೋಸಹೋಗದೆ, ಅರ್ಥದಲ್ಲಿ ಬುದ್ಧಿಯನ್ನು ಓಡಿಸಿ ಪ್ರೌಢತನವನ್ನು ತೋರಿಸಿದರೆ ಎಲ್ಲರೂ ಬದುಕಿಕೊಂಡಾರು.

(ii) ಭಾಷೆಯನ್ನು ಈ ತರದಲ್ಲಿ ಸೋಸುವುದಕ್ಕೆ ಉದ್ದೇಶವೇನೆಂದರೆ, ಎಲ್ಲಾ ಜನರೂ ಓದಬೇಕೆನ್ನುವುದೇ. ರಾಜರಿಗೇ ಆಗಲಿ, ಪಂಡಿತರಿಗೇ ಆಗಲಿ, ಬರೆಯತಕ್ಕ ಕಾಲ ಹೋಯಿತು. ಈಗ ಹೆಂಗಸರು, ಗಂಡಸರು, ಚಿಕ್ಕವರು, ದೊಡ್ಡವರು, ಬ್ರಾಹ್ಮಣರು, ಒಕ್ಕಲಿಗರು, ಅಷ್ಟರೂ ಓದುವಂತೆ ಬರೆಯಬೇಕು. ಇದರಿಂದ ಇನ್ನೂ ಕೆಲವು ಗುಣಗಳು ತಾವಾಗಿಯೇ ಬರುತ್ತವೆ: ಸುಲಭವಾಗಿ ಬರೆಯುವುದು, ಎಲ್ಲರಿಗೂ ಇಷ್ಟವಾದ ಸಂಗಿಗಳನ್ನು ತೆಗೆಯುವುದು, ವಿಪರೀತವಾಗಿ ಲಕ್ಷಣದ ಮೇಲೇ ದೃಷ್ಟಿಯಿಡದೆ ಇರುವುದು, ವಿವೇಕವಾಗಿ ಉಪಯೋಗವಾದವ ವಿಚಾರಗಳನ್ನೇ ಹರಡುವುದು, ಇವೇ ಮುಂತಾದವು.

(iii) ಗ್ರಂಥವಿಷಯ ಪ್ರಯೋಜನವಾದ ಅಂಶವಾಗಿರಬೇಕು. ಸಮಾಜದ ಏಳಿಗೆಗೆ ನೆರವಾಗುವಂತೆ ಇರಬೇಕು. ಧರ್ಮವಿಚಾರದಲ್ಲಿ ಮೂರ್ಖತನವನ್ನು ಹೋಗಿಸುವ ಇಂಡಿಯಾದ ಪೂರ್ವಕಾಲದ ಚರಿತ್ರೆ, ಮತಗಳ ಬೆಳವಣಿಗೆ ಮತ್ತು ಆಗಾಗಿನ ಮಾರ್ಪಾಟುಗಳು, ಒಗ್ಗಟ್ಟನ್ನೂ ರಾಜಭಕ್ತಿಯನ್ನೂ ಹುಟ್ಟಿಸತಕ್ಕ ನೀತಿತತ್ವಗಳು, ಜೀವನಕ್ಕೆ ಸುಖವನ್ನು ತರುವ ವೈದ್ಯ, ನ್ಯಾಯ, ಶಿಲ್ಪ ಮೊದಲಾದ ಕುಶಲಶಾಸ್ತ್ರಗಳು, ಬುದ್ಧಿಯನ್ನು ಕುದುರಿಸಿ ಮೂಢಭಕ್ತಿಯನ್ನು ಕಿತ್ತುಹಾಕುವ ಪ್ರಕೃತಿಶಾಸ್ತ್ರಗಳು, ಇವು ಮೊದಲಾದುವನ್ನು ಸಂಸ್ಕೃತದಿಂದಲೂ ಇಂಗ್ಲಿಷಿನಿಂದಲೂ ಗ್ರಹಿಸಿದ ವಿದ್ವಾಂಸರು ಮಿಕ್ಕವರಿಗೆ ಅವರು ಆಡುವ ಮಾತಿನಲ್ಲಿ ತಿಳಿಸತಕ್ಕದ್ದು.

(vi) ಲಾಭವೇ ಗ್ರಂಥಕ್ಕೆ ಗುರಿಯಲ್ಲ: ಹರ್ಷವೂ ಆಗಿರುವುದರಿಂದ ವಿನೋದವಾಗಿ ಹೊತ್ತು ಕಳೆಯುವುದಕ್ಕೆ ಕಟ್ಟುಕಥೆಗಳನ್ನೂ, ಕಾದಂಬರಿಗಳನ್ನೂ, ಸರಸವಾದ ಪ್ರಸಂಗಗಳನ್ನೂ ಬರೆಯಬೇಕು. ಇವಕ್ಕೆಲ್ಲಾ ಇಂಗ್ಲಿಷಿನಲ್ಲಿ ತುಂಬ ಸಹಾಯ ದೊರೆಯುತ್ತದೆ. ಈ ಬಗ್ಗೆ ಮೈಸೂರಿನ ಗ್ರಂಥಮಾಲೆ, ಕರ್ಣಾಟಕ ಚಂದ್ರಿಕೆ, ಧಾರವಾಡದ ವಾಗ್ಭೂಷಣ ಇವು ಮುಂದಾಳಾಗಿ ಹೊರಟಿವೆ. ಇನ್ನೂ ಅಭಿವೃದ್ಧಿಗೆ ಅವಕಾಶವುಂಟು. ಆದರೆ ಸದ್ಯಕ್ಕೆ, ನನಗೆ ತೋರುವುದರಲ್ಲಿ, ದೊಡ್ಡ ಕವನಗಳನ್ನಾಗಲಿ, ಸ್ವಂತ ನಾಟಕಗಳನ್ನಾಗಲಿ ಬರೆಯತಕ್ಕದ್ದಲ್ಲ. ಬಾವಿಯಲ್ಲಿ ಸೀನೀರು ಸಿಕ್ಕುತ್ತಿರುವಾಗ ಕಡಲಲ್ಲಿ ಹೋಗಿ ಉಪ್ಪುನೀರು ಕುಡಿಯತಕ್ಕದ್ದಲ್ಲ. ದೊಡ್ಡತನಕ್ಕೆ ಬೆರಗಾಗಿ ನಮ್ಮ ಯೋಗ್ಯತೆಯನ್ನು ಏಕೆ ಮೀರಬೇಕು? ಅಂದವಾದ ಹೂವು ಬೇರು ಕೊನೆ ಬಲಿತ ಮೇಲೆ ಅರಳುವುದೇ ಹೊರತು, ಬಿತ್ತವನ್ನು ನೆಟ್ಟ ಬೆಳಗ್ಗೆ ಬಿಡಲಾರದು. ಕವಿ ಎನ್ನಿಸಿಕೊಳ್ಳುವುದಕ್ಕೆ ಎಲ್ಲರಿಗೂ ಆಸೆಯೇ, ಯಾರಿಗಿಲ್ಲ? ಆದರೆ ಅದಕ್ಕೆ ಕಾಲ ಬೇಕು, ಪ್ರಾಪ್ತಿಬೇಕು, ಬರಿಯ ವೃತ್ತಗಳ ಹೆಣಿಗೆಯೊಂದೇ ಸಾಲದು. ಹಳ್ಳಿಯವರು ಆಡುವ ಗಾದೆ ಸಾಮತಿಗಳನ್ನು ಹಳಗನ್ನಡದಲ್ಲಿ ಕಂದಗಳು ಮಾಡಿ ನೇಯುವುದಕ್ಕಿಂತ, ಗಂಭೀರವಲ್ಲವೆ ಮಾಗಿಯ ಕೋಗಿಲೆಯಂತೆ ಬಾಯಿ ಹೊಲಿದಿಕೊಂಡಿರುವುದು?

(v) ಮತ್ತೊಂದು ಭಾಗದಲ್ಲಿ ಗ್ರಂಥ ನಮ್ಮಲ್ಲಿ ಅಪೂರ್ವ-ಹಿರಿಯವರ ಬದುಕುಗಳು, ಹಿಂದೆ ನಮ್ಮಲ್ಲಿ ಎಷ್ಟೋಜನ ಆಚಾರ್ಯರೂ ಕವಿಗಳೂ ಶೂರರೂ ಇದ್ದರು. ಅವರ ಕಾಲವೇ ತಿಳಿಯದ ಹಾಗೆ ಆಗಿದೆ; ಅವರ ಚರಿತ್ರೆಯೆಂದರೆ ಪೊಳ್ಳುಹರಟೆಯೂ ಕ್ಷುದ್ರ ಮಹತ್ವಗಳೂ ಆಗಿದೆ. ಇದನ್ನೆಲ್ಲಾ ವಿಚಾರಮಾಡಿ ಸರಿಪಡಿಸಬೇಕು. ಸತ್ಯದಿಂದ ಎಂದಿಗೂ ಲೋಪವಿಲ್ಲ; ಅವರು ಬಾಳಿದ ರೀತಿ, ಅವರ ನಡೆನುಡಿಗಳು, ಅವರು ಹಿಡಿದು ಸಾಧಿಸಿದ ಮಹತ್ಕಾರ್ಯಗಳು, ಇವೆಲ್ಲಾ ಇದ್ದದ್ದಿದ್ದಂತೆ ತಿಳಿಸಿದರೆ, ಹುಡುಗರಲ್ಲಿ ಹುರುಡೂ ಜನರಲ್ಲಿ ಸ್ವದೇಶಪ್ರೇಮವೂ ಆತ್ಮಗೌರವೂ ಮೊಳಕೆ ಹಾಕುತ್ತವೆ.

(vi) ಹೆಚ್ಚು ಆಡಿದ್ದರಿಂದೇನು? ಹೇಗೆ ಆದಿಯಿಂದಲೂ ಸಂಸ್ಕೃತದ ಶಿಕ್ಷೆಯಲ್ಲೂ ಸಂಸ್ಕೃತದ ಪೋಷಣೆಯಲ್ಲೂ ಕಾವ್ಯಮಾಲೆಯನ್ನು ಬೆಳಸಿದೆವೊ, ಹಾಗೇ ಈಗ ದೈವಯತ್ನ ದಿಂದ ಲಭಿಸಿರುವ ಇಂಗ್ಲಿಷಿನ ಶಿಕ್ಷೆಯಲ್ಲೂ ಇಂಗ್ಲಿಷಿನ ಪೋಷಣೆಯಲ್ಲೂ ಅದನ್ನು ಬೆಳಸಬೇಕು. ಇಂಗ್ಲಿಷರ ಕಾವ್ಯಮಾಲೆ ಪರಮೋತ್ಕೃಷ್ಟವಾದದ್ದು; ಗ್ರೀಕ್ ಲ್ಯಾಟಿನ್ ಜರ್ಮನ್ ಫ್ರೆಂಚ್ ಸಂಸ್ಕೃತ ಮುಂತಾದ ಭಾಷೆಗಳಿಂದ ಸಾರವನ್ನು ಹೀರಿ ಪುಷ್ಟಿಯಾದದ್ದು. ಇದರ ಗುಣವನ್ನು ಕಲಿತು, ಇದರ ಐಶ್ವರ್ಯದಲ್ಲಿ ಭಾಗಿಗಳಾಗಿ, ಬೇಕಾದ ರೀತಿಯಲ್ಲಿ ಭಾಷಾಂತರಗಳಿಂದ ಕನ್ನಡದ ಬೊಕ್ಕಸವನ್ನು ತುಂಬಿಟ್ಟರೆ, ಮುಂದೆ ಸ್ವದೇಶಮಾರ್ಗವೂ ವಿದೇಶಮಾರ್ಗವೂ ಕಲೆತು ಒಂದಾಗಿ, ಎರಡರಲ್ಲೂ ಒಗ್ಗದುವು ವಕ್ರವಾದುವು ಬಿಟ್ಟುಹೋಗಿ, ಅತ್ಯುತ್ತಮವಾದ ಕಾವ್ಯಮಾಲೆ ನಮ್ಮಲ್ಲೂ ನಿಲ್ಲುವುದಕ್ಕೆ ಸಂದೇಹ ತೋರುವುದಿಲ್ಲ.

(VII) ಭಾಷಾಂತರವನ್ನು ಹೇಳುತ್ತಿರುವಾಗ ಸಂಸ್ಕೃತವನ್ನು ನಾನು ಮರೆಯುವುದಿಲ್ಲ. ಇದರಲ್ಲಿ ಸಂಸ್ಕೃತಪಂಡಿತರು ಧಾರಾಳವಾಗಿ ಕನ್ನಡಿಗರನ್ನು ಉದ್ಧಾರ ಮಾಡಬಹುದು. ಮತ ವಿಷಯವಾಗೂ, ನೀತಿವಿಷಯವಾಗೂ, ಆಚಾರಸಂಸ್ಕಾರಗಳ ವಿಷಯವಾಗೂ ಈಗ ದೇಶದಲ್ಲಿ ಎಲ್ಲೆಲ್ಲೂ ಚರ್ಚೆ ನಡೆಯುತ್ತಿದೆಯಷ್ಟೆ. ಜೀವಕ್ಕೆ ಹೇಗೆ ಕರ್ಮಪಾಶ ಬಿಡುವುದಿಲ್ಲವೋ, ಹಾಗೆ ಏನು ಮಾಡಿದರೂ ಪೂರ್ವದ ಪ್ರಭಾವದಿಂದ ನಾವು ತಪ್ಪಿಸಿಕೊಳ್ಳಲಾರೆವು. ಆದ್ದರಿಂದ ಏನು ತಿದ್ದುಪಾಟು ಆಗಬೇಕಾದರೂ ಪೂರ್ವಪದ್ಧತಿಯನ್ನು ಸಮಗ್ರವಾಗಿ ಪರಿಶೋಧಿಸಿದಲ್ಲದೆ ಯತ್ನವಿಲ್ಲ. ಇದಕ್ಕಾಗಿ ಸಂಸ್ಕೃತದಲ್ಲಿ ವಿದ್ವಾಂಸರಾದವರು ನಿಸ್ಸಾರವಾದ ಕಾವ್ಯನಾಟಕಗಳ ಭಾಷಾಂತರವನ್ನು ಬಿಟ್ಟು, ಆಳಿದ ಮಹಾಸ್ವಾಮಿಗಳಾದ ಮುಮ್ಮಡಿ ಕೃಷ್ಣರಾಜ ಒಡೆಯರು, ಚಾಮರಾಜ ಒಡೆಯರು, ಇವರ ಹೆಸರಿನಲ್ಲಿ ಭಾಗವತ, ಭಾರತ, ರಾಮಾಯಣಗಳನ್ನು ಪ್ರತಿಯೊಂದು ಮನೆಯಲ್ಲಿಯೂ ಹೆಂಗಸರೂ ಕೂಡ ಓದಿಕೊಳ್ಳುವಂತೆ ಮಾಡಿರುವ ರೀತಿಯಲ್ಲಿ, ಅಮೂಲ್ಯವಾದ ಶ್ರುತಿ ಸ್ಮೃತಿ ಉಪನಿಷತ್ತು ಪುರಾಣಗಳನ್ನೂ ಆಚಾರ್ಯರ ಭಾಷ್ಯಗಳನ್ನೂ ಅನ್ಯಮತಗಳ ತತ್ವಗಳನ್ನೂ ನಿಷ್ಪಕ್ಷಪಾತವಾಗಿ ಭಾಷಾಂತರ ಮಾಡಿಕೊಟ್ಟರೆ, ಜನಗಳ ಜ್ಞಾನೋದಯವೇ ಅಲ್ಲದೆ ಕನ್ನಡ ಕಾವ್ಯಮಾಲೆಯೂ ಸಮೃದ್ಧಿಯಾಗುತ್ತದೆ. ಪ್ರಕೃತದಲ್ಲಿ ನಮ್ಮ ದೇಶಕ್ಕೆ ಇದಕ್ಕಿಂತ ಶ್ರೇಷ್ಠವಾದ ಉಪಕಾರ ನನಗೆ ತೋರುವುದಿಲ್ಲ.

೧೬. ಆರ್ಯರೇ ಬಿದ್ದುಹೋಗಿರುವ ನಮ್ಮ ಮಾತೃಭಾಷೆಯನ್ನು ತಲೆಯೆತ್ತಿಸುವುದು ಸುಲಭವಾದ ಕೆಲಸವಲ್ಲ; ಅಲ್ಲೊಬ್ಬರು, ಇಲ್ಲೊಬ್ಬರು, ಎರಡು ಪಂಕ್ತಿಯನ್ನು ಗೀಚಿ ಅಚ್ಚಿಗೆ ತರುವುದರಿಂದ ಸಾಗತಕ್ಕ ಕೆಲಸವೂ ಅಲ್ಲ. ಮಾತೃಭಾಷೆಯನ್ನು ಸಾಯಿಸುವ ಮಾತನ್ನು ಇಲ್ಲಿಗೇ ಬಿಟ್ಟುಬಿಡೋಣ. ಈಗ ಎಲ್ಲಾ ರಾಜ್ಯಗಳಲ್ಲೂ ಎಲ್ಲಾ ಜನರಿಗೂ ಓದುಬರಹವನ್ನು ಕಲಿಸಿ ತಿಳಿವಳಿಕೆಗೆ ದಾರಿಮಾಡಬೇಕೆಂದು ಹೊರಟಿರುತ್ತಾರೆ. ಇದಕ್ಕೆ ಮಾತೃಭಾಷೆಯನ್ನು ಬಿಟ್ಟರೆ ಆಗುವುದಿಲ್ಲ. ಇದಲ್ಲದೆ ಪ್ರಪಂಚದಲ್ಲಿ ಅಭಿಮಾನವುಳ್ಳ ಯಾವ ಜನವೂ ತಮ್ಮ ಭಾಷೆಯನ್ನು ತಾವೇ ತುಳಿದುಬಿಟ್ಟು ತೊರೆಯುವುದಿಲ್ಲ. ಎಲ್ಲೋ ಒಂದು ಕೋಟಿ ಜನ ಆಡುವ ಭಾಷೆ ಎನ್ನುತ್ತೀರೇನೋ? ಗ್ರೀಸಿನಲ್ಲಿ, ಅದರಲ್ಲೂ ಅಥೆನ್ಸ್ ಪಟ್ಟಣದಲ್ಲಿ, ಗ್ರೀಕ್ ಕಾವ್ಯಮಾಲೆಯನ್ನು ಬೆಳಸಿದ ಜನ ಎಷ್ಟಿದ್ದರು? ಅವರ ಕಾವ್ಯಮಾಲೆಯ ವಿಸ್ತಾರವೇನು, ಪ್ರಾಶಸ್ತ್ಯವೇನು? ಬಹಳ ಹೀನದೆಶೆಯಲ್ಲಿದೆ ಎಂದು ಹೇಳುತ್ತೀರೇನೋ? ಐನೂರು ವರ್ಷಗಳ ಹಿಂದೆ ಇಂಗ್ಲಿಷ್ ಕಾವ್ಯಮಾಲೆ ಯಾವ ಸ್ಥಿತಿಯಲ್ಲಿ ಇತ್ತು? ಉಳಿಯುತ್ತದೆಯೋ ಇಲ್ಲವೋ ಎಂದು ಇದ್ದರು: ಈಗ ಅದರ ಪ್ರಾಬಲ್ಯಕ್ಕೆ ಆ ಜನರ ಪ್ರಾಬಲ್ಯವೂ ಎಲ್ಲೆಯಿಲ್ಲ. ಆಲದ ಬೀಳನ್ನು ನೋಡಿದ್ದೀರಷ್ಟೆ: ಬಳಲುತ್ತಾ ಗಾಳಿಗೆ ತೂರಾಡುವಾಗ ಉಗುರಿನಲ್ಲಿ ಚಿಗುಟಿ ಹಾಕಬಹುದೆಂದು ತೋರುತ್ತದೆ: ನೆಲಕ್ಕೆ ಮುಟ್ಟಿಗೆ ತಗಲಲಿ: ತಾಯಿಮರ ಬಲವು ಬಂದರೆ ಅದಕ್ಕೆ ದೊಡ್ಡ ಊರೆಯಾಗಿ ತಡೆಯುತ್ತದೆ. ನಮ್ಮ

ಅದೃಷ್ಟ ನಮ್ಮ ಕೈಯಲ್ಲೇ ಅಡಗಿದೆ. ಬಲದಿಂದ, ಸಾಹಸದಿಂದ ಕೆಲಸಕ್ಕೆ ಹೊಕ್ಕರೆ ಯಾವುದು ಹರಿಯುವುದಿಲ್ಲ? ಕೆಲಸವೇನೋ ಕಷ್ಟಸಾಧ್ಯವೇ; ಆದರೆ ವಿಶ್ವಾಸಪಟ್ಟು, ಸರಿಯಾದ ಮಾರ್ಗದಲ್ಲಿ ಶ್ರಮಪಡತಕ್ಕ ಜನ ಒಂದಾದರೆ, ನಮ್ಮ ಕಾವ್ಯ ಮಾಲೆಗೂ ಉತ್ತಮದೆಶೆ ಬಂದೇ ಬರುವುದು. ಆಗ್ಗೆ ಅದು ನಮಗೊಂದು ಕಿರೀಟವಾಗುವುದು; ಜನರಿಗೆಲ್ಲಾ ಒಂದು ಚಿನ್ನದ ಕಟ್ಟಾಗುವುದು; ಮಕ್ಕಳಿಗೆ ಆನಂದವನ್ನೂ ದಿವ್ಯವಾದ ಬೋಧನೆಯನ್ನೂ ಬೀರುತ್ತ, ಬಿತ್ತುತ್ತ, ದೇಶದ ಘನತೆಗೆ ಆಧಾರವಾಗುವುದು. ಆಗ್ಗೆ ಇನ್ನೊಂದು ಸಾರಿ, ಹಿಂದೆ ಆರ್ಯಭೂಮಿಯಲ್ಲಿದ್ದ ಋಷಿಗಳೂ ವೀರರೂ ಜನ್ಮವೆತ್ತುವರು; ಎತ್ತಿ, ರಾಜ್ಯದಲ್ಲಿ ಧರ್ಮವನ್ನೂ ಶಾಂತಿಯನ್ನೂ ನೆಲೆಗೊಳಿಸುವರು. ಏಕೆಂದರೆ, ಲೋಕವೆಲ್ಲಾ ಬಗ್ಗುವುದು ಶ್ರೇಷ್ಠವಾದ ಬುದ್ಧಿಗೆ ತಾನೇ; ಆ ಬುದ್ಧಿ ತಾವರೆಯ ಹಾಗೆ ಅರಳುವುದು ಕಾವ್ಯರತ್ನದ ಬೆಳಕಿನಿಂದಲೇ.

(ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ವಾರ್ಷಿಕ ಸಭೆಯಲ್ಲಿ ಮಾಡಿದ ಉಪನ್ಯಾಸ) ಡಿಸೆಂಬರ್, ೧೯೧೧

●

ಕನ್ನಡಿ

# ಅಲಿ ಆದಿಲಶಹನ ಗುಣಸ್ವಭಾವ

ಫಾರಸಿಮೂಲ: **ಮಹಮ್ಮದ್ ಇಬ್ರಾಹಿಂ ಜುಬೇರಿ**
ಕನ್ನಡಕ್ಕೆ: **ಕೃಷ್ಣ ಕೊಲ್ಹಾರ ಕುಲಕರ್ಣಿ**

(ಪ್ರಸಿದ್ಧ ಚರಿತ್ರೆಕಾರರ ಮಹಮದ್ ಇಬ್ರಾಹಿಂ ಜುಬೇರಿಯು ಬರೆದ ಬುಸಾತಿನ್ ಅಲ್ ಸಲಾತೀನ್' ಎಂಬ ಕೃತಿಯಿಂದ ಆರಿಸಲಾಗಿದೆ. ಇದು ಬಿಜಾಪುರವನ್ನು ರಾಜಧಾನಿಯನ್ನಾಗಿಸಿಕೊಂಡು ಎರಡು ಶತಮಾನಗಳ ಕಾಲ (೧೪೮೯-೧೬೮೬) ಆಳಿದ ೯ ಆದಿಲಶಾಹಿ ರಾಜರ ಕಥನ. ಬಿಜಾಪುರದ ನಿವಾಸಿಯಾಗಿದ್ದ ಜುಬೇರಿಯು ೧೮೨೪ರಲ್ಲಿ ಈ ಗ್ರಂಥವನ್ನು ಫಾರಸಿಯಲ್ಲಿ ರಚಿಸಿದನು. ಕರ್ನಾಟಕದಲ್ಲಿ ರಚಿತವಾದ ಪ್ರಸಿದ್ಧ ಫಾರಸಿ ಚರಿತ್ರೆಗ್ರಂಥಗಳಾದ 'ತಾರೀಖೆ ಫೆರಿಸ್ತಾ', 'ಮುಹಮ್ಮೂದನಾಮಾ', 'ಅಲಿನಾಮಾ' ಮುಂತಾದ ಹತ್ತಾರು ಕೃತಿಗಳ ಆಧಾರದಲ್ಲಿ ಜುಬೇರಿ ತನ್ನ ಈ ಗ್ರಂಥವನ್ನು ರಚಿಸಿದ್ದಾನೆ. ೧೦೦೦ ಪುಟಗಳ ಈ ಬೃಹತ್ ಗ್ರಂಥದ ಅನುವಾದವನ್ನು ಕನ್ನಡ ವಿವಿಯು ಪ್ರಕಟಿಸುತ್ತಿದೆ. ಬಿಜಾಪುರದ ೫ನೇ ದೊರೆ, ಮೊದಲನೇ ಅಲಿ ಆದಿಲ್‌ಶಾಹನು ಸಮರ್ಥದೊರೆಯೆಂದು ಹೆಸರಾದವನು. ೧೫೬೫ರ ರಕ್ಕಸತಂಗಡಿ ಯುದ್ಧದಲ್ಲಿ ನಿರ್ಣಾಯಕ ಪಾತ್ರವಹಿಸಿದವನು. ಅವನಲ್ಲಿ ವೈಯಕ್ತಿಕವಾಗಿ ವಿಚಿತ್ರ ಸ್ವಭಾವಗಳಿದ್ದವು. ಅವನನ್ನು ಹತ್ತಿರದಿಂದ ಕಂಡ ರಫೀಯುದ್ದೀನ್ ಶಿರಾಜಿ ಎಂಬುವವನು ಮಾಡಿದ ಟಿಪ್ಪಣಿಗಳನ್ನು ಉಲ್ಲೇಖಿಸಿ, ಜುಬೇರಿಯು ತನ್ನ ಬರೆಹ ಮಾಡಿದ್ದಾನೆ. ಕುತೂಹಲಕರವಾದ ಈ ಬರೆಹವನ್ನು 'ಕನ್ನಡ ಅಧ್ಯಯನ' ಓದುಗರಿಗಾಗಿ ನೀಡಲಾಗಿದೆ-ಸಂಪಾದಕ)

ರಫೀಯುದ್ದೀನ ಶಿರಾಜಿಯನ್ನು ಖಾಸಸಾಕರಿ(ಅಡುಗೆ ಮೇಲ್ವಿಚಾರಣೆ), ಹವಾಲದಾರಿ ಕೆಲಸ, ಮಹಾಲ ಹವಾಲದಾರಿ(ಜಮಾಬಂದಿಯ ಮೇಲ್ವಿಚಾರಣೆ) ಹಾಗೂ ಭಾಂಡಾರದ ಮೇಲೆ ನಿಯಮಿಸಲಾಗಿತ್ತು. ಆತನು ಇಪ್ಪತ್ತೊಂದು ವರುಷ ಅಲೀ ಆದಿಲಶಹನ ಸೇವೆಯಲ್ಲಿ ಇದ್ದನು. ಆದಿಲಶಹನ ನಡೆ-ನುಡಿಗಳ ಜೊತೆಗೆ ಯಾವಾಗಲೂ ಅನೇಕ ಲಕ್ಷಣಗಳನ್ನು, ಸ್ವಭಾವವನ್ನು ಗುರುತಿಸಿ ಅವಲೋಕನ ಮಾಡಿ ಆತನು ಬರವಣಿಗೆಯಲ್ಲಿ ಇಳಿಸಿದ್ದಾನೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಬರೆಯುವುದು ಸೂಕ್ತವೆಂದು ಕಾಣುತ್ತದೆ. ಆತನು ವರ್ಣಿಸಿದ್ದನ್ನು ಇಲ್ಲಿ ಬರೆಯಲಾಗಿದೆ:

ಅಲೀ ಆದಿಲಶಹ ಬಹಳ ದಯಾವಂತ ಸ್ವಭಾವದವನಾಗಿದ್ದ. ಫಕೀರರಂತೆ(ಸಂನ್ಯಾಸಿ, ಭಿಕ್ಷುಕರ ಹಾಗೆ) ಇರುತ್ತಿದ್ದನು. ತಿನ್ನುಣ್ಣುವುದರಲ್ಲಿ, ಸುಖಪಡುವುದರಲ್ಲಿ ಆತನ ಇಚ್ಛೆ ಇರಲಿಲ್ಲ. ಅವುಗಳ ಇಚ್ಛೆಯನ್ನು ಪ್ರತಿಬಂಧಿಸುತ್ತಿದ್ದನು. ಎಲ್ಲ ಮನುಷ್ಯರ ಮೇಲೆ ಪ್ರೀತಿ, ಧರ್ಮ ಹಾಗೂ ಬಕ್ಷೀಸು ಕೊಡುವುದರಲ್ಲಿ ಅದ್ವಿತೀಯನಾಗಿದ್ದನು. ಆತನ ಧರ್ಮನೀತಿ ಬಕ್ಷೀಸು ಇತ್ಯಾದಿ ಕೊಡುವುದರ ಕುರಿತು ವಿಶ್ವದಲ್ಲೆ ಖ್ಯಾತಿಯಿತ್ತು. ವಿಶ್ವದ ನಾನಾ ಮೂಲೆಗಳಿಂದ ಆತನ ದರಬಾರಿನಲ್ಲಿ ಬಂದು ಸೇರಿ ಆತನ ಉಪಕಾರದ ಹಾಗೂ ಧರ್ಮದ ತಟ್ಟೆಯಲ್ಲಿಯ ಉಚ್ಛಿಷ್ಟವನ್ನು ತೆಗೆದುಕೊಂಡು ಹೋಗುತ್ತಿದ್ದರು. ಅಂದರೆ ಎಲ್ಲ ಜನರು ಬಕ್ಷೀಸು ಇನಾಮುಗಳನ್ನು ಪಡೆಯುತ್ತಿದ್ದರು. ವಿದ್ವಾಂಸ ಜನರು, ಗುಣೀ ಜನರು, ಶಾಸ್ತ್ರಜ್ಞರು ಕವಿಗಳು, ಬುದ್ಧಿವಂತರು, ಸಲಹೆಯನ್ನು ಕೊಡುವ ಸಮುದಾಯ, ಮತ್ತು ಪರ್ಶಿಯನ್ ದೇಶದ, ಆರಕಾನಿನ, ಅಜರ್ ಬೈಜಾನದ ಅರಬಸ್ಥಾನದ ದೇಶಗಳ ಜನರು ಬರುತ್ತಿದ್ದರು. ದೊಡ್ಡಸ್ತಿಕೆಯನ್ನು ಪಡೆದು ತಮ್ಮ ಅಭೀಷ್ಟಗಳನ್ನು ಪೂರೈಸಿಕೊಂಡು ತಂತಮ್ಮ ದೇಶಗಳಿಗೆ ತಿರುಗಿ ಹೋಗುತ್ತಿದ್ದರು. ಎಲ್ಲಿಯವರೆಗೆಂದರೆ, ನನಗೆ ಗೊತ್ತಿದೆ, ಶಿರಾಜ ನನ್ನ ಜನ್ಮಭೂಮಿ, ನಾನು ಅಲ್ಲಿಯೇ ಬೆಳೆದಿರುವೆ, ಅಲ್ಲಿಯ ಸಾವಿರಾರು ಜನರು ಬಂದು ಭಹಳಷ್ಟು ಸಾಮಾನು ಸರಂಜಾಮುಗಳನ್ನು ಪಡೆದು ತೆಗೆದುಕೊಂಡು ಹೋಗಿದ್ದಾರೆ. ಒಂದು ದಿನ ಸ್ತುತಿ ಮಾಡುವ ಫಕೀರ, ಖಲಂದರ ಎಂಬ ಹೆಸರಿನವನು ಬಂದು ಒಂದು ಕುರಾನ ಶರೀಫದ ಪ್ರತಿಯನ್ನು ಆದಿಲಶಹನಿಗೆ ಕೊಟ್ಟನು. ಆಗ ಆದಿಲಶಹನು ಆ ಫಕೀರನನ್ನು ತನ್ನ ಜೊತೆಗೆ ಕರೆದುಕೊಂಡು ತನ್ನ ಶ್ರೇಷ್ಠ ದ್ರವ್ಯಭಂಡಾರದ ಹತ್ತಿರ ಬಂದನು. ಅಲ್ಲಿ ಒಂದು ದೊಡ್ಡ ಪೆಟ್ಟಿಗೆಯು ತಾಮ್ರದ ಪಾತ್ರೆಗಳಿಂದ ತುಂಬಿತ್ತು. ಅಲ್ಲಿಯ ಪ್ರತಿಯೊಂದು ತಾಮ್ರದ ಪಾತ್ರೆಯಲ್ಲಿ ಐದೈದು ಸಹಸ್ರ ಹೊನ್ನುಗಳಿದ್ದುವು. ಕೆಲವಲ್ಲಿ ಹತ್ತು ಸಾವಿರ ಹೊನ್ನುಗಳಿದ್ದುವು. ಆ ಪೆಟ್ಟಿಗೆಯನ್ನು ತೆರೆದು ಆ ಫಕೀರನಿಗೆ ಆಜ್ಞೆ ಮಾಡಿದನು. ನಿನ್ನ ಶಕ್ತಿಯಿದ್ದಷ್ಟು ಇದರಲ್ಲಿಯದನ್ನು ತೆಗೆದುಕೊ. ಆಗ ಆ ಫಕೀರನು ಐದುಸಾವಿರ ಹೊನ್ನುಗಳಿದ್ದ ಪಾತ್ರೆಯನ್ನು ಎತ್ತಿದನು. ಮತ್ತೆ ಇನ್ನೊಬ್ಬ ಗೃಹಸ್ಥ, ನಿಲಜೀ ಎಂಬವನು ಆತನ ಜೊತೆಗಿದ್ದನು. ಆತನು ತನ್ನ ಮನೆಯಲ್ಲಿ ಮದುವೆ ಇದ್ದು, ಮದುವೆಯ ಖರ್ಚಿಗೆ ಸರಕಾರದಿಂದ ಸಹಾಯ ನೀಡಲು ಬಿನ್ನವಿಸಿಕೊಂಡನು. ಅದೇ ಸಮಯದಲ್ಲಿ ಎಂಭತ್ತು ಸಾವಿರ ಹೊನ್ನುಗಳು ಬಂದದ್ದನ್ನು ಅಲ್ಲಿಯೇ ಇಡಲಾಗಿತ್ತು. ಆ ಶಿಷ್ಯನಿಗೆ ಅಜ್ಞೆಮಾಡಿ ಇದರಲ್ಲಿ ನಿನಗೆಷ್ಟು ತೆಗೆದುಕೊಳ್ಳಲು ಸಾಧ್ಯವೋ ಅಷ್ಟನ್ನು ತೆಗೆದುಕೊ ಎಂದನು. ಆತನು ಹದಿನಾರು ಚೀಲಗಳನ್ನು ಎತ್ತಿದನು. ಒಂದೊಂದು ಚೀಲದಲ್ಲಿ ಒಂದೊಂದು ಸಾವಿರ ಹೊನ್ನುಗಳಿದ್ದವು. ಅವು ತುಂಬ ಭಾರವಾಗಿದ್ದವು. ಆದ್ದರಿಂದ ಹದಿನಾರು ಚೀಲಗಳ ಭಾರವನ್ನು ಎತ್ತುವುದಾಗಲಿಲ್ಲ. ಕೆಲವು ಚೀಲಗಳನ್ನು ತಲೆಯಮೇಲೆ, ಇನ್ನು ಕೆಲವು ಹೆಗಲ ಮೇಲೆ ಮತ್ತೆ ಕೆಲವನ್ನು ಉಡಿಯಲ್ಲಿ ತೆಗೆದುಕೊಂಡನು. ಮತ್ತು ತುಂಬ ಕಷ್ಟದಿಂದ ಹೊರಟನು. ಆಗ ಕೆಲವು ಚೀಲಗಳು ಕೆಳಗೆ ಬಿದ್ದವು. ಅವುಗಳನ್ನು ಜಮೆ ಮಾಡಲಾಯಿತು.

ಮತ್ತೆ ಪಲವಾರು ಜನರು ಹೀಗೆಯೇ ಬಂದಾಗ ಅವರಿಗೂ ಎತ್ತಿಕೊಂಡು ಹೋಗಲು ಹೇಳುತ್ತಿದ್ದನು. ಆ ಚೀಲಗಳಲ್ಲಿಯ ಕೆಲವು ಹೊನ್ನುಗಳನ್ನು ತನಗೆಂದು ತೆಗೆದುಕೊಳ್ಳುತ್ತಿದ್ದನು. ಅವುಗಳಲ್ಲಿಯ ನಾಲ್ಕು ಸಾವಿರ ಹೊನ್ನುಗಳು ಇನ್ನೊಬ್ಬರ ಕೈಗೆ ಸಿಕ್ಕವು. ಇದೇ ರೀತಿಯಲ್ಲಿ ಬಹಳಷ್ಟು ಸಂಗತಿಗಳಿವೆ. ಆ ಎಲ್ಲಾ ಸಂಗತಿಗಳನ್ನು ಸೇರಿಸಿ ಒಂದೆಡೆ ಬರೆಯಲು ಒಂದು ದೊಡ್ಡ ದಪ್ತರ ಪುಸ್ತಕವೇ ಬೇಕಾಗುತ್ತದೆ. ನಿತ್ಯ ದರಬಾರಿನಲ್ಲಿಯ ಕಾರಭಾರಿಗಳು, ಕಾಮದಾರರು, ಹುಜೂರ ಸೇವಕರು, ಮುಜುರೆ ಸಲ್ಲಿಸಲು ಬರುತ್ತಿದ್ದರು. ಮೂರು ನಾಲ್ಕು ಜನರ ಕೆಲಸಗಳನ್ನು ಜಿನ್ನಪಿಸಿ ಮಾಡಿಕೊಂಡು ಹೋಗುತ್ತಿದ್ದರು. ಭಂಡಾರದಲ್ಲಿ ಇಲ್ಲವೆ, ಆಡಳಿತದಲ್ಲಿ ಇಲ್ಲವೆ ಕೃಷಿ ಭೂಮಿಗಳಲ್ಲಿ ಪ್ರತಿವರುಷ ಇನಾಮು ಚಲಾವಣೆಯಲ್ಲಿ ಇರುವಂತೆ ಮಾಡಿಕೊಡುತ್ತಿದ್ದನು. ಸಾರಾಂಶವೆಂದರೆ, ನಗರಭಂಡಾರ, ಜಡಜವಾಹಿರಗಳು ಮತ್ತು ವಸ್ತ್ರಗಳು ಪ್ರತಿನಿತ್ಯ ಎಷ್ಟೆಲ್ಲ ಜಮೆಯಾಗುತ್ತಿದ್ದವೋ, ಅಷ್ಟನ್ನೆಲ್ಲ ಈ ಧರ್ಮಕಾರ್ಯದಿಂದ, ಬಕ್ಷೀಸು ಕೊಡುವುದರಿಂದ, ತುಸುವೆ ದಿನಗಳಲ್ಲಿ ಖರ್ಚಾಗಿ ಹೋಗುತ್ತಿತ್ತು. ಆತನ ಸ್ವಭಾವ ವಿಚಿತ್ರವಾಗಿತ್ತು. ನೌಕರರೊಂದಿಗೆ ಇರುತ್ತ ಚಿಲ್ಲರೆ ಜನರೊಂದಿಗೆ ಒಡನಾಟವಿತ್ತು. ಚಿಲ್ಲರೆ ಜನರೊಂದಿಗೆಯೇ ಕಾಲ ಕಳೆಯುತ್ತಿದ್ದನು. ಚಿಲ್ಲರೆ ಜನರೊಂದಿಗೆ ಎಷ್ಟೊಂದು ಒಡನಾಟವಿಟ್ಟಿದ್ದನೆಂದರೆ, ಆ ಹಲಾಲಖೋರ ಜನರು ಖಜಾನೆಯನ್ನೆಲ್ಲ ಸ್ವಚ್ಛ ಮಾಡಿಬಿಡುತ್ತಿದ್ದರು. ಆ ಹಲಾಲಖೋರರಿಗೂ ಅನಿಸುತ್ತಿತ್ತು. ಬಾದಶಹನು ನನ್ನ ಮೇಲಿಟ್ಟ ವಿಶ್ವಾಸದಷ್ಟು ಯಾರ ಮೇಲೂ ಇಡುವುದಿಲ್ಲವೆಂದು. ಒಂದೊಂದು ಸಲ ಹೀಗೂ ಘಟಿಸುತ್ತಿತ್ತು. ಬಾದಶಹನು ಏನಾದರೊಂದು ವಿಷಯದಲ್ಲಿ ಮಾತನಾಡತೊಡಗಿದನೆಂದರೆ, ಆ ಮಾತುಗಳಲ್ಲಿ ಯಾರ ವಿರುದ್ಧವಾದರೂ ಹೇಳುವ ಮಾತುಗಳಿರುತ್ತಿದ್ದುವು. ಆಗ ಆ ಜನ ತಿರುಗಿ ಅದು ಹಾಗಲ್ಲ, ನಮ್ಮ ಮಾತುಗಳನ್ನು ಕೇಳಿರಿ, ನಮ್ಮ ವಿನಂತಿಯನ್ನು ಪೂರ್ತಿಯಾಗಿ ಲಕ್ಷ್ಯಕೊಟ್ಟು ಕೇಳಿರಿ ಅನಂತರ ತಕರಾರು ಇದ್ದರೆ ಹೇಳಿರಿ ಎಂದು ತಿರುಗಿ ಮಾತನಾಡುತ್ತಿದ್ದರು. ಇದನ್ನು ಹೇಳುವ ತಾತ್ಪರ್ಯವೆಂದರೆ, ಬಾದಶಹನು ಯಾವ ಆಜ್ಞೆಯನ್ನು ಮಾಡುತ್ತಾನೆಯೊ ಅದನ್ನು ಎಲ್ಲರೂ ಒಪ್ಪಬೇಕು. ಆತನ ವಿರುದ್ಧ ಯಾರೂ ಮಾತನಾಡಬಾರದು. ಆದರೆ ಸಲುಗೆಯಿಂದಾಗಿ ಹೀಗೆ ಮನಬಂದಂತೆ ಅವಿನಯವಾಗಿ ಮಾತನಾಡುತ್ತಿದ್ದರು.

ಆ ಬಾದಶಹನ ಕೃಪೆ ಹಾಗು ದಯಾಗುಣಗಳು ಎಷ್ಟಿದ್ದುವೆಂದರೆ, ನಾನು ಅಡುಗೆಮನೆಯ ಮೇಲ್ವಿಚಾರಕನಾಗಿದ್ದೆ. ಒಂದು ದಿನ ಬಾದಶಹರು ಕರೆದು ಅಜ್ಞೆ ಮಾಡಿದರು. ನಮ್ಮ ಮುತಬ್ಬರಖಾನ ಅಂದರೆ ಅಡುಗೆಯ ಮನೆಯಲ್ಲಿ ಜೀವಂತ ದನಗಳನ್ನು ಕೊಲ್ಲಬೇಡಿರಿ. ಅದರಲ್ಲೇನು ಉಪಯೋಗವಿದೆ? ನಮ್ಮ ಒಂದು ಜೀವಕ್ಕಾಗಿ ಎಷ್ಟೊಂದು ಜೀವಗಳ ಕುತ್ತಿಗೆಯನ್ನು ಕತ್ತರಿಸುತ್ತೀರಿ. ಉಳಿದವರೆಲ್ಲ ಹೇಗೆ ಬಜಾರದಿಂದ ಮಾಂಸವನ್ನು ಕೊಂಡು ತರುತ್ತಾರೋ, ಹಾಗೆ ನೀವು ಕೂಡ ಬಜಾರದಿಂದಲೇ ಮಾಂಸವನ್ನು ಖರೀದಿ ತೆಗೆದುಕೊಂಡು

ಬನ್ನಿರಿ ಎಂದರು. ಅಲ್ಲದೆ ಬಾದಶಹರು ಹೀಗೆ ಆದೇಶ ನೀಡುತ್ತಿದ್ದರಲ್ಲ, ನಮ್ಮ ಖಾಸಾ ಊಟದ ಪದಾರ್ಥಗಳನ್ನು ಒಂದು ಮಣ್ಣಿನ ಪಾತ್ರೆಯಲ್ಲಿ ಇಲ್ಲವೆ ಚೀನಿ ಮಣ್ಣಿನ ಇತ್ಯಾದಿ ಪಾತ್ರೆಗಳಲ್ಲಿ ತನ್ನಿರಿ. ಉಳಿದೆಲ್ಲ ನಡುವಳಿಕೆಗಳು ಹಾಗೇಯೇ ಇರುತ್ತಿದ್ದರೂ ಚಿಂತೆ ಇಲ್ಲ. ಊಟ, ವಸ್ತ್ರಗಳು ಹಾಗೂ ಹಾಸಿಗೆಯ ವಿಷಯಗಳಲ್ಲಿ ಎಂದೂ ಆಸ್ಥೆಯನ್ನು ತೋರುತ್ತಿರಲಿಲ್ಲ. ಆಭರಣ ಇತ್ಯಾದಿಗಳನ್ನು ಮೈಮೇಲೆ ಇಟ್ಟುಕೊಂಡು ನಟಿಸುವುದರಲ್ಲೂ ಆಸ್ಥೆ ಇರಲಿಲ್ಲ. ಆದಿಲಶಹನು ಬಹಳಷ್ಟು ಸಲ ಗಾದಿ ಇತ್ಯಾದಿಗಳನ್ನು ಹಾಸಿಕೊಳ್ಳದೆ ನೆಲದ ಮೇಲೆಯೇ ಕುಳಿತುಕೊಳ್ಳುತ್ತಿದ್ದನು. ಆ ಕಾಲದ ಫಕೀರರ ನಡತೆ, ಮುಕ್ತ ಮನಸ್ಸು, ಮತ್ತು ಯಾವುದೇ ಪದಾರ್ಥಗಳಲ್ಲಿ ತಲೆಹಾಕದ ಅವನಂಥ ವ್ಯಕ್ತಿ ಇನ್ನೊಬ್ಬ ಇರಲಿಲ್ಲ. ಎಲ್ಲರೊಂದಿಗೂ ತುಂಬ ಗೌರವದಿಂದ ಇರುತ್ತಿದ್ದನು. ಭಗವಂತನ ಬಗ್ಗೆ ತುಂಬ ನಮ್ರತೆ ಇತ್ತು. ಹಸಿವಾದಾಗ ತಿನ್ನುವ ಯಾವ ಪದಾರ್ಥವಾದರೂ ಕಣ್ಣಿಗೆ ಬಿದ್ದರೆ ಅದನ್ನು ತಿನ್ನುತ್ತಿದ್ದನು. ಒಂದು ವೇಳೆ ಅಡುಗೆ ಕೆಟ್ಟರೆ, ಎಂದರೆ ಖಾರ ಇಲ್ಲವೆ ಹುಳಿಯಾಗಿದ್ದರೆ, ರುಚಿಯಾಗಿರದಿದ್ದರೆ, ಉಣ್ಣುವ ವೇಳೆಯಲ್ಲಿ ಬೇಸರಿಸಿಕೊಳ್ಳುತ್ತಿರಲಿಲ್ಲ. ಆನಂದದಿಂದ ತಿನ್ನುತ್ತಿದ್ದನು. ಒಂದು ವೇಳೆ ಪಂಕ್ತಿಯಲ್ಲಿ ಉಣ್ಣುವ ಜನರು ಅಥವಾ ಸನ್ನಿಧಿಯಲ್ಲಿರುವ ಜನರು ಅಡುಗೆಯ ಪದಾರ್ಥಗಳು ಕೆಟ್ಟಿವೆ ಇಲ್ಲವೆ ಹುಳಿಯಾಗಿದೆ ಅಥವಾ ರುಚಿಯಾಗಿಲ್ಲ ಎಂದರೆ, ಅನ್ನದಾತನಾದ ಈಶ್ವರನು ಅನ್ನವನ್ನು ಸಿದ್ಧಪಡಿಸಿ ತಿನ್ನುವ ಪದಾರ್ಥಗಳನ್ನು ನಮ್ಮತ್ತ ಕಳಿಸಿರುತ್ತಾನೆ. ಆದ್ದರಿಂದ ಆ ಪದಾರ್ಥಗಳಿಗೆ ಏನೊಂದು ಹೆಸರನ್ನಿಡದೆ ಬಹಳ ಪ್ರೀತಿಯಿಂದ ಊಟಮಾಡಿ ಈಶ್ವರನನ್ನು ಸ್ತುತಿಸಬೇಕು. ಅಂದರೆ ಮಳೆ-ಬೆಳೆಗಳು ವೃದ್ಧಿಯಾಗುತ್ತವೆ ಎಂದು ಅಪ್ಪಣೆ ಕೊಡುತ್ತಿದ್ದನು. ಹಸಿವಾದಾಗ ಯಾವ ಖಾದ್ಯ ಪದಾರ್ಥಗಳು ಎದುರಿಗೆ ಬರುವವೋ ಅವುಗಳ ಕುರಿತು ಬೇಸರಿಸಬಾರದು. ಯಾಕೆಂದರೆ ಯಾವ ವೇಳೆಯಲ್ಲಿ ಯಾವ ಅನ್ನ ದೊರೆಯುವುದೋ ಅದಕ್ಕೆ ಹೆಸರನ್ನಿಟ್ಟು ಕೆಟ್ಟದಾಗಿ ಮಾತನಾಡುವುದೆಂದರೆ ಕೃತಘ್ನತೆ ಎನಿಸುತ್ತದೆ. ಅದಕ್ಕೊಂದು ದೃಷ್ಟಾಂತ ಹೇಳಬೇಕೆಂದರೆ, ಒಂದು ದಿನ ಅನೇಕ ಸೌತೆಕಾಯಿಗಳನ್ನು ತರಲಾಗಿತ್ತು. ನಾನು ಆ ಸೌತೆಕಾಯಿಗಳನ್ನು ಸ್ವಚ್ಛಮಾಡಿ, ಮೇಲಿನ ತೊಗಟೆಯನ್ನು ತೆಗೆದು, ಸೋಜ್ವಳಮಾಡಿ, ಒಂದು ಸೌತೆಕಾಯಿಯಲ್ಲಿ ನಾಲ್ಕು ಹೋಳುಗಳನ್ನು ಮಾಡಿ ಬಾದಶಹರ ಎದುರಿಗೆ ಇಡುತ್ತಿದ್ದೆ. ಅವುಗಳಲ್ಲಿ ಐದಾರನ್ನು ಬಹು ಪ್ರೀತಿಯಿಂದ ಪ್ರಭುಗಳು ತಿಂದರು. ಕೊನೆಗೆ ಒಂದು ಸೌತೆಕಾಯಿಯಲ್ಲಿಯ ಮೂರು ಹೋಳುಗಳನ್ನು ತಿಂದು ಅದರಲ್ಲಿಯ ನಾಲ್ಕನೆಯ ಹೋಳನ್ನು ನನಗೆ ಕೊಟ್ಟರು ಮತ್ತು ನೀನೊಂದು ತಿನ್ನು ಎಂದು ಆದೇಶಿಸಿದರು. ಅವರ ಅಜ್ಞೆಯಂತೆ ನಾನು ಆ ಸೌತೆಕಾಯಿ ಒಂದು ಹೋಳನ್ನು ಬಾಯಿಯಲ್ಲಿ ಇಟ್ಟುಕೊಂಡೆ. ತಿನ್ನುತ್ತಿದ್ದಂತೆ ಅದು ಎಷ್ಟು ಕಹಿಯಾಗಿತ್ತಲ್ಲ ವಿಷವೇ ಆಗಿತ್ತು. ಆ ಸೌತೆಕಾಯಿಯಂತೆ ನಾನು ಎಂದೂ ಅಷ್ಟು ಕಹಿಯಾದದ್ದನ್ನು ತಿಂದಿರಲಿಲ್ಲ. ಆದ್ದರಿಂದ ನನಗೆ ಬಹಳ ಆಶ್ಚರ್ಯವಾಯಿತು. ಅಂಥ ಕಹಿ ಹೋಳುಗಳನ್ನು ಬಾದಶಹರು ಹೇಗೆ ತಿಂದಿರಬೇಕು? ಯಾಕೆಂದರೆ ಅವುಗಳಲ್ಲಿಯ

ಒಂದು ಹೋಳು ನನ್ನ ನಬಿಶಿಬಾಂತ ಕಹಿಯಾಯಿತು. ಆಶ್ಚರ್ಯವೆಂದರೆ ಬಾದಶಹರ ನಾಲಿಗೆಗೆ ಯಾವುದು ಕಹಿಯಾಗಿ ಹತ್ತುತ್ತಿರಲಿಲ್ಲ. ಸೌತೆಕಾಯಿಯ ಹೊರಗಿನ ಉತ್ತಮ ಬಣ್ಣದಿಂದಲೇ ಬಾದಶಹ ಕಾಯಿ ಶ್ರೇಷ್ಠವೆಂದು ತಿಳಿದಿದ್ದರು. ಸೇವಕರಿಗೆಲ್ಲ ಈ ವಿಷಯ ಕಚೇರಿಯ ಯಾರಿಗಾದರೂ ತಿಳಿದರೆ ನಿಮಗೆ ಶಿಕ್ಷೆ ಕೊಡುವ ಎಂದು ಎಚ್ಚರಿಕೆ ಕೊಟ್ಟರು. ಒಂದು ದಿನ ನನಗೆ ಊಟದ ಸಿದ್ಧತೆ ಮಾಡಲು ಹೇಳುತ್ತ ಅವರು ಅಲ್ಲಿಯೇ ಶತಪಥ ತಿರುಗುತ್ತಿದ್ದರು. ನಾನು ಊಟದ ಸಿದ್ಧತೆಯನ್ನು ಮಾಡುತ್ತಿದ್ದಂತೆ ಅವರು ಇನ್ನೊಂದು ಕೋಣೆಯಲ್ಲಿ ಹೋಗಿದ್ದರು. ಅಲ್ಲಿಗೆ ನಾನು ಹೋಗಿ ಊಟ ಸಿದ್ಧವಾಗಿದೆ ಎಂದು ಹೇಳಲು ಹೋದರೆ, ಅಲ್ಲಿ ಎಷ್ಟೋ ಜನ, ಭಾಂಡಾರದವರು, ಅಡುಗೆ ಮನೆ ಸೇವಕರು ಊಟದ ತಟ್ಟೆಗಳನ್ನಿಟ್ಟುಕೊಂಡು ಉಣ್ಣುತ್ತಿದ್ದರು. ಬಾದಶಹರೂ ಆ ಸೇವಕರ ಮಧ್ಯ ಕುಳಿತಿದ್ದಾರೆ ಮತ್ತು ಆ ನೌಕರರೊಂದಿಗೆ ಉಣ್ಣುತ್ತಿದ್ದಾರೆ. ಆ ಊಟದ ಪದಾರ್ಥಗಳೆಂದರೆ ಜೋಳದ ರೊಟ್ಟಿ ಹಾಗು ಹಸಿರು ತೊಪ್ಪಲದ ಪಲ್ಯ. ಯಾಕೆಂದರೆ ದಕ್ಷಿಣದವರು ತೊಪ್ಪಲು ಪಲ್ಯವನ್ನು ಬೇಯಿಸಿ ರೊಟ್ಟಿಯೊಂದಿಗೆ ತಿನ್ನುತ್ತಾರೆ. ಅದೇ ರೀತಿಯಲ್ಲಿ ಬಾದಶಹರು ಊಟ ಮಾಡುತ್ತಿದ್ದರು. ನಾನು ಅಲ್ಲಿಗೆ ಹೋದೆ. ನನ್ನನ್ನು ಕಂಡು ಬಾದಶಹರು ನಿಮ್ಮ ಉಪಕಾರ ಸ್ಮರಿಸದೆ ನಾವು ನಮ್ಮ ಹೊಟ್ಟೆಯನ್ನು ತುಂಬಿಸಿಕೊಂಡೆವು ಎಂದು ಹೇಳಿದರು. ಊಟದ ವಿಷಯದಲ್ಲಿ ಮತ್ತು ಹಾಗೆಯೇ ವೇಷದ ವಿಷಯದಲ್ಲೂ ಬಹಳ ಆಸ್ಥೆ ಇರಲಿಲ್ಲ. ಬಾದಶಹರ ಸೇವೆಯಲ್ಲಿ ಅನೇಕ ಜನ ಹುಜೂರ ಇತ್ಯಾದಿ ನೌಕರರಿರುತ್ತಾರೆ. ಅವರಿಗಾಗಿ ಕೂಪ ಎಂಬ ಬಿಳಿ ಬಣ್ಣದ ತೆಳುವಾದ ಬಟ್ಟೆಯ ಪೋಷಾಕುಗಳನ್ನು ಸಮವಸ್ತ್ರವೆಂದು ನಾವು ಹೊಲಿಸಿ ಕೊಡುತ್ತಿದ್ದೆವು. ಅದರ ಬೆಲೆ ಐದು ಅಥವಾ ಆರು ಹೊನ್ನುಗಳಷ್ಟಿತ್ತು. ಆದರೆ ಬಾದಶಹನ ಸ್ವಂತಕ್ಕೆ ಧರಿಸಲು ವಸ್ತ್ರವನ್ನು ಎರಡು ಹೊನ್ನಿನ ಬೆಲೆಯನ್ನು ಖರೀದಿಸಿ ಹೊಲಿದು ಕೊಡಲಾಗುತ್ತಿತ್ತು. ಇದರಲ್ಲಿಯ ತಾತ್ಪರ್ಯವೆಂದರೆ, ನೌಕರರು ಧರಿಸುವ ವಸ್ತ್ರದ ಬೆಲೆ ಆರು ಹೊನ್ನು. ಬಾದಶಹನ ವಸ್ತ್ರದ ಬೆಲೆ ಎರಡು ಹೊನ್ನು. ಇಷ್ಟೊಂದು ಉದಾಸೀನನಾಗಿ ಬಾದಶಹನು ಇರುತ್ತಿದ್ದನು. ಬಾದಶಹರಿಗೆ ಆಭರಣಯುಕ್ತ ಹೊನ್ನಿನ ಟೊಂಕಪಟ್ಟಿ ಇರಬೇಕು. ಅದು ಆದಿಲಶಹನಿಗೆ ತಾಮ್ರ, ಕಬ್ಬಿಣ, ಹಿತ್ತಾಳಿ ಹಾಗೂ ಸೀಸಗಳ ಮಿಶ್ರಣದಿಂದಾದ ಪಟ್ಟಿ ಇರುತ್ತಿತ್ತು. ಅದರ ಮೇಲೆ ಒಂದೊಂದು ಪದಾರ್ಥಗಳನ್ನು ತಂತಿಯಲ್ಲಿ ಜೋಡಿಸಿ ಸುತ್ತುವರಿದು ಟೊಂಕಕ್ಕೆ ಕಟ್ಟಿಕೊಳ್ಳುತ್ತಿದ್ದನು. ತಲೆಯ ಮೇಲೆ ಫಕೀರರಂತೆ ಟೊಪ್ಪಿಗೆಯನ್ನು ಹಾಕಿಕೊಳ್ಳುತ್ತಿದ್ದನು. ಫಕೀರರ ಕಂಬಳಿಯಂತೆ, ಚೌಕಾದ ಚದ್ದರನ್ನು ಹೆಗಲ ಮೇಲೆ ಹಾಕಿಕೊಂಡು ಅದರ ಒಂದು ಪದರನ್ನು ಎದೆಯ ಮೇಲೆ ಇಳಿಬಿಡುತ್ತಿದ್ದನು. ಕಾಲಲ್ಲಿ ತೊಗಲಿನ ಚಪ್ಪಲಿಗಳನ್ನು ಧರಿಸುತ್ತಿದ್ದನು. ಇಲ್ಲವಾದಲ್ಲಿ ಬಾದಶಹರ ಕಾಲಲ್ಲಿಯ ಚಪ್ಪಲಿಗಳು ಕಲಾಬತ್ತಿನಿಂದ ಕೂಡಿದ್ದು ಮುತ್ತುಗಳನ್ನು ಹಚ್ಚಿರುತ್ತವೆ. ಅವನ್ನು ಧರಿಸದೆ ಚರ್ಮದ ಜೋಡುಗಳನ್ನು ಹಾಕಿಕೊಳ್ಳುತ್ತಿದ್ದನು. ಯಾವಾಗಲೂ ಇದೇ ರೀತಿಯ ವೇಷಭೂಷಣಗಳನ್ನು ಹೊಂದಿರುತ್ತಿದ್ದನು. ಕೈಯಲ್ಲೊಂದು

ಕೋಲು ಇರುತ್ತಿತ್ತು. ತನ್ನ ಹೆಸರು ಅಲೀ ಆದಿಲಶಹಾ ಎಂದಿದ್ದರೂ, ಅಲಿ ಷೇರ ಖಲಂದರ ಎಂದು ಹೆಸರನ್ನಿಟ್ಟುಕೊಂಡು ಫಕೀರ ಹುದ್ದೆಯಲ್ಲಿ ನಡೆಯುತ್ತಿದ್ದನು. ಹಾಸಿಗೆಯ ಮೇಲೆ ಇಲ್ಲವೆ ಎತ್ತರದ ಮೇಲೆ ಕೂಡಬೇಕೆಂಬ ಪ್ರತಿಷ್ಠೆ ಏನೂ ಇರಲಿಲ್ಲ. ದೊಡ್ಡ ವಾಡೆಯನ್ನು ಮತ್ತು ಬಹು ದೊಡ್ಡ ಕಟ್ಟಡವನ್ನು ಕಟ್ಟಿಸಿತ್ತಾದರೂ ನೆಲದ ಮೇಲೆ ಗಾಲಿಚಾ ಹಾಸಿ ಬಹಳ ವರುಷಗಳಾಗಿದ್ದವು. ಹಳೆಯ ದರಬಾರದ ಕಾಲದಲ್ಲಿ ಹಾಸಿದ ಗಾಲಿಚಾದ ಮೇಲೆಯೆ ಕುಳಿತುಕೊಳ್ಳುತ್ತಿದ್ದನು. ಆದರೆ, ಬೇರೆ ಕಡೆಯಿಂದ ಬಾದಶಹರ ವಕೀಲರಾಗಲಿ ಇಲ್ಲವೆ ಯಾರಾದರೂ ಕಾರಬಾರಿಗಳು ಬೇಟಿಗೆ ಬಂದ ಸಮಯದಲ್ಲಿ ಮಾತ್ರ ಹಾಸಿಗೆಯ ಮೇಲೆ ಪಟ್ಟದ ಗಾದಿಯನ್ನು ಪ್ರತ್ಯೇಕವಾಗಿ ಹಾಸಿ ಆ ಹಾಸಿಗೆಯ ಮೇಲೆ ಕಲಾಬತ್ತಿನ ಮಖಮಲ್ ಬಟ್ಟೆ ಹಾಗೂ ಕಲಾಬತ್ತಿನ ರೇಶ್ಮೆ ಬಟ್ಟೆಯ ಮೇಲೆ ಕಸೂತಿಯಿಂದ ಹೆಣೆದದ್ದನ್ನು ಹಾಸಿ, ಲೋಡು, ತೆಕ್ಕೆಗಳನ್ನಿಟ್ಟು ದರಬಾರಿ ಥಾಟಿನ ಸಭೆಯನ್ನು ನಡೆಸುತ್ತಿದ್ದನು. ಆಗ ಇಂಥ ವೈಭವದ ಸಭೆ ಇನ್ನೆಲ್ಲೂ ಇರಲಿಕ್ಕಿಲ್ಲವೆಂಬಂತೆ ಇರುತ್ತಿತ್ತು. ಎಲ್ಲರೊಂದಿಗೆ ಬಹಳ ಗೌರವದಿಂದ ನಡೆದುಕೊಳ್ಳುತ್ತಿದ್ದನು. ಬಾದಶಾಹಿ ರೀತಿ-ರಿವಾಜುಗಳನ್ನು ವ್ಯವಸ್ಥಿತವಾಗಿ ಕಾಪಾಡುತ್ತಿದ್ದನು. ಒಂದು ದಿನ ಊಟವಾದ ನಂತರ ಬಾದಶಹನು ಹಕೀಮುಲ್ಮುಕ್ಕನ ಮೈಗೆ ಅನಿಸಿಕೊಂಡು ಕುಳಿತಿದ್ದನು. ಅಲ್ಲಿಯೇ ನಾನು ನಿಂತುಕೊಂಡಿದ್ದೆ. ಆಗ ಬಾದಶಹರು ನನ್ನ ಪದರನ್ನು ಜಗ್ಗಿ ಕೆಳಗೆ ಕೂಡಲು ಆಜ್ಞೆ ಮಾಡಿದರು. ಅವರ ಆಜ್ಞೆಯ ಮೇರೆಗೆ ನಾನು ಕೆಳಗೆ ಕುಳಿತುಕೊಂಡೆನು. ಆಗ ಬಾದಶಹರು ಅಪ್ಪಣೆ ಮಾಡುತ್ತ, ಎಲ್ಲ ಜನರು ನನಗೆ ಏನು ಅನ್ನುತ್ತಾರೆ? ಮತ್ತು ನನ್ನ ಯೋಗ್ಯತೆಯನ್ನು ಹೇಗೆ ಗುರುತಿಸಲಾಗುತ್ತಿದೆ? ಎಂದು ವಿಚಾರಿಸಿದರು. ಆಗ ನಾನು ಅಲಿ ಆದಿಲಶಹರ ಉಲ್ಲಸಿತ ಲಕ್ಷಣಗಳನ್ನು ಗುರುತಿಸಿ ಅಮರ್ಯಾದೆಯಿಂದ ಉತ್ತರಿಸಿದೆ. ಎಲ್ಲ ಜನರು ತಾವು ಹೇಗಿದ್ದೀರೋ ಆ ರೀತಿಯಲ್ಲಿ ತಮ್ಮನ್ನು ಇನ್ನೂ ಗುರುತಿಸಿಲ್ಲ ಎಂದು ಹೇಳಿದೆ. ನನ್ನ ಉತ್ತರ ಬಾದಶಹನಿಗೆ ಬಹಳ ಒಪ್ಪಿಗೆಯಾಯಿತು. ಸಂತೋಷಗೊಂಡು ಹಾಸ್ಯವದನರಾಗಿ ನನ್ನನ್ನು ಹಿಡಿದು ಆಜ್ಞೆ ಮಾಡಿದರು. ನೀನು ಏನು ಈಗ ಹೇಳಿದಿಯಲ್ಲ? ಅದನ್ನು ವಿಸ್ತಾರಪೂರ್ವಕವಾಗಿ ಹೇಳು ಎಂದರು. ಆಗ ನಾನು ವಿನಂತಿಸಿಕೊಂಡೆ. ಅಹೋ ಖುದಾವಂದರೆ, ತಮ್ಮಲ್ಲಿ ಬಹಳ ವಿದ್ಯೆ ಹಾಗು ಗುಣಗಳಿವೆ. ಅವುಗಳು ಮನುಷ್ಯನ ಬುದ್ಧಿಗೆ ಹೇಗೆ ತಿಳಿಯುತ್ತವೆ? ತಾವು ನೌಕರ ಜನರೊಂದಿರುವಾಗ ಯಾವಾಗಲಾದರೂ ಮುಸಾಫಿರನಂತೆ (ಪ್ರವಾಸಿಗನಂತೆ) ಮಾತನಾಡುತ್ತೀರಿ. ಯಾವಾಗಲಾದರಾ ಸಾಧು ಸಂತರೊಂದಿಗಿದ್ದರೆ, ಈಶ್ವರನಜ್ಞಾನವನ್ನು ತಿಳಿದ ದೊಡ್ಡ ಸಿದ್ಧ ಪುರುಷನಂತೆ ಸಮಾಧಿಸ್ಥಿತಿಯಲ್ಲಿದ್ದಂತೆ ಮಾತನಾಡುತ್ತೀರಿ. ನಿಮ್ಮ ಮಾತಿನ ಮೇಲೆ ಇನ್ನಾರ ತರ್ಕವೂ ನಡೆಯುವುದಿಲ್ಲ. ಮತ್ತೆ ವಿದ್ವಾಂಸರ ಮಧ್ಯ ಕುಳಿತಿದ್ದರೆ ಆಗ ವಿವಿಧ ವಿದ್ಯೆಗಳ ಸೂಕ್ಷ್ಮ ವಿಷಯಗಳನ್ನು ಮಹಾ ಬುದ್ಧಿವಂತರಾಗಿ ಮಾತನಾಡುತ್ತೀರಿ. ಆಗ ನೋಡಿದವರಿಗೆ ಇವನೊಬ್ಬ ಬಹು ದೊಡ್ಡ ವಿದ್ವಾಂಸನಿದ್ದಾನೆ. ಸಂಪೂರ್ಣ ವಿದ್ಯೆಯನ್ನು ಕಲಿತಿದ್ದಾನೆ ಎಂದು ಅನಿಸುತ್ತದೆ, ಮತ್ತೆ ಕಚೇರಿಯಲ್ಲಿದ್ದರೆ ಎಲ್ಲರನ್ನೂ ಸಂತೋಷಗೊಳಿ

ಸುತ್ತೀರಿ. ಯಾವ ಸಮಯದಲ್ಲಿ ತಾವು, ಬುದ್ಧಿವಂತ, ಯುಕ್ತಿವಂತ, ವಿಚಾರವಂತ ಮತ್ತು ನಾಲ್ಕು ಕಡೆಯ ಬಾದಶಹರ ವಕೀಲರೊಂದಿಗೆ ಮಾತನಾಡಲು ಆರಂಭಿಸಿದರೆ ಆಗ ಅನಿಸುವುದು. ಈ ಕಾಲದ ಇವನೊಬ್ಬ ಸಿಕಂದರ ಬಾದಶಹನೇ ಇರಬೇಕು ಎಂದು. ಆ ರೀತಿಯಲ್ಲಿ ಭಾಷಣ ಮಾಡುತ್ತೀರಿ, ಯಾವ ವ್ಯಕ್ತಿಯಲ್ಲಿ ಈ ಎಲ್ಲ ಲಕ್ಷಣಗಳು ಮತ್ತು ವಿದ್ಯೆಗಳು ಇರುತ್ತವೆಯೊ ಅವನು ತಮ್ಮ ಯೋಗ್ಯತೆಯನ್ನು ಗುರುತಿಸಬಲ್ಲನು ಎಂದು ಹೇಳಿದನು.

ಬಾದಶಹನಿಗೆ ಪುಸ್ತಕಗಳ ಮೇಲೆ ಬಹಳ ಪ್ರೀತಿ ಇತ್ತು. ಪರ್ಶಿಯನ್ ಪುಸ್ತಕಗಳನ್ನು ಬಹಳ ನೋಡುತ್ತಿದ್ದನು. ಪ್ರತಿಯೊಂದು ಪ್ರಕಾರದ ಹಾಗು ಪ್ರತಿಯೊಂದು ವಿಷಯಗಳ ಪುಸ್ತಕಗಳನ್ನು ದೊರಕಿಸಿಕೊಂಡಿದ್ದನು. ಆತನ ಗ್ರಂಥಾಲಯ ತುಂಬ ದೊಡ್ಡದಾಗಿ ಶೋಭಿಸುತ್ತಿತ್ತು. ಆ ಗ್ರಂಥಾಲಯದಲ್ಲಿ 'ಖುಷ್ ನವೀಸ್' ಎಂದರೆ, ಸುಂದರ ಅಕ್ಷರಗಳನ್ನು ಬರೆಯುವ ಅರವತ್ತು ಲೇಖಕರಿದ್ದರು. ಸೋನೇರಿ ಕೆಲಸ ಮಾಡುವವರು, ರೇಖೆಗಳನ್ನು ಎಳೆಯುವವರು, ಗ್ರಂಥಗಳನ್ನು ಕಟ್ಟುವವರು(book Binders) ಮತ್ತು ಚಿತ್ರಗಳನ್ನು ಬಿಡಿಸುವವರು ಹೀಗೆ ಗ್ರಂಥಾಲಯದಲ್ಲಿ ಎಲ್ಲ ಕೆಲಸಗಾರರು ತಂತಮ್ಮ ಕೆಲಸಗಳಲ್ಲಿ ಇದ್ದರು. ಗ್ರಂಥಾಲಯದ ಪುಸ್ತಕಗಳಲ್ಲಿ ವಿಶೇಷ ಪುಸ್ತಕಗಳು ನಾಲ್ಕು ಪೆಟ್ಟಿಗೆಗಳು ಯಾವಾಗಲೂ ಬಾದಶಹರ ಹತ್ತಿರ ಇರುತ್ತಿದ್ದುವು. ಎಲ್ಲಿಯೇ ಪ್ರವಾಸಕ್ಕೆ ಹೋದರೂ ಅವುಗಳು ಅಲಿ ಆದಿಲಶಾಹನ, ಜೊತೆಯೇ ಇರುತ್ತಿದ್ದವು. ಒಂದು ಸಲ ಹೀಗೆಯೇ ಪ್ರವಾಸದಲ್ಲಿದ್ದಾಗ ಸಾಯಂಕಾಲ ವಸತಿ ಸ್ಥಾನಕ್ಕೆ ಬಂದು ಮುಟ್ಟಿದ್ದೆವು. ದೊಡ್ಡ ಮಳೆ ಬೀಳ ಹತ್ತಿತ್ತು. ಸೈನ್ಯ ಹಿಂದು ಮುಂದಾಗಿತ್ತು. ಬಾದಶಹರು ಮುಕ್ಕಾಮಿಗೆ ಬಂದು ಮುಟ್ಟಿದ್ದರು. ಆಗ ಪುಸ್ತಕಗಳ ಪೆಟ್ಟಿಗೆಗಳ ನೆನಪಾಯಿತು. ಹುಡುಕಾಡಿದ ನಂತರ ಗೊತ್ತಾಯಿತು. ಭಂಡಾರದ ಜೊತೆಗೆ ಆ ಪುಸ್ತಕಗಳ ನಾಲ್ಕು ಪೆಟ್ಟಿಗೆಗಳು ಬೇರೆ ಮಾರ್ಗದಿಂದ ಇನ್ನೊಂದು ಗ್ರಾಮದಲ್ಲಿ ಇಳಿಸಲಾಗಿತ್ತು. ಇದು ಗೊತ್ತಾದ ತಕ್ಷಣ ಬಾದಶಹ ಅತ್ಯಂತ ಸಿಟ್ಟಾಗಿ ಆಜ್ಞೆ ಮಾಡಿದ. ಎಷ್ಟೋ ಸಲ ಹೇಳಿರುವೆ. ಪುಸ್ತಕಗಳ ಪೆಟ್ಟಿಗೆಗಳನ್ನು ನನ್ನಿಂದ ದೂರ ಮಾಡಬೇಡಿರಿ ಎಂದು, ಹೀಗೆ ತಾಕೀತು ಮಾಡಿದ್ದರೂ ಅದರ ಉಪಯೋಗವಾಗಲಿಲ್ಲ. ಎಂದಾಗ ಅಂಥ ಧಾರಾಕಾರ ಮಳೆಯಲ್ಲಿಯೇ ಒಬ್ಬ ಸರದಾರನನ್ನು ಪುಸ್ತಕ ಪೆಟ್ಟಿಗೆಗಳನ್ನು ತರಲು ಕಳಿಸಲಾಯಿತು. ಅವುಗಳು ಬರುವವರೆಗೂ ಬಾದಶಹ ಸಿಡಿಮಿಡಿಗೊಳ್ಳುತ್ತಲೇ ಇದ್ದನು. ಆಗ ಸಾಯಂಕಾಲವಾಗಿತ್ತು. ಕುದಿಸಿದ ಕೋಳಿ ಮೊಟ್ಟೆಗಳನ್ನು ತರಲು ಆಜ್ಞೆ ಮಾಡಿದನು. ನಾನು ಇಪ್ಪತ್ತು ಮೊಟ್ಟೆಗಳನ್ನು ರುಮಾಲಿನಲ್ಲಿ ಕಟ್ಟಿ ನೀರಿನಲ್ಲಿ ಕುದಿಸಿ, ಬಿಸಿ ಬಿಸಿ ಮೊಟ್ಟೆಗಳನ್ನು ರುಮಾಲಿನಲ್ಲಿಯೇ ತಂದು ಕೊಡುತ್ತಿದ್ದೆನು. ಮೊಟ್ಟೆಗಳನ್ನು ಒಡೆದು ಅದರಲ್ಲಿಯ ಹಳದಿಯನ್ನು ಚಮಚೆಯಿಂದ ಬಾದಶಹನು ತಿನ್ನುತ್ತಿದ್ದನು. ಒಮ್ಮೊಮ್ಮೆ ಹನ್ನೊಂದು ಹನ್ನೆರಡು ಮೊಟ್ಟೆಗಳನ್ನು ತಿನ್ನುತ್ತಿದ್ದನು. ಅಂದು ಕಷ್ಟಪಟ್ಟು

ಇಪ್ಪತ್ತು ಮೊಟ್ಟೆಗಳನ್ನು ದೊರಕಿಸಿ ಕುದಿಸಿದ್ದೆನಾದರೂ ಅವುಗಳಲ್ಲಿ ಕೇವಲ ಎರಡರಲ್ಲಿ ಹಳದಿ ರಸ ಪೂರ್ಣವಾಗಿ ಬಂದಿತ್ತು. ಉಳಿದದ್ದರಲ್ಲಿ ಒಡಕಾಗಿತ್ತು. ಆ ಎರಡು ಮೊಟ್ಟೆಗಳ ಹಳದಿ ರಸವನ್ನಷ್ಟೇ ಬಾದಶಹ ತಿಂದನು. ಮತ್ತೆ ಇಪ್ಪತ್ತು ಮೊಟ್ಟೆಗಳನ್ನು ಕುದಿಸಿದರೂ ಒಳಗಿನ ರಸ ಒಡೆದಿರುತ್ತಿತ್ತು. ಒಂದರಲ್ಲಿ ಮಾತ್ರ ಒಡೆಯದ ಹಳದಿ ರಸ ಬಂದಿತು. ಅಷ್ಟನ್ನೇ ತಿಂದನು. ಆಗ ಅಪ್ಪಣೆ ಕೊಡಿಸುತ್ತ ನನ್ನ ದೈವ ಇನ್ನು ಅಧಿಕವಾಗಿಲ್ಲವೆಂದೇ ನನಗನಿಸುತ್ತದೆ ಅಂತಲೇ ಹೀಗಾಗಿದೆ ಎಂದನು. ತನ್ನ ಆಯುಷ್ಯ ಎಂದಿಗೆ ಮುಗಿಯುತ್ತದೆ ಎಂಬುದು ಬಾದಶಹನಿಗೆ ಗೊತ್ತಾಗಿತ್ತು. ಯಾವಾಗಲಾದರೂ ಒಮ್ಮೊಮ್ಮೆ ಊಟಕ್ಕೆ ಕುಳಿತಾಗ ತನ್ನ ಮರಣದ ವಿಷಯವನ್ನು ಪ್ರಕಟಿಸುತ್ತಿದ್ದನು. ಹಾಗೆಯೇ ಒಂದು ದಿನ ಊಟಕ್ಕೆ ಕುಳಿತಿದ್ದನು. ನಿಯಾಜ ಅಹ್ಮದ ಖಾನನ ಜೊತೆಗೆ ರಾಜ್ಯದ ನಾಲ್ಕು ಬದಿಗಳ ಮಾತನಾಡುತ್ತ ಕುಳಿತಿದ್ದನು. ಕೊನೆಕೊನೆಗೆ ಆತ ಮಾತನಾಡುತ್ತ-ಆಡುತ್ತ ಇಪ್ಪತ್ತೆರಡು ವರುಷಗಳಾದುವು ಭಗವಂತನು ನನ್ನ ಮನೋರಥವನ್ನು ಪೂರ್ಣಗೊಳಿಸಲಿಲ್ಲ. ಆದರೆ ಈಗ ಅದನ್ನು ಪೂರೈಸುವ ಉತ್ತರ ಸಿಗಹತ್ತಿದೆ, ನಾನು ಏನನ್ನು ಬೇಡಿದ್ದೆನೋ ಅದನ್ನು ಕೊಟ್ಟಿರುವೆ ಎಂದಿದ್ದಾನೆ ಎಂದನು. ನನಗೆ ಅರ್ಥವಾಗಲಿಲ್ಲ. ಅಮರ್ಯಾದೆ ಎನಿಸಿದರೂ ನಾನು ಕೇಳಿದೆ. ಏನದು? ಎಂದು. ಅದಕ್ಕೆ ಬಾದಶಹನು ಬಹಳ ಸಂತೋಷದಿಂದ ಮತ್ತು ದೊಡ್ಡ ಆನಂದದಿಂದ ಹೇಳಿದನು. ಅದು ನನ್ನ ಮರಣದ ವಿಷಯ ಎಂದು. ಬಾದಶಹನ ಮಾತನ್ನು ಕೇಳುತ್ತಲೇ ನಾನು ನನ್ನ ಪ್ರಶ್ನೆಗೆ ಬಹಳ ಪಶ್ಚಾತ್ತಾಪಪಟ್ಟು ಖಿನ್ನನಾದೆನು. ಚಿಂತಾಗ್ರಸ್ತನಾದೆನು. ಅದನ್ನು ಕಂಡ ಬಾದಶಹನು ನನಗೆ ನೀನು ತುಂಬ ಮೂರ್ಖನಿದ್ದೀ, ಯಾವ ಪದಾರ್ಥವನ್ನು ನಾನು ಬಹಳ ವರುಷಗಳಿಂದ ಆಶೆ ಮಾಡುತ್ತ ಈಶ್ವರನ ಹತ್ತಿರ ಕೇಳುತ್ತಿದ್ದೆನೊ ಅದರ ಉತ್ತರ ಇಂದು ದೊರಕಿದೆ, ಹೀಗಿದ್ದರೂ ನೀನು ಖಿನ್ನನಾಗುತ್ತೀಯಲ್ಲ? ಎಂದನು.

ಅನಂತರ ತುಸು ದಿನಗಳಾದ ಮೇಲೆ ರಾಣಿವಾಸದ ಒಬ್ಬ ಕುಣಬೀ ಸೇವಿಕೆ ಬಂದು ಬಾದಶಹರಿಗೆ ಏನನ್ನೋ ಹೇಳಿದಳು. ಆಗ ಬಾದಶಹನು ನನ್ನ ಕಡೆಗೆ ನೋಡುತ್ತ ನಮ್ಮ ರಾಣಿಯವರಿಗೆ ಉಡಲು ವಸ್ತ್ರಗಳನ್ನು ಕೇಳಿದ್ದಾರೆ ಅವುಗಳನ್ನು ಕೊಡು ಎಂದು ಆಜ್ಞೆ ಮಾಡಿದನು. ನಾನು ಪ್ರತಿಯಾಗಿ ವಿನಂತಿಸುತ್ತ ಯಾವ ಬಣ್ಣದ ವಸ್ತ್ರಗಳನ್ನು ಕೊಡಲಿ ಮತ್ತು ಎಂಥವುಗಳನ್ನು ಕೊಡಲಿ? ಎಂದು ಕೇಳಿದೆನು. ತಮ್ಮ ಅಜ್ಞೆಯಂತೆ ಕೊಡುವೆನು ಎಂದೆನು. ಆಗ ಬಾದಶಹನು ಆಜ್ಞೆ ಮಾಡುತ್ತ ಬಿಳೀ ವಸ್ತ್ರಗಳನ್ನು ಕೊಡು, ಯಾಕೆಂದರೆ ದಕ್ಷಿಣ ದೇಶದಲ್ಲಿ ವಿಧವಾ ಸ್ತ್ರೀಯರು ಬಿಳಿ ವಸ್ತ್ರಗಳನ್ನು ಉಡುವುದು ರೂಢಿಯಲ್ಲಿದೆ ಎಂದನು. ರಾಣಿವಾಸದ ಸೇವಿಕೆ ಮತ್ತೆ ಬಂದು ನನ್ನನ್ನು ವಸ್ತ್ರಗಳನ್ನು ಕೊಡಲು ಕೇಳಿದಾಗ ನಾನು ಬಾದಶಹನು ಕೊಡಲು ಹೇಳಿದ ವಿಷಯವನ್ನು ಅವಳಿಗೆ ಹೇಳಿದೆ. ಆಗ ಅವಳು ಹಣೆಗೆ ಕೈ ಹಚ್ಚಿಕೊಂಡು, ನಿಮ್ಮ ಧಣಿಗಳಿಗೆ, ಏನಾಗಿದೆಯಂತ ಹೀಗೆ ಮಾತನಾಡುತ್ತಾರೆ?

ಎಂದು ತಿರುಗಿ ಹೋದಳು. ಆ ವೇಳೆಯನ್ನು ಬದಲಿಸಿ ಮತ್ತೆ ನಾನು ವಿನಂತಿಸಿಕೊಂಡೆನು. ತಮ್ಮ ಆಜ್ಞೆಯಂತೆ, ತಮ್ಮ ರಾಣಿಯರಿಗೆ ಬಿಳಿ ವಸ್ತ್ರಗಳನ್ನು ಕಳಿಸಿದ್ದೆ. ಆದರೆ ತಮ್ಮ ರಾಣಿಯರು ಅದು ಅಶುಭ ಎಂದು ತಿಳಿದರು. ತಮ್ಮ ಆಜ್ಞೆಯಾದರೆ ಬಣ್ಣದ ವಸ್ತ್ರಗಳನ್ನು ಕಳಿಸುವೆನು ಎಂದೆನು. ಅದನ್ನು ಕೇಳಿದ ಬಾದಶಹನು ಮತ್ತೆ ಆಜ್ಞೆ ಮಾಡಿದನು. ನಾನು ಹೇಳಿದ ಹಾಗೆಯೇ ಇದೆ. ನಾನು ಹೊರಟೆ, ನಿನಗೆ ಯಾವುದು ಬೇಕೋ ಆ ಬಣ್ಣದ ವಸ್ತ್ರಗಳನ್ನು ಕೊಡು ಎಂದನು.

ಪುರಕೋಟೆಯಲ್ಲಿ ಎರಡು ಕಂದಕಗಳ ಮಧ್ಯ ಒಂದು ತೋಟವಿದೆ. ಅಲ್ಲಿ ಒಂದು ಮಸೀದಿಯನ್ನು ಕಟ್ಟಲಾಗಿದೆ. ಆ ಮಸೀದಿಯಲ್ಲಿ ಒಂದುಸಾವಿರದ ಮೂವತ್ಮೂರು ದೀಪಗಳ ಪಣತಿಗಳನ್ನು ಹಚ್ಚುತ್ತಾರೆ. ದೀಪಗಳ ಲೆಕ್ಕವೇ ಸಿಗುವುದಿಲ್ಲ. ಆದ್ದರಿಂದ ಆ ಮಸೀದಿಗೆ 'ನೇದೆ ಗಾಲಿಬ' ಎಂದು ಹೆಸರಿಟ್ಟಿದ್ದಾರೆ. ಆ ಮಸೀದಿಯ ಎದುರು ಗಾಲಿಬನು ನಿಂತಿದ್ದನು ಮತ್ತು ನನಗೆ ಹೇಳಿದನು. ನನ್ನ ಅಜ್ಜ ಇಸ್ಮಾಯಿಲ ಆದಿಲಶಹನು ತನ್ನ ಸ್ಮರಣೆಗಾಗಿ ತನ್ನ ತಲವಾರನ್ನು ಭಂಡಾರದಲ್ಲಿಟ್ಟಿದ್ದಾನೆ. ಅದನ್ನು ತೆಗೆದುಕೊಂಡು ಬಾ ಎಂದು ಆಜ್ಞೆ ಮಾಡಿದನು. ನಾವು ಅದನ್ನು ತಂದೆವು. ಆ ತಲವಾರನ್ನು ತೆಗೆದುಕೊಂಡು ಬಾದಶಹನು, ಕಟ್ಟಿನಿಂದ ಹೊರತೆಗೆದು ತುಸುಹೊತ್ತು ದಿಟ್ಟಿಸಿ ನೋಡಿದನು. ಇಂದು ಇದನ್ನ ನಮ್ಮ ಟೊಂಕಕ್ಕೆ ಕಟ್ಟಿಕೊಳ್ಳುವೆವು. ಮತ್ತೆ ಪುನಃ ಎಂದೂ ಕಟ್ಟಿಕೊಳ್ಳುವುದಿಲ್ಲ. ಅನಂತರ ಈ ತಲವಾರನ್ನು ಮಸಜಿದ ಗಾಲಿಬದ ಮೆಹರಾಬಿನ ಮೇಲೆ ಕಟ್ಟಿ ಇಡರಿ ಎಂದು ಹೇಳಿದನು. ರಫಿಯುದ್ದೀನ ಶಿರಾಜಿ ಹೇಳುವಂತೆ ಈಗಲೂ ಆ ತಲವಾರವು ಮಸಜಿದಗಾಲಿಬದ ಮೆಹರಾಬಿನಲ್ಲಿ ಇದೆಯಂತೆ.

ಕೆಲವು ದಿನಗಳ ಅನಂತರ ಒಂದು ರಾತ್ರಿ ಅಫಜಲ್ ಖಾನನ ಜೊತೆಗೆ ಕುಳಿತಿದ್ದನು. ಅಫಜಲಖಾನನಿಗೆ ಆಜ್ಞೆ ಮಾಡುತ್ತ ನಾಲ್ಕು ಸಾವಿರ ಹೊನ್ನುಗಳನ್ನು ಮೌಲಾನಾ ಲುತಫಿ ಖಾನಸಾಕರಿಗೆ ಕೊಡಲು ಹೇಳಿದನು. ಮತ್ತು ಅವನಿಗೆ ಅದನ್ನು ಶಿರಾಜ ನಗರಕ್ಕೆ ತೆಗೆದುಕೊಂಡು ಹೋಗಿ ಮೀರ ಸಯ್ಯದ ಅಹಮದ ಬಿನ್ ಇಮಾಮ ಮೂಸಾ ಕಾನಮ್ ರಜಿಯಲ್ಲಾಹ ಅನಹುಮಾ ಈತನ ಖಿನಾ ಇಮಾರತಿಯನ್ನು ಸರಿಯಾಗಿ ಕಟ್ಟಲು ಹಾಗು ಅಲ್ಲಿಯ ನೌಕರ ಜನರಿಗೆ ಖರ್ಚು ಮಾಡಲು ಹೇಳಬೇಕು ಎಂದು ಆಜ್ಞೆ ಮಾಡಿದನು. ಆಗ ನಾನು ಎದ್ದು ನಿಂತಿದ್ದೆನು. ಈ ಆಜ್ಞೆಯನ್ನು ಅಫಜಲಖಾನನಿಗೆ ಮಾಡಿದ್ದನು. ಅದಕ್ಕಾಗಿ ನನಗೆ ತುಂಬ ಆಶ್ಚರ್ಯವಾಯಿತು. ಯಾಕೆಂದರೆ ಈ ಆಜ್ಞೆಯನ್ನು ಬಾದಶಹನು ಕೋಶಾಧಿಕಾರಿಗೆ ಏಕೆ ಮಾಡಲಿಲ್ಲವೆಂದು, ಆದ್ದರಿಂದ ನನಗೆ ಹೀಗೆ ಅನಿಸಿತು. ಬಹುಶಃ ಭಂಡಾರದಲ್ಲಿ ದ್ರವ್ಯ ಉಳಿದಿರಲಿಕ್ಕಿಲ್ಲವೆಂದು ಬಾದಶಹ ತಿಳಿದಿರಬೇಕು. ಅದನ್ನು ತಿಳಿದು ಬಾದಶಹನು ನನಗೆ ಆಜ್ಞೆ ಮಾಡುತ್ತ ನೀನೇನೂ ಚಿಂತಿಸಬೇಡ. ನಾನು ಜೀವಂತ ಇರುವವರೆಗೆ ನಮ್ಮ ಭಂಡಾರದಲ್ಲಿಯ ದ್ರವ್ಯ ಸಾಕಾಗುತ್ತದೆ ಎಂದನು. ಹೀಗೆ ಮೂರು ನಾಲ್ಕು ತಿಂಗಳಿ

ಅಪಶಬ್ದಗಳನ್ನು ನುಡಿಯುತ್ತಿದ್ದನು. ನಾನು ಹೋಗುತ್ತೇನೆ. ನಾನು ಬೇಗ ಹೋಗುತ್ತೇನೆ ಎಂದೆಲ್ಲ ಹೇಳುತ್ತಿದ್ದನು. ಯಾವಾಗಲಾದರೂ ನಾನು ಎಲ್ಲಿಗೆ ಹೋಗುತ್ತೀರಿ ಎಂದು ಕೇಳಿದರೆ ನನ್ನ ಮನಸ್ಸನ್ನು ಸಮಾಧಾನಪಡಿಸಲು ಒಮ್ಮೊಮ್ಮೆ ಮಕ್ಕಾ-ಮದೀನಕ್ಕೆಂದು ಇನ್ನೊಮ್ಮೆ ಮದೀನಾ-ಮೀನೋರಾಕ್ಕೆಂದು ಹೇಳುತ್ತಿದ್ದನು. ಒಮ್ಮೆ ಹೀಗೆ ಹೇಳಿದನು. ನನಗೊಂದು ಗುರುತು ಸಿಕ್ಕಿತು. ತಿಂಗಳ ಹದಿನಾಲ್ಕನೆಯ ತಾರೀಖಿನಂದು ರಾತ್ರಿ ಯಾರೋ ಒಬ್ಬ ಕಣ್ಣು ಮುಚ್ಚಿದಾಗ ಬೆಳದಿಂಗಳಲ್ಲಿ ನಿಂತಿದ್ದ. ಕಣ್ಣು ತೆರೆದರೆ ಹಾರಿ ಹೋಗುತ್ತಿದ್ದ. ಒಂದು ವೇಳೆ ಆತನ ಆಯುಷ್ಯ ಇನ್ನೂ ಉಳಿದಿದ್ದರೆ ಆತನ ನೆರಳು ನಖಶಿಖಾಂತ ಪೂರ್ಣ ಕಾಣುತ್ತದೆ, ಆಯುಷ್ಯ ಮುಗಿದಿದ್ದರೆ ತಲೆಯ ಹೊರತು ಉಳಿದ ನೆರಳು ಕಾಣುತ್ತದೆ ಹೀಗಿದ್ದದ್ದನ್ನು ನಾನು ನೋಡಿರುವೆ. ಅಂತದ್ದನ್ನೇ ನಾನು ನನ್ನ ನೆರಳನ್ನು ತಲೆಯ ಹೊರತು ನೋಡಿದೆ. ಯಾವ ದಿನ ನಾನು ಗದ್ದುಗೆಯ ಮೇಲೆ ಕುಳಿತಿದ್ದೆನೋ ಅಂದು ಒಂದು ಕೋಟಿ ಐವತ್ತು ಲಕ್ಷ ಹೊನ್ನು ನಗದು, ಅದರಂತೆ ರಾಜಧಾನಿಯ ಸಾಮಾನುಗಳು ಸರಂಜಾಮುಗಳು, ಜವಾಹಿರಗಳು ವಸ್ತುಗಳು, ಪ್ರತಿಯೊಂದು ಕೆಲಸದ ಶಸ್ತ್ರಗಳು ಮತ್ತು ಭಾರೀ ಕಿಮ್ಮತ್ತಿನ ಪೋಷಾಕುಗಳು ಇತ್ಯಾದಿ ಅಗಣಿತವಾಗಿದ್ದವು. ಅಲ್ಲದೆ ವಿಜಯನಗರ, ಕಿಲನಾರ, ಕರ್ನಾಟಕ ಮತ್ತು ಮನೇವಾಡದ ಪ್ರದೇಶಗಳು, ಬಹಳಷ್ಟು ಉತ್ಪನ್ನ ಉಳ್ಳವುಗಳು. ಇಂಥ ದೊಡ್ಡ, ಶ್ರೇಷ್ಠ ಹಾಗು ಪ್ರಸಿದ್ಧವಾದ ಪ್ರದೇಶಗಳು ಆದಿಲಶಾಹಿ ರಾಜ್ಯಕ್ಕೆ ಸೇರಿದುವು. ಅದರಲ್ಲಿಯ ಭಾವವೆಂದರೆ ಮೊದಲೆ ದೊಡ್ಡ ಸಂಪತ್ತು ಅದಕ್ಕೆ ಮತ್ತೆ ಈ ಪ್ರದೇಶಗಳು ಸೇರಿದಾಗ ರಾಜ್ಯ ಇನ್ನಷ್ಟು ಬೆಳೆಯಿತು. ಆದ್ದರಿಂದ ಆದಿಲಶಹನ ಬಕ್ಷೀಸು ಕೊಡುವಲ್ಲಿ, ಧರ್ಮಕಾರಣ ಮಾಡುವಲ್ಲಿ ಎಷ್ಟೊಂದು ಬೆಳೆದಿತ್ತೆಂದರೆ, ಆದಿಲಶಹನು ಸತ್ತದಿನ ಅನೇಕ ದಿನಗಳಿಂದ ಇಲ್ಲಿ ಬಂದು ಇದ್ದ ಅಕಬರ ಬಾದಶಹನ ರಾಯಭಾರಿ ಐನುಲ್ ಮುಲ್ಕನಿಗೆ ನಿರೂಪ ಕೊಟ್ಟು ದಾರಿಖರ್ಚನ್ನು ಕೊಡಲು ಭಂಡಾರದಲ್ಲಿ ಹಣವಿರಲಿಲ್ಲ. ಆದ್ದರಿಂದಲೇ ಆದಿಲಶಹ ಸತ್ತದಿನ ಆತ ವಿಜಾಪುರದಲ್ಲೇ ಇರಬೇಕಾಯಿತು. ಕೊನೆಗೆ ನೀವು ಹೊರಟು ಹೋಗಿರಿ ಎಂದು ಹೇಳಿದಾಗ ಆತ ಹೊರಟು ಹೋದನು.

ಆದಿಲಶಹನ ಮರಣದ ದಿನವನ್ನು ಗ್ರಂಥಕಾರರು ಅಬಜದದ ಲೆಕ್ಕದಿಂದ. ಜುಲಮ ದೀದ, ಈ ಅಕ್ಷರಗಳಲ್ಲಿ ಹೇಳಿದರು. ಅಕ್ಷರಗಳ ಅರ್ಥ ಆದಿಲಶಹನ ಮೇಲೆ ಬಲವಂತ ಮಾಡಲಾಯಿತು ಎಂದಾಗುತ್ತದೆ. ಇವೇ ಅಕ್ಷರಗಳನ್ನು ಸದರೀ ಲೆಕ್ಕದಿಂದ ಬೇರೀಜು ಮಾಡಿದರೆ ಒಂಭೈನೂರ ಎಂಭತ್ತೆಂಟು ಎಂದಾಗುತ್ತದೆ.(ಕ್ರಿ.ಶ.೧೫೮೦). ಅಂದರೆ ಅಂದು ಅಲಿ ಆದಿಲಶಹನು ಮರಣ ಹೊಂದಿದನು ಎಂದಾಗುತ್ತದೆ. ಮುಲ್ಲಾ ಮಹಮ್ಮದ ರಜಾಜಹಿದೀ ಅಲೀಮುರ್ತೇಜಖಲೀಸ ಎಂದರೆ, ಮುಲ್ಲಾ ಮಹಮ್ಮದನು ಕವಿತೆಗಳನ್ನು ಬರೆಯುತ್ತಿದ್ದನು. ಆ ಕವಿತೆಗಳ ಕೊನೆಗೆ ತನ್ನ ಹೆಸರನ್ನು ಶಹೀದ ಎಂದು ಹೇಳಿಕೊಳ್ಳುತ್ತಿದ್ದನು. ಆತನು ಈ ಬಾದಶಹನ ಮೇಲೆ ಒಂದು 'ಮರಶಾ' ಬರೆದಿದ್ದಾನೆ. (ಕಥನಕಾವ್ಯ?). ಆ

ಕಥನ ಕಾವ್ಯದ ಕೊನೆಯ ಬೈತ(ದ್ವಿಪದಿ)ದ ಎರಡನೆಯ ಸಾಲಿನಲ್ಲಿ ಅಲಿ ಆದಿಲಶಹನ ಮರಣದ ದಿನವನ್ನು ಹೇಳಿದ್ದಾನೆ. ಅದರ ಅರ್ಥವನ್ನು ಹೀಗೆ ಹೇಳಲಾಗುತ್ತದೆ...

"ಅರೆ, ಅರೆ, ಯಮದೂತರು ತಮ್ಮ ಕೈಗಳಿಂದ ಯಾರನ್ನು ಮತ್ತು ನ್ಯಾಯಸ್ವರೂಪದ ತೋಟದಲ್ಲಿ, ಶೂರತ್ವದ ಮರವನ್ನು ಬೀಳಿಸಿದರು ಮತ್ತು ಬಹುಮುಖ್ಯ ಥಾಲನ್ನು ಮುರಿದರು ॥೧॥ ಬಾದಶಾಹೀತನದ ಆಕಾಶದಲ್ಲಿ ಈ ವಿಷಯ ಪ್ರಸಿದ್ಧವಾಗಿದೆ: ಏನೆಂದರೆ ದಾನ ಧರ್ಮಗಳ ಸೂರ್ಯನು ಅಸ್ತನಾದನು. ದಾತೃತ್ವದ ಚಂದ್ರನು ಆಚ್ಛಾದಿತನಾದನು ॥೨॥ ಆದಿಲಶಾಹ ಎಂಬ ಅದ್ಭುತ ಹೆಸರಿನ ಮತ್ತು ಅಲಿ ಎಂಬ ಹೆಸರಿನ, ಕಾಲಕಿರ್ದಿಯಲ್ಲಿ ಬಲವಂತವನ್ನು ಯಾರೂ ಕೇಳಲಿಲ್ಲ ॥೩॥ ನೀತಿವಂತ ನಡವಳಿಕೆಯಿಂದ ಸಂಕಟಪಟ್ಟು, ಯಾರೂ ಸಾಯಲಿಲ್ಲ. ಕಾಲಚಕ್ರ ಕುಂಬಾರನ ಕೈಯಲ್ಲಿ ಮೃತ್ಯು ಶರಾಬನ್ನು ಸೇವಿಸಿದರು ॥೪॥ ಬ್ರಹ್ಮದೇವನು ಆತನ ಚರಿತ್ರೆಯನ್ನು ಬರೆಯುವಾಗ ಪುಸ್ತಕದಲ್ಲಿ ಪೃಥ್ವಿಯ ಧಣಿ ತೀರಿದನು ಎಂದು ಬರೆದನು; ಇದರಲ್ಲಿಯ ಶಾಹೆಜಹಾನ ಶುದಶಹೀದ ಇಷ್ಟು ಪರ್ಶಿಯನ್ ಅಕ್ಷರಗಳ ಅರ್ಥ, ಅಬಜದದ ಲೆಕ್ಕದಿಂದ ಬೇರೀಜು ಮಾಡಿದರೆ ಒಂಬೈನೂರು ಎಂಭತ್ತೆಂಟು ಎಂದಾಗುತ್ತದೆ. ಆ ವರುಷ ಸತ್ತನು ॥೫॥ ಇಬ್ರಾಹಿಮ ಅಸದಖಾನನು ಬರೆದ ಚರಿತ್ರೆಯಲ್ಲಿ ಆದಿಲಶಹನು ಗದ್ದುಗೆಯನ್ನು ಏರಿದ ದಿನವನ್ನು ಹಿಜರಿ ಸನ್ ೯೬೫ (ಕ್ರಿ.ಶ. ೧೫೫೭-೫೮) ಎಂಬುದಾಗಿ, ಅದೇ ವರುಷ ಅಸದಖಾನ ಸತ್ತನು ಎಂದು ಹೇಳಿದೆ.

ಹೊಳಹು

# ಉಪಮೇಯ ಮತ್ತು ಉಪಮಾನ

● ಮಾಧವ ಪೆರಾಜೆ

'ಬೇಂದ್ರೆ ಮತ್ತು ಕನ್ನಡ ಭಾವಗೀತದ ಸ್ವರೂಪ' (ಡಾ. ಕೃಷ್ಣಕಟ್ಟಿ) ಕೃತಿಯಲ್ಲಿ ಜಾನಪದ ಗೀತೆಗಳ ವೈಶಿಷ್ಟ್ಯದ ಬಗೆಗೆ ಹೀಗೆ ಹೇಳಲಾಗಿದೆ.

ಜಾನಪದ ಕಾವ್ಯದ ಮಹತ್ತ್ವದ ವೈಶಿಷ್ಟ್ಯವೆಂದರೆ ವರ್ಣನೆಯ ವಿವರಗಳೇ ಅಲಂಕಾರಗಳಾಗುವುದು. ಸಾಮಾನ್ಯವಾಗಿ ಉಪಮಾಲಂಕಾರದಲ್ಲಿ ಉಪಮಾನ ಮತ್ತು ಉಪಮೇಯ ಹೀಗೆ ಕನಿಷ್ಟ ಪಕ್ಷ ಎರಡು ಭಾಗಗಳಾದರೂ ಇರುತ್ತವೆ. ಎರಡರಲ್ಲಿಯೂ ಭಿನ್ನತೆ ಇರುತ್ತದೆ. ಅಲಂಕಾರಿಕರ ಪ್ರಕಾರ ಉಪಮೆ ಎಂದರೆ ಭಿನ್ನ ವಸ್ತುಗಳಲ್ಲಿಯ ಸಾದೃಶ್ಯ. ಈ ಎರಡು ಭಿನ್ನ ವಸ್ತುಗಳಲ್ಲಿ ಒಂದು ಉಪಮೇಯ ಕಾವ್ಯದ ವಸ್ತುವಾಗಿದ್ದು, ಇನ್ನೊಂದು ಹೊರಗಿನದಾಗಿರುತ್ತದೆ. ಚಂದ್ರಮುಖಿ ಎಂಬ ರೂಪಕದಲ್ಲಿ ಮುಖಿ ಕಾವ್ಯನಾಯಕಿ ಆಗಿದ್ದರೆ 'ಚಂದ್ರ' ಉಪಮಾನವಾಗಿದ್ದು, ಹೊರಗಿನಿಂದ ಬಂದು ಕಾವ್ಯಕ್ಕೆ ಸೇರಿದವನಾಗಿರುತ್ತಾನೆ. ಆದರೆ ಜಾನಪದ ಕಾವ್ಯದಲ್ಲಿ ಸಾಮಾನ್ಯವಾಗಿ ವರ್ಣಿತ ವಸ್ತು ತನಗೆ ತಾನೇ ಅಲಂಕಾರವಾಗಿರುತ್ತದೆ:

ನೀರಾಗ ನಿಂತಿರುವ ನೀಲಿ ಪಾವಡದಣ್ಣ  
ನೀರ ಕೆಟ್ಟಾವೋ ಬದಿಗಾಗೋ  
ಬಾಲೆ ಕೆಟ್ಟಾಳೋ ನಿನಗಾಗಿ ॥

ಇಲ್ಲಿ ನೀಲಿ ಪಾವುಡ, ಕೆಟ್ಟು ಹೋಗುವ ಹಳ್ಳದ ನೀರು, ಇವೆಲ್ಲ ವರ್ಣನೆಯ ವಿವರಗಳಾಗಿ ಉಪಮಾನಗಳಾಗಿರುತ್ತವೆ.... (ಪೂರ್ವೋಕ್ತ ಪು. ೯ - ೧೦)

ವಾಸ್ತವವಾಗಿ ಆರಂಭದಿಂದಲೂ ಈ ಚರ್ಚೆಯನ್ನು ಬೆಳೆಸುತ್ತ ಬಂದವರು (ಅದೂ ಬೇಂದ್ರೆಯವರ ಕುರಿತೇ) ಡಾ.ಕೀರ್ತಿನಾಥ ಕುರ್ತಕೋಟಿಯವರು. ಅವರ 'ದ.ರಾ.ಬೇಂದ್ರೆ' (ಪು.೪೨ - ೪೩), 'ಬಾರೊ ಸಾಧನ ಕೇರಿಗೆ' (ಪು.೩೪-೩೩) ಮೊದಲಾದ ಕೃತಿಗಳಲ್ಲಿ ಈಗಾಗಲೇ ಕುರ್ತಕೋಟಿಯವರು ಅದನ್ನು ಪ್ರತಿಪಾದಿಸಿದ್ದಾರೆ.

ಪ್ರಸ್ತುತ ನಮಗೆ ಬೇಕಾದುದು ಉಪಮೇಯ ಮತ್ತು ಉಪಮಾನಗಳು ಮಾರ್ಗಕಾವ್ಯ ದಲ್ಲಿ ಹಾಗೂ ಜಾನಪದ ಕಾವ್ಯದಲ್ಲಿ ಅಭಿವ್ಯಕ್ತಿಗೊಳ್ಳುವ ಬಗೆಗಿನ ವೈಶಿಷ್ಟ್ಯಗಳಷ್ಟೇ. ಅವರಲ್ಲಿಯೂ ಜಾನಪದ ಕಾವ್ಯದಲ್ಲಿ ಉಪಮೇಯವು (ವರ್ಣಿತ ವಸ್ತು) ತನಗೆ ತಾನೇ ಅಲಂಕಾರ (ಉಪಮಾನ)ಆಗುತ್ತದೆ ಎಂಬುದಕ್ಕೆ ಈಗ 'ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ' ಕಾವ್ಯದ ಈ ಕಂದವನ್ನು ಗಮನಿಸಬಹುದು.

ಕೊಡಗೂಸುತನದ ಭಯದಿಂ
ನಡುಗುವ ಕನ್ನಿಕೆಯ ಬೆಮರ ನೀರ್ಗಳ ಪೊನಲೊ॥
ಳ್ಪುಡಿಯಲೊಡಗೂಡೆ ಗಂಗೆಯ
ಮಡು ಕರೆಗಣ್ಮಿದುದು ನಾಣ ಪೆಂಪೇಂ ಪಿರಿದೋ ॥ (೧- ೮೨)

ಮೊದಲಿಗೆ ಇದರ ಸಂದರ್ಭವನ್ನು ಪ್ರಸ್ತಾಪಿಸೋಣ: ದೂರ್ವಾಸ ಕುಂತಿಯ ಶುಶ್ರೂಷೆ ಯಿಂದ ಸಂಪ್ರೀತನಾಗಿ ಆಕೆಗೆ ಮಂತ್ರಾಕ್ಷರಗಳನ್ನು ದಯಗೈಯ್ದ. ಈ ಮಹಾತಾಯಿ (ಆಗ ಇನ್ನೂ ಆಕೆ ಕನ್ನಿಕೆ ) ಅದನ್ನು ಪರೀಕ್ಷೆ ಮಾಡಲೆಂದು ಗಂಗಾನದಿಗೆ ಬಂದು, ಶಾಸ್ತ್ರೋಕ್ತ ಕರ್ಮಗಳನ್ನು ಆಚರಿಸಿ, ಉದಯಿಸಿ ಬರುತ್ತಿರುವ ಸೂರ್ಯನನ್ನೇ ಮಂತ್ರಾಕ್ಷರದ ದೆಸೆಯಿಂದ ಕರೆಸುತ್ತಾಳೆ. ಅಂತು ಭೂಮಿಗೆ ಆ ದಶಶತಕಿರಣ ಬರುತ್ತಾನೆ. ಆಗ ಕುಂತಿಯಲ್ಲಿ ಈ ಭಾವ ಉಂಟಾಗುತ್ತದೆ. ನಾಚಿಕೆಯು ಹೆಣ್ಣಿನ ಗುಣವಲ್ಲ - ಪುರುಷ ಸಂಸ್ಕೃತಿ ಹೇರಿದ್ದು ಎಂದು ಸ್ತ್ರೀವಾದಿಗಳು ಆಕ್ಷೇಪಿಸುವ ಈ ಸಂದರ್ಭದಲ್ಲಿ - ನಾಚಿಕೆ ಎಂಬುದು ಇನ್ನು ಮುಂದೆ, ಚಿತ್ರ ಇಲ್ಲವೇ ಕಾವ್ಯದಲ್ಲಿ ಮಾತ್ರ ಕಾಣಸಿಗುವ ಸಂದರ್ಭದಲ್ಲಿ ಬರಬಹುದಾದ ಕಾಲದಲ್ಲಿ - ಕುಂತಿಯ ನಾಚಿಕೆಯನ್ನು ಪಂಪನು ವರ್ಣಿಸಿರುವ ಪರಿ ಅಸಾಮಾನ್ಯವಾದುದು. ಬೆವತು ನೀರಾದ ಆ ಕನ್ನಿಕೆಯ ಬೆವರ(ನೀರುಗಳ) ಪ್ರವಾಹವು ತುಂಬಿ ಹರಿದು, ಗಂಗೆಯನ್ನು ಸೇರಲು ಆ ಗಂಗಾನದಿಯು ದಡ ತುಂಬಿ ಹರಿಯಿತಂತೆ. ಅಂದ ಮೇಲೆ 'ನಾಣ ಪೆಂಪೇ ಪಿರಿದೋ' ಎನ್ನದಿರಬಹುದೇ?

ಈಗ ಆಲಂಕಾರಿಕರ ಮತವಾಗಿ ಇದನ್ನು ಸೂತ್ರೀಕರಿಸುವ : ಇಲ್ಲಿ ಉಪಮೇಯವು ಕುಂತಿಯ ನಾಚಿಕೆ ಕನ್ನಿಕೆಯ ಬೆಮರ ನೀರ್ಗಳ ಪೊನಲ್ : ಉಪಮಾನವು ಗಂಗೆಯ ಮಡು ಎಂದಿಟ್ಟುಕೊಳ್ಳೋಣ. ಕಾವ್ಯ ಇವುಗಳ ನಡುವೆ ಸಾದೃಶ್ಯವನ್ನು ತರಬೇಕಾಗುತ್ತದೆ. ಆದರೆ ಆಶ್ಚರ್ಯಕರವಾಗಿ ಉಪಮೇಯವೇ ಉಪಮಾನವನ್ನು ಉದ್ದೀಪಿಸುವಂತೆ ತೋರುತ್ತದೆ.

ಈಗಾಗಲೇ ಕುರ್ತಕೋಟಿಯವರು ಪ್ರತಿಪಾದಿಸಿದುದು ಎಂದು ಹೇಳಿರುವುದರಲ್ಲಿ ಮುಖ್ಯವಾದುದು ಮಾರ್ಗ ಕಾವ್ಯದಲ್ಲಿ ಇಲ್ಲದ - ಆದರೆ ಜಾನಪದ ಕಾವ್ಯದಲ್ಲಿ ಮಾತ್ರ ಇರುವ - ಉಪಮಾನಕ್ಕೆ ಸಂಬಂಧಿಸಿದ ಚರ್ಚೆ. ಅವರ ಪ್ರಕಾರ ಮಾರ್ಗ ಕಾವ್ಯದಲ್ಲಿ ಉಪಮಾನವು ಕಾವ್ಯಕ್ಕೆ (ಉಪಮೇಯಕ್ಕೆ) ಹೊರಗಿನದಾಗಿರುತ್ತದೆ. ಆದರೆ ಜಾನಪದದಲ್ಲಿ ಎಂದು ಕುರ್ತಕೋಟಿಯವರು ಪ್ರತಿಪಾದಿಸುತ್ತಾ ಬಂದಿರುವ ಅಂಶವೆಂದರೆ ಉಪಮಾನಕ್ಕೆ

ಸಂಬಂಧಿಸುದುದು. ಉಪಮೇಯದ ಒಳಗಿನಿಂದಲೇ ಉಪಮಾನ ಸಿಡಿದೇಳುತ್ತದೆ. ಉದಾ: 'ಹೂಗಳ ಒಳಗೆ ಎಲೆಗಳ ಮೇಲೆ ಅಮೃತದಾ ಬಿಂದು' (ಕೀರ್ತಿನಾಥ ಕುರ್ತಕೋಟಿ, ದ.ರಾ.ಬೇಂದ್ರೆ, ಪುಟ- ೪೫) ಇದು ಹೌದಾದರೆ ಪಂಪನ ಈ ಪದ್ಯದಲ್ಲಿಯೂ ಉಪಮೇಯದ ಒಡಲಿನಿಂದಲೆ ಉಪಮಾನ ಸಿಡಿದೆದ್ದಿದೆ ಅಥವಾ ಇದನ್ನು ಈ ಟಿಪ್ಪಣಿಯ ಆರಂಭದಲ್ಲಿ ಹೇಳಿರುವಂತೆ ತನಗೆ ತಾನೇ ಉಪಮಾನವಾಗುತ್ತದೆ - ಎಂದೂ ಹೇಳಬಹುದಾಗಿದೆ. ಏಕೆಂದರೆ ಈ ಪದ್ಯವು ಪಂಪನ ಇತರ ಅಲಂಕಾರ ಪದ್ಯಗಳಂತೆ ಇಲ್ಲ.

ಅಂದರೆ ಇದು ಜಾನಪದ ಕಾವ್ಯದ ವಿಶಿಷ್ಟ ಲಕ್ಷಣವಲ್ಲ. ಮಾರ್ಗ ಕಾವ್ಯದಲ್ಲಿ ಇದು ಇದೆ ಎಂಬುದಕ್ಕೆ ಕೇವಲ ಒಂದು ಉದಾಹರಣೆಯಷ್ಟೆ. ಇಂತಹ ವಿಶೇಷ ಲಕ್ಷಣವೊಂದು ಇರುವುದೇ ಆದರೆ, ಅದು ಕನ್ನಡ ಕಾವ್ಯದ ವಿಶಿಷ್ಟ ಲಕ್ಷಣವೇ ಆಗಿದೆ ಎಂದೆನ್ನಬಹುದು.



## ಮೋಡಿ ಲಿಪಿ

● ಭಾಲಚಂದ್ರ ಜಯಶೆಟ್ಟಿ

ಮೋಡಿ ಪದಕ್ಕೆ ಶಬ್ದಕೋಶಗಳಲ್ಲಿ ಸುಮಾರು ೨೧ ಅರ್ಥಗಳನ್ನು ಕೊಟ್ಟಿದೆ. ಮೋಡಿ ಎಂದರೆ ಮಾಯೆ, ಮಾಟ, ಆಕರ್ಷಣೆ, ಸೆಳೆತ, ಯಕ್ಷಿಣಿ, ಇಂದ್ರಜಾಲ ಮುಂತಾದ ಅರ್ಥಗಳು ಕನ್ನಡದಲ್ಲಿ ಬಳಕೆಯಲ್ಲಿವೆ. ಇಲ್ಲಿನ ಚರ್ಚೆಯಿರುವುದು ಈ ಅರ್ಥಗಳದ್ದಲ್ಲ; ಕಳೆದ ಸುಮಾರು ೫೦೦ ವರ್ಷಗಳಿಂದ ಮರಾಠಿ ಭಾಷಾ ಪ್ರದೇಶದಲ್ಲಿ ಮತ್ತು ಮರಾಠರು ಆಳಿದ ಪ್ರದೇಶಗಳಲ್ಲಿ ವ್ಯಾಪಕವಾಗಿ ಬಳಕೆಯಲ್ಲಿದ್ದ ಮೋಡಿ ಎಂಬುದು ಒಂದು ಲಿಪಿ ಪ್ರಭೇದ. ೧೯೫೦ ವರೆಗೂ ಮಹಾರಾಷ್ಟ್ರದ ಶಾಲೆಗಳಲ್ಲಿ ಅಧಿಕೃತವಾಗಿ ಇದನ್ನು ಕಲಿಸಲಾಗುತ್ತಿತ್ತು. ಮುಂದೆ ಕೆಲವು ವರ್ಷಗಳ ಕಾಲ ಮಹಾರಾಷ್ಟ್ರದಲ್ಲಿ ಅಷ್ಟೇ ಅಲ್ಲ, ಕರ್ನಾಟಕದ ಉತ್ತರ ಜಿಲ್ಲೆಗಳಾದ ಬೀದರ ಹಾಗು ಗುಲಬರ್ಗಾಗಳಲ್ಲಿಯೂ ಕೂಡ ಖಾಸಗಿ ವಾಣಿಜ್ಯೋದ್ಯಮದ ಲೆಕ್ಕಪತ್ರಗಳನ್ನು ಮೋಡಿ ಲಿಪಿಯಲ್ಲಿಯೇ ಬರೆಯಲಾಗುತ್ತಿದ್ದವು. ೧೯೫೦ ರಲ್ಲಿ ಮಹಾರಾಷ್ಟ್ರ ಸರಕಾರವು ವಿಧಿವತ್ತಾದ ಆದೇಶವನ್ನು ಹೊರಡಿಸಿ ಶಾಲೆಗಳಲ್ಲಿ ಮೋಡಿ ಲಿಪಿಯ ಶಿಕ್ಷಣವನ್ನು ರದ್ದುಪಡಿಸಿತು. ಹೀಗಾಗಿ ಈ ಲಿಪಿಯು ಬಳಕೆಯಿಂದ ತಪ್ಪಿಹೋಯಿತು. ಇದಾಗಿ ಇನ್ನೂ ಅರ್ಧ ಶತಮಾನವೂ ಕೂಡ ಗತಿಸಿಲ್ಲ. ಆದರೆ ಹೊಸ ಪೀಳಿಗೆಯ ಕೆಲವು ವಿದ್ವಾಂಸರಲ್ಲಿ, ಅದೂ ಕೂಡ ಬೀದರ, ಗುಲಬರ್ಗಾ ಪ್ರದೇಶದಲ್ಲಿ

ಮೋಡಿ ಎಂಬುದು ಒಂದು ಭಾಷೆಯೋ ಅಥವಾ ಲಿಪಿಯೋ ಎಂಬ ಗೊಂದಲ ಉಂಟಾಗಿ ಮೋಡಿ ಎಂಬುದು ಭಾಷೆಯಲ್ಲ ಒಂದು ಲಿಪಿ ಮಾತ್ರವಾಗಿತ್ತು.

ದೇವಗಿರಿಯನ್ನು ೧೨೬೦ರಿಂದ ೧೩೦೯ರವರೆಗೆ ಯಾದವ ಮನೆತನದ ಇಬ್ಬರು ಸೋದರರು ಆಳಿದರು. ಮೊದಲು ಆರನೆಯ ಅರಸನಾದ ಮಹಾದೇವ ಯಾದವನೆಂಬುವವನು ಆಳಿದರೆ ಆತನ ನಂತರ ಏಳನೆಯವನಾದ ರಾಮದೇವನು ಆಳಿದನು. ಈ ಇಬ್ಬರೂ ಅರಸರ ಆಡಳಿತದ ಕಾಲದಲ್ಲಿ ಹೇಮಾಡಿ ಪಂತ ಎನ್ನುವವನು ಭಂಡಾರಿಯಾಗಿದ್ದನು. ಆತನ ಹುದ್ದೆಯ ಹೆಸರು 'ಶ್ರೀಕರಣಾಧಿಪ' ಎಂದು. ಈತನ ನಿಜವಾದ ಹೆಸರು ಹೇಮಾದ್ರಿ ಪಂಡಿತ. ಆದರೆ ಬಳಿಕೆಯಲ್ಲಿ ಹೇಮಾಡಿ ಪಂತ ಎಂದೇ ಪ್ರಸಿದ್ಧಿ ಪಡೆದಿದ್ದನು. ಈತನು ವತ್ಸ ಗೋತ್ರದವನಾಗಿದ್ದು ಮಾಧ್ಯಂದಿನ ಶಾಖೆಯ ಪಂಚಪ್ರವರೀ ಬ್ರಾಹ್ಮಣನಾಗಿದ್ದನು. ಈತನ ತಾತನ ಹೆಸರು ವಾಸುದೇವ ಮತ್ತು ತಂದೆಯ ಹೆಸರು ಕಾಮದೇವ ಎಂದು. ಮೋಡಿ ಲಿಪಿ ಹಾಗು ಹೇಮಾಡಪಂತಿ ಶಿಲ್ಪ ಇವು ಎರಡು ಆತನು ಮಹಾರಾಷ್ಟ್ರಕ್ಕೆ ನೀಡಿದ ಅಪರೂಪದ ಕೊಡುಗೆಗಳಾಗಿವೆ. ಈತನು ಸಂಸ್ಕೃತದಲ್ಲಿ ಚತುರ್ವರ್ಗ ಚಿಂತಾಮಣಿ, ಕಾಲನಿರ್ಣಯ, ತಿಥಿನಿರ್ಣಯ, ಕೈವಲ್ಯದೀಪಿಕಾ, ಆಯುರ್ವೇದ ರಸಾಯಣ, ಪರ್ಜನ್ಯ ಪ್ರಯೋಗ, ಹೇಮಾದ್ರಿ ನಿರ್ಬಂಧ ಮುಂತಾದ ಅನೇಕ ಗ್ರಂಥಗಳನ್ನು ರಚಿಸಿರುವುದಾಗಿ ತಿಳಿದು ಬರುತ್ತದೆ. ಚತುರ್ವರ್ಗ ಚಿಂತಾಮಣಿಯು ಅತಿ ಬೃಹತ್ ಗಾತ್ರದ ಕೃತಿಯಾಗಿದ್ದು, ೬೦೦೦ ಪುಟಗಳುಳ್ಳ ೬ ಸಂಪುಟಗಳಲ್ಲಿದೆ ಎಂದು ಹೇಳುತ್ತಾರೆ. ಈವರೆಗೆ ಹೇಮಾಡಿ ಪಂತನು ಬರೆದ ಯಾವುದೇ ಮರಾಠಿ ಗ್ರಂಥ ಲಭ್ಯವಾಗಿಲ್ಲ.

ಹೇಮಾಡಿ ಪಂತನು ದೇವನಾಗರಿ ಲಿಪಿಯಲ್ಲಿ ಬರೆಯಲಾಗುತ್ತಿದ್ದ ಮರಾಠಿ ಪತ್ರವ್ಯವಹಾರಕ್ಕೆ ಮತ್ತು ಲೆಕ್ಕಪತ್ರಗಳಿಗೆ ಅನುಕೂಲವಾಗಲೆಂದು ಈ ಮೋಡಿಲಿಪಿಯನ್ನು ಬಳಕೆಗೆ ತಂದನು. ದೇವನಾಗರಿ ಲಿಪಿಯಲ್ಲಿ ಒಂದೊಂದು ಅಕ್ಷರಕ್ಕೂ ಲೆಕ್ಕಣಿಕೆಯನ್ನು ಎತ್ತಿ ಇಟ್ಟು ಮುಂದಿನ ಅಕ್ಷರ ಬರೆಯಬೇಕಾಗುತ್ತದೆ. ಈ ತೊಂದರೆಯ ನಿವಾರಣೆಗಾಗಿ, ಒಮ್ಮೆ ಕಾಗದದ ಮೇಲೆ ಲೆಕ್ಕಣಿಕೆಯನ್ನು ಊರಿದರೆ ಸಾಕು, ಸಾಲು ಮುಗಿಯುವವರೆಗೆ ಅಕ್ಷರಗಳನ್ನು ಜೋಡಿಸುತ್ತ ಬರೆದುಕೊಂಡು ಹೋಗಬಹುದಾದಂಥ ಲಿಪಿಯನ್ನು ಈತನು ಕಂಡು ಹಿಡಿದನು. ಮರಾಠಿಯಲ್ಲಿ ಮೋಡ ಅಥವಾ ಮೋಡಣೆ ಎಂಬ ಪದವಿದೆ. ಅದರ ಅರ್ಥ ತಿರುವು ಹಾಗು ಹೊರಳಿಸು ಎಂದು. ಮೋಡಿ ಎಂಬುದು ಈ ಮೋಡ ಅಥವಾ ಮೋಡಣೆ ಪದದಿಂದ ನಿಷ್ಪನ್ನವಾಗಿದೆ. ದೇವನಾಗರಿ ಲಿಪಿಯನ್ನೇ ತಿರುವು ಕೊಟ್ಟು, ಹೊರಳಿಸಿ ಒಂದು ಹೊಸ ರೂಪು ಕೊಟ್ಟಿರುವುದರಿಂದ ಇದಕ್ಕೆ ಮೋಡಿ ಎಂಬ ಹೆಸರಾಯಿತು

ಹೇಮಾಡಿ ಪಂತನು ಈ ಲಿಪಿಯನ್ನು ಶ್ರೀಲಂಕಾದ ಸಿಂಹಳ ಲಿಪಿಯಿಂದ ಆಮದು ಮಾಡಿಕೊಂಡನು ಎಂಬ ಒಂದು ದಂತಕಥೆ ಇದೆ. ಆದರೆ ಸಿಂಹಳ ಲಿಪಿಗೂ ಮೋಡಿ ಲಿಪಿಗೂ

ಯಾವುದೇ ಸಂಬಂಧವೂ ಇಲ್ಲ. ಈ ಲಿಪಿಗಳಲ್ಲಿ ಯಾವುದೇ ಸಾಮ್ಯಗಳೂ ಕಂಡುಬರುವುದಿಲ್ಲ. ಆದ್ದರಿಂದ ಈ ವಿಚಾರ ಬರೀ ಐತಿಹ್ಯ ಎಂದು ಭಾವಿಸಿ ಕೈಬಿಡಲಾಗಿದೆ. ಫಾರಸಿಯಲ್ಲಿ ಶೀಘ್ರವಾಗಿ ಬರೆಯುವುದಕ್ಕಾಗಿ ಶಿಕಸ್ತಾ ಎಂಬ ಲಿಪಿಯನ್ನು ಬಳಸಲಾಗುತ್ತಿತ್ತು. ಆ ಶಿಕಸ್ತಾ ಲಿಪಿಯೇ ಹೇಮಾಡಿಪಂತನಿಗೆ ಮೋಡಿಲಿಪಿಯನ್ನು ಕಂಡುಹಿಡಿಯಲು ಪ್ರೇರಕವಾಯಿತು ಎಂದೂ ಹೇಳಲಾಗುತ್ತದೆ. ಪ್ರಸಿದ್ಧ ಚರಿತ್ರೆಕಾರರೂ ವಿದ್ವಾಂಸರೂ ಆದ ಶ್ರೀ ವಿ. ಕಾ. ರಾಜವಾಡೆಯವರು ಮೋಡಿ ಲಿಪಿಯ ಕುರಿತು ಹೀಗೆ ಅಭಿಪ್ರಾಯ ಪಟ್ಟಿದ್ದಾರೆ; ಮೋಡಿ ಎಂಬ ಅರ್ಥದ ವಾಚಕ ಪದವು ಸಂಸ್ಕೃತದಲ್ಲಾಗಲೀ ಮಹಾರಾಷ್ಟ್ರೀಯಲ್ಲಾಗಲೀ ಇಲ್ಲ. ಮೋಡಿ ಪದವು ಫಾರಸಿ ಶಿಕಸ್ತಾ ಎಂಬ ಪದದ ತದ್ರೂಪ ಮರಾಠಿ ಭಾಷಾಂತರವಾಗಿದೆ. ಶ್ರೀ ರಾಜವಾಡಿಯವರ ಈ ವಿಚಾರವು ಎಷ್ಟರ ಮಟ್ಟಿಗೆ ಗ್ರಾಹ್ಯವಾಗಿದೆ ಎಂಬುದು ಹೇಳುವುದು ಕಷ್ಟ.

೧೩ನೆಯ ಶತಮಾನದ ಉತ್ತರಾರ್ಧದಿಂದ ೨೦ನೆಯ ಶತಮಾನದ ಪೂರ್ವಾರ್ಧದವರೆಗೆ ಮೋಡಿ ಲಿಪಿಯು ಬಳಕೆಯಲ್ಲಿತ್ತು. ಪೇಶ್ವೆಯರ ಕಾಲದಲ್ಲಿ ಆಡಳಿತದ ಎಲ್ಲ ಕಡತಗಳೂ ಮೋಡಿಯಲ್ಲೇ ಇರುತ್ತಿದ್ದವು. ಪೇಶ್ವೆಯರ ನಂತರ ಕಾಲಕಾಲಕ್ಕೆ ಈ ಲಿಪಿಯಲ್ಲಿ ಅನೇಕ ಬಗೆಯ ಮಾರ್ಪಾಡುಗಳಾದವು. ಅಂಥ ಮಾರ್ಪಾಡುಗಳಲ್ಲಿ ಪ್ರಮುಖವಾದವುಗಳೆಂದರೆ ಚಿಟಣಿಶೀ, ಮಹಾದಾಜೀಪಂತ, ಬಿವಲಕರೀ, ರಾನಡೀ ಮುಂತಾದವುಗಳು. ಈ ಎಲ್ಲ ಹಂತಗಳನ್ನು ದಾಟಿ ದುಂಡು ದುಂಡಾದ ಅದರ ಕೊನೆಯ ಮಾದರಿಯ ಬರವಣಿಗೆಗಳು ಈಗ ನಮಗೆ ಸಿಗುತ್ತವೆ.

ಮರಾಠಾ ರಾಜ್ಯದ ವಿಸ್ತಾರದೊಂದಿಗೆ ಭಾರತದ ಇತರ ಭಾಗಗಳಲ್ಲಿಯೂ ಮೋಡಿ ಲಿಪಿಯ ಬಳಕೆ ಬೆಳೆಯುತ್ತ ಬಂತು. ಪೇಶ್ವೆ ಮನೆತನದ ಸವಾಯಿ ಮಾಧವರಾಯನ ಕಾಲದಲ್ಲಿ ಇಡೀ ಭಾರತದಲ್ಲಿ, ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಇದು ಪ್ರಸಾರಗೊಂಡಿತ್ತು. ಮದ್ರಾಸ ಮತ್ತು ಮೈಸೂರು ಸಂಸ್ಥಾನಗಳಲ್ಲಿ ಕಳೆದ ಶತಮಾನದಲ್ಲಿ ಸರಕಾರಿ ಆಡಳಿತದ ಪತ್ರವ್ಯವಹಾರವು ಇದೇ ಮೋಡಿ ಲಿಪಿಯಲ್ಲಿ ಇದ್ದುದು ತಿಳಿದು ಬರುತ್ತದೆ. ಕರ್ನಾಟಕದ ಅನೇಕ ಉತ್ತರ ಗಡಿ ಪ್ರದೇಶಗಳಲ್ಲಿ ಹಳೆಯ ಕಾಲದ ಸೆಟ್ಟಿ ಸಾಹುಕಾರರ ಮನೆತನಗಳ ಲೆಕ್ಕ ಪತ್ರಗಳೆಲ್ಲ ಕನ್ನಡ ಭಾಷೆಯಲ್ಲಿದ್ದು ಲಿಪಿ ಮಾತ್ರ ಮೋಡಿಯಾಗಿದ್ದುದು ಕಂಡುಬರುತ್ತದೆ. ಇಂಗ್ಲಿಶರ ಆಡಳಿತದ ಕಾಲದಲ್ಲಿಯೂ ಕೂಡ ಇಂಗ್ಲಿಶ್ ಅಧಿಕಾರಿಗಳು ರುಜುಮಾಡಿರುವ ಮೋಡಿ ಲಿಪಿಯ ಪತ್ರಗಳು ಕಾಗದ ಪತ್ರಗಳ ಉಗ್ರಾಣಗಳಲ್ಲಿ ದೊರೆಯುತ್ತವೆ. ಈಸ್ಟ್ ಇಂಡಿಯಾ ಕಂಪನಿಯ ಮೊದಲಿನ ಸರಕಾರಿ ಆದೇಶ ಪತ್ರಗಳು ಮೋಡಿಯಲ್ಲೇ ಇದ್ದವು. ಕ್ರಿಶ್ಚಿಯನ್ ಧರ್ಮ ಪ್ರಚಾರಕರು ಮರಾಠಿಯಲ್ಲಿ ಬರೆದ ಮೊದಲಿನ ಪುಸ್ತಕಗಳು ಮೋಡಿ ಲಿಪಿಯಲ್ಲೇ ಇವೆ.

ರಾಜಸ್ಥಾನದ ಬಿಕಾನೇರ ಮುಂತಾದ ಪತ್ರಾಗಾರಗಳಲ್ಲಿ, ಚೆನ್ನೈನ ಕೊನೆಮಾರಾ ವಿಶ್ವವಿದ್ಯಾಲಯದ ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ ವಿಭಾಗದಲ್ಲಿ, ಗೋವೆ ಹಾಗೂ ಕೇರಳದ ಪತ್ರಾಗಾರಗಳಲ್ಲಿ ತಂಜಾವೂರಿನ ಸರಸ್ವತಿ ಮಹಲಿನಲ್ಲಿಯ ನೂರಾರು ಕಾಗದ ಪತ್ರಗಳು ಹಾಗೂ ಕೈಫಿಯತ್ತುಗಳು ಮೋಡಿ ಲಿಪಿಯಲ್ಲಿವೆ.

ಮಹಾರಾಷ್ಟ್ರದ ಧುಳೆ ಎಂಬಲ್ಲಿ ಇರುವ ಭಾರತ ಇತಿಹಾಸ ಸಂಶೋಧಕ ಮಂಡಳ ಎಂಬ ಸಂಸ್ಥೆಗೆ ಈವರೆಗೆ ಲಭ್ಯವಾಗಿರುವ ಅತಿ ಪ್ರಾಚೀನವೆಂದು ಹೇಳಬಹುದಾದಂಥ ಮೋಡಿ ಲಿಪಿಯ ಬರವಣಿಗೆಯು ೧೩೮೯ರದ್ದಾಗಿದೆ. ಅದಕ್ಕೂ ಹಿಂದಿನ ಬರವಣಿಗೆ ಈ ವರೆಗೂ ಲಭ್ಯವಾಗಿಲ್ಲ.

ಬರವಣಿಗೆಯ ಗತಿಯನ್ನು ತೀವ್ರಗೊಳಿಸುವುದಕ್ಕಾಗಿ ಈ ಮೋಡಿ ಲಿಪಿಯನ್ನು ಸಂಶೋಧಿಸಿ ಬಳಕೆಗೆ ತಂದುದೇನೋ ಸರಿ. ದೇವನಾಗರಿ ಲಿಪಿಯಲ್ಲಿಯ ಕೆಲವೊಂದು ಅಕ್ಷರಗಳಿಗೆ ಕಿವಿ ಬೆಳೆಸಿಯೋ ತಲೆಕಟ್ಟನ್ನು ಕೊಟ್ಟೋ ಮೋಡಿ ಲಿಪಿಯನ್ನು ರೂಢಿಸಲಾಯಿತು ಎಂಬ ಮಾತನ್ನು ಈಗಾಗಲೇ ಹೇಳಿಯಾಗಿದೆ. ಆದರೆ ಎಲ್ಲ ವರ್ಣಗಳಿಗೂ ಇಂಥ ತಿರುವು ಕೊಡಲು ಮೋಡಿಯಲ್ಲಿ ಸಾಧ್ಯವಾಗಿಲ್ಲ ಎಂಬ ಅಂಶವನ್ನು ಗಮನಿಸಬೇಕು.

ಅ, ಆ, ಇ, ಕ, ಖ, ಚ, ಛ, ಜ, ಝ, ಞ, ಟ, ಠ, ಢ, ದ, ಧ, ನ, ಪ, ಫ, ಬ, ಮ, ಯ, ರ, ಲ, ವ, ಸ ಮತ್ತು ಹ..., ಈ ೨೬ ಮೋಡಿ ಅಕ್ಷರಗಳಲ್ಲಿ ತ್ವರಿತವಾಗಿ ಮುಂದಿನ ಅಕ್ಷರದ ಕಡೆಗೆ ಹೋಗಲು ಅನುಕೂಲವಾಗುವಂತೆ ಕಿವಿಗಳೋ ಅಥವಾ ಶಿರೋರೇಖೆಯೋ ಕೆಳಗಿನಿಂದ ಮೇಲಕ್ಕೆ ಬೆಳೆಸಿಕೊಂಡು ಹೋದುದು ಕಂಡು ಬರುತ್ತದೆ. ಆದರೆ ಉ, ಗ, ಘ, ಙ, ಡ, ಢ, ಣ, ತ, ಥ, ಶ ಹಾಗೂ ಷ ಗಳಲ್ಲಿ ಈ ರೀತಿಯ ವ್ಯವಸ್ಥೆ ಇಲ್ಲ. ಇವು ಮೋಡಿ ಲಿಪಿಗೆ ಅಪವಾದಗಳಾಗಿವೆ.

ಮೋಡಿ ಲಿಪಿಯ ಇನ್ನೊಂದು ವೈಶಿಷ್ಟ್ಯವೆಂದರೆ ಎಲ್ಲ ಉಕಾರಗಳು ಹ್ರಸ್ವ ಸ್ವರವಾಗಿ ಮಾತ್ರ ಇರುತ್ತವೆ. ದೀರ್ಘವಾದ ಊಕಾರ ಸ್ವರದ ಲಿಪಿ ಚಿಹ್ನೆ ಇರುವುದಿಲ್ಲ. ಇದರಂತೆ ಇಕಾರವು ದೀರ್ಘವಾಗಿ ಮಾತ್ರ ಇರುತ್ತದೆ, ಹ್ರಸ್ವ ಇಕಾರದ ಲಿಪಿ ಚಿಹ್ನೆ ಇಲ್ಲ. ಕನ್ನಡದ ಹಾಗೆ ಹ್ರಸ್ವ ಎಕಾರ ಮತ್ತು ಹ್ರಸ್ವ ಒಕಾರಗಳು ದೇವನಾಗರಿ ಲಿಪಿಯಲ್ಲೂ ಇಲ್ಲ. ಹೀಗಾಗಿ ಮೋಡಿಯಲ್ಲಿಯೂ ಇಲ್ಲ. ಮೋಡಿ ಲಿಪಿಯಲ್ಲಿ ಹ್ರಸ್ವ ದೀರ್ಘಗಳ ಬಗ್ಗೆ ಒಂದು ಬಗೆಯ ಅನಾಸ್ಥೆ ಕಂಡು ಬರುತ್ತದೆ. ಒತ್ತಕ್ಷರಗಳನ್ನು ಬಳಸುವಾಗ ಅದು ಸಂಸ್ಕೃತದ ಮಾದರಿಯಲ್ಲಿ ಬಳಸಬೇಕು. ಅಪೇಕ್ಷಿತವಾದ ಒತ್ತಕ್ಷರದ ಅನುಕೂಲತೆ ಮೋಡಿಯಲ್ಲಿ ಇಲ್ಲ. ಹೀಗಾಗಿ ಬೆರಳಚ್ಚು ಯಂತ್ರ ತಯಾರಿಸುವುದಾಗಲೀ ಮುದ್ರಣದ ಮೊಳೆಗಳನ್ನು ತಯಾರಿಸಿ ಜೋಡಿಸುವುದಾಗಲೀ ಮೋಡಿಯಲ್ಲಿ ಸಾಧ್ಯವಿಲ್ಲ. ಕಲ್ಲಚ್ಚಿನ ಮುದ್ರಣ ಚೆನ್ನಾಗಿ ಬರುತ್ತದೆ.

ಮೋಡಿ ವರ್ಣಮಾಲೆ ಈ ಕೆಳಗಿನಂತಿದೆ.

ಅ ಆ ಇ ಈ ಉ ಊ ಏ ಐ ಓ ಔ ಅಂ ಅಃ

ಕ ಖ ಗ ಘ ಙ ಚ ಛ ಜ ಝ ಞ

ಟ ಠ ಡ ಢ ಣ ತ ಥ ದ ಧ ನ

ಪ ಫ ಬ ಭ ಮ ಯ ರ ಲ ವ ಶ ಷ ಸ

ಹ ಳ

ಕ ಕಾ ಕಿ ಕೀ ಕು ಕೂ ಕೇ ಕೈ ಕೋ ಕೌ ಕಂ ಕಃ

ಅಂಕಿಗಳು :

೧ ೨ ೩ ೪ ೫ ೬ ೭ ೮ ೯ ೧೦

ಮೇಲೆ ಕಾಣಿಸಲಾದ ವರ್ಣಮಾಲೆಯಲ್ಲಿ ಕೆಲವು ವರ್ಣಗಳು ಗುಜರಾತಿ ಲಿಪಿಗೆ ಸಾಮ್ಯತೆ ಹೊಂದಿರುವುದು ಈ ಲೇಖಕನಿಗೆ ಕಂಡು ಬಂದಿದೆ. ಗುಜರಾತಿ ಲಿಪಿಯಿಂದ ಮೋಡಿ ರೂಪುಗೊಂಡಿರಬಹುದು ಎಂದು ಹೇಳುವ ಧಾರ್ಷ್ಟ್ಯ ಈ ಲೇಖಕನಿಗೆ ಇಲ್ಲ. ಆದರೆ ಲಿಪಿ ತಜ್ಞರು ಈ ಕಡೆಗೆ ಗಮನ ಹರಿಸುವುದು ಸೂಕ್ತ ಎಂದು ನನಗನಿಸುತ್ತದೆ. ಗುಜರಾತಿ ಹಾಗು ಮೋಡಿಯ ಸಮಾನ ಲಿಪಿ ಚಿಹ್ನೆಗಳು ಈ ಮುಂದಿನಂತೆ ಇರುತ್ತವೆ. (ಮೊದಲು ಗುಜರಾತಿ ಲಿಪಿ ಕೊಟ್ಟು, ಮುಂದೆ ಆವರಣದಲ್ಲಿ ಅದಕ್ಕೆ ಸಮನಾದ ಮೋಡಿ ಲಿಪಿ ಕೊಡಲಾಗಿದೆ).

ઇ(𑘂), ઈ(𑘃), ઉ(𑘄), ઊ(𑘅), ખ(𑘏), ચ(𑘓), છ(𑘔), જ(𑘕), ન(𑘡).

# ಕನ್ನಡದ ನಾಳೆ: ಆತಂಕವೇಕೆ?

● ಬಿದರಹಳ್ಳಿ ನರಸಿಂಹಮೂರ್ತಿ

ಸುತ್ತಲಿನ ಎಲ್ಲ ಸೋದರ ಭಾಷೆಗಳ ಹಾಗೆ ಕನ್ನಡವೂ ಹಳೆಯ ಶತಮಾನದ ಹೊಸ್ತಿಲು ದಾಟಿ ಹೊಸ ಶತಮಾನಕ್ಕೆ ಕಾಲಿಡುತ್ತಿದೆ. ಕನ್ನಡದ ನಾಳೆಗಳು ಹೇಗೆ ರೂಪಗೊಳ್ಳುತ್ತವೆಯೋ ಎಂಬ ಬಗ್ಗೆ ಆತಂಕವೇನು ಬೇಡ. ಅದರ ಬಹುರೂಪಿ ಬೇರುಗಳು, ದಟ್ಟ ಅನುಭವದ ಗಟ್ಟಿ ಕಾಂಡ, ಹಳೆಯ ದಿಕ್ಕುಗಳಿಗಷ್ಟೆ ಅಲ್ಲದೆ, ಹೊಸ ಹೊಸ ದಿಕ್ಕುಗಳಿಗೂ ಚಾಚಿಕೊಳ್ಳುವ ಛಾತಿ-ಇವುಗಳಿಂದಾಗಿ ಕನ್ನಡ ನಿತ್ಯಹರಿದ್ವರ್ಣದ ಮಹಾಮರವಾಗಿ ಬೆಳೆಯುತ್ತಿದೆ. ಬಹುಶಃ ಬಂಗಾಳಿ ಸಂಸ್ಕೃತಿಯಂತೆ ಸರ್ವಾಂಗೀಣ ಬೆಳವಣಿಗೆಗೆ ಒಡ್ಡಿಕೊಂಡಿರುವ ಇನ್ನೊಂದು ಭಾರತೀಯ ಭಾಷಾಸಂಸ್ಕೃತಿ ಎಂದರೆ ಕನ್ನಡ ಸಂಸ್ಕೃತಿಯೆ. ಆದ್ದರಿಂದ 'ಕನ್ನಡ ಚಿರಾಯುವಾಗಲಿ' ಎನ್ನಲು ಅಡ್ಡಿಯಿಲ್ಲ.

ಆದರೂ ಈ ಸದ್ಯ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳು ಕೊಂಚ ರಕ್ತಹೀನವಾಗಿರುವುದನ್ನು ಮರೆಮಾಚುವಂತಿಲ್ಲ. ಈ ಶತಮಾನದ ಆದಿಯಲ್ಲಿದ್ದ ನಮ್ಮ ಸಾಮಾಜಿಕ ಕನಸುಗಳು ಕಮರಿಹೋಗಿವೆ; ನಮ್ಮ ಆರ್ಥಿಕ ಆದರ್ಶಗಳೆಲ್ಲ ಸೋರಿಹೋಗಿವೆ; ನಮ್ಮ ರಾಜಕೀಯ ನಿರೀಕ್ಷೆಗಳೆಲ್ಲ ತಲೆಕೆಳಗಾಗಿವೆ; ನಮ್ಮ ವೈಜ್ಞಾನಿಕ ವಿವೇಕ ದುರ್ಬಲವಾಗಿದೆ; ನಮ್ಮ ಕಲಾತ್ಮಕ, ಸಾಹಿತ್ಯಕ ಸೃಜನಶೀಲತೆ ಎರಡನೆ, ಮೂರನೆ ದರ್ಜೆಗೆ ಕುಸಿದಿದೆ; ನಮ್ಮ ಆಧ್ಯಾತ್ಮಿಕ ಸಿದ್ಧಿ ಸಾಧನೆಗಳು ದಿಕ್ಕು ತಪ್ಪುತ್ತಿವೆ. ಹೀಗಾಗಿ ನಮ್ಮ ಒಟ್ಟಾರೆ ಸಾಂಸ್ಕೃತಿಕ ವಾತಾವರಣ ಸೊರಗಿದೆ, ಸುಸ್ತಾಗಿದೆ.

ಆದರೆ ತಿದ್ದಿಕೊಳ್ಳಲು ತೀರ ತಡವಾಗಿಲ್ಲ ಎಂಬುದೆ ನಮಗಿರುವ ಆಸರೆ. ಅಲ್ಲದೆ ಎಲ್ಲ ರಂಗಗಳಲ್ಲು ಈಗಾಗಲೆ ಈ ತಿದ್ದುವಳಿ ಕಾಯಕ ಆರಂಭವಾಗಿರುವುದು ಒಂದು ಶುಭಶಕುನ. ಆದರೆ ಈ ತಿದ್ದುವಳಿ ಪ್ರಾಥಮಿಕ ಹಂತದಿಂದ ಪ್ರಾರಂಭವಾಗಬೇಕಾಗಿದೆ. ಬ್ರಿಟಿಷರು ನಮ್ಮ ದೇಶದಲ್ಲಿ ಇದ್ದ ಕಾಲಕ್ಕಿಂತ, ಅವರು ಬಿಟ್ಟುಹೋದ ಮೇಲೆಯೆ ಇಂಗ್ಲಿಶ್ ಬಗೆಗಿನ ನಮ್ಮ ಅಂಧಾಭಿಮಾನ ಹೆಚ್ಚಾಗಿದೆ. ಆದರೆ ಮಾತೃಭಾಷೆಯಲ್ಲಿ ಪ್ರಾಥಮಿಕ, ಪ್ರೌಢ ಶಿಕ್ಷಣ ಪಡೆದ ಮೇಧಾವಿಗಳಿಗೆ ಬರುವಷ್ಟು ಒಳ್ಳೆಯ ಇಂಗ್ಲಿಶ್ ಈ ಕಾನ್ವೆಂಟ್ ಹಾಗು ಇಂಗ್ಲಿಷ್ ಶಾಲೆಯ ಶಿಕ್ಷಕರಿಗೆ ಹಾಗು ಮಕ್ಕಳಿಗೆ ಬರುವುದಿಲ್ಲ ಎಂಬುದು ವಿಚಿತ್ರ ಆದರೂ ಸತ್ಯ. ಕನ್ನಡದ ಮೂಲಕ ಪ್ರಪಂಚ ಜ್ಞಾನವನ್ನು ಪಟ್ಟಾಗಿ ರೂಢಿಸಿಕೊಂಡ ವಿದ್ಯಾರ್ಥಿಗೆ ಅದನ್ನು ಇಂಗ್ಲಿಶಿಗೆ ತರ್ಜುಮೆ ಮಾಡಿಕೊಳ್ಳುವುದು ಪ್ರಯಾಸದ ಕೆಲಸವೇನಲ್ಲ. ಇಂಗ್ಲಿಶ್ ಕಲಿಕೆಯ ತರಹೇವಾರಿ ಸಾಧನಗಳೂ ಇವತ್ತು ಲಭ್ಯವಿದ್ದಾವೆ.

ಅಮೇರಿಕ ಇಂಗ್ಲೆಂಡುಗಳಲ್ಲಿ ನೆಲೆಸಿರುವ ಕನ್ನಡಿಗರು ಕನ್ನಡವನ್ನು ಮರೆತಿಲ್ಲ. ನಾ

ಕನ್ನಡಿಗರು ಚಂದ್ರಗ್ರಹ ಮಂಗಳಗ್ರಹ ಅಥವಾ ಶುಕ್ರಗ್ರಹಕ್ಕೆ ಕಾಲಿಟ್ಟರೂ ಕನ್ನಡವನ್ನು ಕೈಬಿಡುವುದಿಲ್ಲ. ಕೈ ಬಿಡಬೇಕಾಗಿಲ್ಲ. ಜ್ಞಾನ ವಿಶ್ವವನ್ನು ಅನಾಮತ್ತಾಗಿ ತಬ್ಬಿಕೊಳ್ಳುವ ಶಕ್ತಿ ಕನ್ನಡಕ್ಕೆ ಖಂಡಿತಾ ಇದೆ. ಆದ್ದರಿಂದ ಕನ್ನಡದ ನಾಳೆಗಳು ಸಾರ್ಥಕ ಶಿಖರಗಳಲ್ಲಿ ಕಂಗೊಳಿಸುತ್ತವೆ ಎಂಬ ಬಗ್ಗೆ ಸಂಶಯ ಬೇಡ. ಕನ್ನಡದ ಉದಾರವಾದವೆ ಕನ್ನಡದ ಆಗರ್ಭ ಶ್ರೀಮಂತಿಕೆಯೂ ಹೌದು ಎಂಬುದು ನಿಜವಾದ ಕನ್ನಡದ ಗುಟ್ಟು.



ಎಲೆಮರೆ

## ಬೆಟಗೇರಿ ಕೃಷ್ಣಶರ್ಮ

● ಶಾಂತಿನಾಥ ದಿಬ್ಬದ

ಗೋಕಾಕ ತಾಲೂಕಿನ (ಬೆಳಗಾವಿ ಜಿಲ್ಲೆ) ಬೆಟಗೇರಿ ಗ್ರಾಮದಲ್ಲಿ ಏಪ್ರಿಲ್ ೧೬, ೧೯೦೦ ರಂದು ಜನಿಸಿದ ಕೃಷ್ಣಶರ್ಮರು ನಿಜವಾದ ಅರ್ಥದಲ್ಲಿ "ಹಳ್ಳಿಯೂರ ಹಮ್ಮೀರ"ರು; ಗ್ರಾಮೀಣ ಬದುಕಿನ ರೀತಿ ನೀತಿಗಳು, ಹಬ್ಬ ಹರಿದಿನಗಳು, ನಂಬಿಕೆ ಆಚರಣೆಗಳನ್ನುಳ್ಳ ತಾದಾತ್ಮ್ಯದೊಂದಿಗೆ ಜಾನಪದ ಬದುಕನ್ನೇ ಬದುಕಿದವರು. ಕನ್ನಡ ನಾಡಿನ ಇತಿಹಾಸ-ಸಂಸ್ಕೃತಿಗಳೆಂದರೆ ಅವರಿಗೆ ಪಂಚಪ್ರಾಣ. ತಮ್ಮೊಳಗಿನ ಸೃಜನಶೀಲತೆ, ಚಿಂತನಶೀಲತೆಗಳ ಬೆಳಕಿನಲ್ಲಿ ಕನ್ನಡಿಗರ ಬದುಕನ್ನು ಕಂಡು ತಮ್ಮ ಕೃತಿಗಳಲ್ಲಿ ಕಂಡರಿಸಿದರು.

"ಆನಂದಕಂದ" ಎಂಬ ಕಾವ್ಯನಾಮದಿಂದ ಬರೆದ ಬೆಟಗೇರಿ ಕೃಷ್ಣಶರ್ಮ ಬಹುಮುಖಿ ಪ್ರತಿಭೆಯ ಲೇಖಕರು. ಕಾವ್ಯ, ಸಣ್ಣ ಕಥೆ, ಕಾದಂಬರಿ, ರೂಪಕ, ಪ್ರಬಂಧ ಮೊದಲಾದ ಪ್ರಕಾರಗಳಲ್ಲಿ ಅವರು ತಮ್ಮ ಹೆಜ್ಜೆ ಗುರುತುಗಳನ್ನು ಬಿಟ್ಟು ಹೋಗಿದ್ದಾರೆ. ೧೯೨೬ರಷ್ಟು ಹಿಂದೆಯೇ ಅವರ ಮೊದಲ ಕವನಸಂಕಲನ ಬಂದಿತು. 'ಮುದ್ದಿನ ಮಾತು', 'ಅರುಣೋದಯ', 'ವಿರಹಿಣಿ', 'ಒಡನಾಡಿ', 'ಕಾರಹುಣ್ಣಿಮೆ', 'ನಲ್ವಾಡುಗಳು', 'ಉತ್ಸಾಹಗಾಥಾ' ಇವು ಅವರ ಏಳು ಕವನಸಂಕಲನಗಳು. ಈ ಎಲ್ಲ ಸಂಕಲನಗಳು ಅವರ ಸುಂದರ ಮತ್ತು ಸುಭಗ ಕವಿತ್ವವನ್ನು ಪ್ರಕಟಪಡಿಸುತ್ತವೆ. ಭಾವತೀವ್ರತೆ, ಲಯಬದ್ಧತೆ ಹಾಗೂ ಸರಳವಾದ ಭಾಷೆ ಅವರ ಕವನಗಳ ವೈಶಿಷ್ಟ್ಯ. ಕಲಾವತಿ ಚಲನಚಿತ್ರಕ್ಕಾಗಿ ಸುಮನ್ ಕಲ್ಯಾಣಪುರ ಅವರು ಹಾಡಿದ 'ಒಡನಾಡಿ ಬೇಕೆಂದು ಮಿಡುಕಿಯೇ ಮಿಡುಕಿದೆನು ಕಡೆಗೆ ನೀ ಬಂದೆನ್ನ ಮಿಡುಕ ಕಳೆದೆ....' ಎಂಬ ಸುಪ್ರಸಿದ್ಧ ಭಾವಗೀತೆ ಬೆಟಗೇರಿಯವರದು.

ಜಾನಪದೀಯತೆ ಮತ್ತು ಗೇಯಗುಣ ಅವರ ಕವನಗಳ ಜೀವನಾಡಿ.

> ನಾ ಸಂತಿಗೆ ಹೋಗಿನ್ನಿ
> ಆಕಿ ತಂದಿದ್ದಳೋ ಬೆಣ್ಣಿ
> ಬುತ್ತಿ ತಗೊಂಡ ಹೋಗ್ಯಿಸಿ ಹೊಲಕ

ನಾ ಬರ್ತೀನಿ ಹೊತ್ತ ಮುಳುಗುದಕ
ಯಾತಕ್ಕವ್ವ ಹುಬ್ಬಳ್ಳಿ ಧಾರವಾಡ
ನಮ್ಮ ಹಳ್ಳಿ ಊರ ನಮಗ ಪಾಡ

ಮುಂತಾದ ಅನೇಕ ಪದ್ಯಗಳ ಮೂಲಕ ಬೆಟಗೇರಿಯವರು ಕನ್ನಡಿಗರಲ್ಲಿ ಅದರಲ್ಲೂ ಉತ್ತರ ಕರ್ನಾಟಕದವರಲ್ಲಿ ಜನಪ್ರಿಯರಾದರು. ಜಾನಪದ ಗಾಯಕರಾಗಿದ್ದ ಬಾಳಪ್ಪ ಹುಕ್ಕೇರಿಯವರು ತಮ್ಮ ಹಾಡುಗಾರಿಕೆಯ ಮೂಲಕ ಬೆಟಗೇರಿಯವರು ಹಳ್ಳಿಗರ ನಾಲಿಗೆಯ ಮೇಲೆ ಕುಣಿದಾಡಿದರು.

'ಬಡತನದ ಬಾಳು', 'ಸಂಸಾರಚಿತ್ರ', 'ನಮ್ಮ ಬದುಕು', 'ಮಾತನಾಡುವ ಕಲ್ಲು', 'ಜನಪದ ಜೀವನ', 'ಕಳ್ಳರ ಗುರು' ಮತ್ತು ಇತರ ಕಥೆಗಳು- ಇವು ಬೆಟಗೇರಿಯವರ ಕಥಾಸಂಗ್ರಹಗಳು.

'ಸುದರ್ಶನ', 'ಮಗಳ ಮದುವೆ', 'ರಾಜಯೋಗಿ', 'ಅಶಾಂತಿಪರ್ವ' ಮತ್ತು 'ಮಲ್ಲಿಕಾರ್ಜುನ' ಎಂಬುವು ಕೃಷ್ಣಶರ್ಮರ ಕಾದಂಬರಿಗಳು. ಇವುಗಳಲ್ಲಿ ಮೊದಲಿನ ಎರಡು ಸಾಮಾಜಿಕ, ಕಾದಂಬರಿಗಳಾದರೆ ಮಿಕ್ಕ ಮೂರು ಐತಿಹಾಸಿಕ. ಕನ್ನಡ ಕಾದಂಬರಿ ಪ್ರಕಾರವು ಇನ್ನೂ ಶೈಶವಾವಸ್ಥೆಯಲ್ಲಿರುವಾಗ (೧೯೩೩), ಕೃಷ್ಣಶರ್ಮರು ಕಾದಂಬರಿ ರಚನೆಗೆ ತೊಡಗಿದ್ದಾರೆ. 'ಮಗಳ ಮದುವೆ' ಎಂಬ ಕಾದಂಬರಿ (೧೯೫೧)ಗೆ ಆಗಿನ ಮುಂಬೈ ಸರಕಾರದ ೨೦೦೦ ರೂಪಾಯಿಗಳ ಬಹುಮಾನ ದೊರಕಿತ್ತು. ಕೃಷ್ಣಶರ್ಮರ ಸಾಮಾಜಿಕ ಕಾಳಜಿಗಳ ಸ್ವರೂಪವನ್ನೂ ಈ ಕಾದಂಬರಿ ವ್ಯಕ್ತ ಮಾಡುತ್ತದೆ.

ಬೆಟಗೇರಿಯವರನ್ನು ಕರ್ನಾಟಕದ ಪ್ರಮುಖ ಸಂಶೋಧಕರ ಮತ್ತು ವಿಮರ್ಶಕರ ಸಾಲಿಗೆ ಸೇರಿಸಿದ ೪ ಕೃತಿಗಳೆಂದರೆ ಅವರ 'ಕರ್ನಾಟಕ ಜನಜೀವನ', 'ಸಾಹಿತ್ಯವು ಸಾಗಿರುವ ದಾರಿ', 'ನಮ್ಮ ಸಂಸ್ಕೃತಿ ಪರಂಪರೆ' ಹಾಗು 'ಸಾಹಿತ್ಯ ವಿಹಾರ'. ೧೯೪೭ರಲ್ಲಿ ಪ್ರಕಟವಾದ 'ಕರ್ನಾಟಕ ಜನಜೀವನ'ದಲ್ಲಿ ಕನ್ನಡಿಗರ ಕೋಟೆಗಾಳಗ, ಕನಕದಾಸರು ಕಂಡ ವಿಜಯನಗರ, ಚಾರಣಕವಿ ಗೋವಿಂದವೈದ್ಯ ಎಂಬ ಮೂರು ಸಂಶೋಧನ ಪ್ರಬಂಧಗಳಿವೆ. ೧೯೪೭ರಲ್ಲಿ ಪ್ರಕಟವಾದ 'ಸಾಹಿತ್ಯವು ಸಾಗಿರುವು ದಾರಿ'ಯಲ್ಲಿ ನಮ್ಮ ಸಾಹಿತ್ಯ ಸಾಗಿರುವ ದಾರಿ, ಸಾಹಿತ್ಯ ವಿಮರ್ಶೆ, ಸಾಗರ ಮಂಥನ, ಪ್ರಣಯ ಸಾಹಿತ್ಯ ಕಾದಂಬರಿಗಳಲ್ಲಿ ಪಾತ್ರ ಪರಿಪೋಷಣೆ, ಕನ್ನಡ ಸಣ್ಣ ಕಥೆಗಳ ಕಥೆ- ಇವೇ ಮೊದಲಾದ ವಿಷಯಗಳ ಬಗ್ಗೆ ಚರ್ಚೆಯಿದೆ. ೧೯೬೧ರಲ್ಲಿ ಪ್ರಕಟವಾದ ನಮ್ಮ ಸಂಸ್ಕೃತಿ ಪರಂಪರೆ ಹದಿನೈದು ಪ್ರಬಂಧಗಳ ಸಂಕಲನ. ಕರ್ನಾಟಕದ ಕೃಷಿಕ ಸಮುದಾಯದ ಹಬ್ಬಗಳ ಬಗ್ಗೆ ಇಲ್ಲಿ ವಿಶ್ಲೇಷಣೆಯಿದೆ. ೧೯೮೧ರಲ್ಲಿ ಪ್ರಕಟವಾದ 'ಸಾಹಿತ್ಯ ವಿಹಾರ'ವು ಕರ್ನಾಟಕ ಸಂಸ್ಕೃತಿಗೆ ಸಂಬಂಧಿಸಿದ ಸಂಶೋಧನ ಲೇಖನಗಳ ಸಂಗ್ರಹವಾಗಿದೆ.

ಹೀಗೆ ಬೆಟಗೇರಿಯವರು ಚಿಂತನ, ಸೃಜನ, ಸಂಶೋಧನ, ವಿಮರ್ಶೆ ಮೊದಲಾದ

ಎಲ್ಲ ಕ್ಷೇತ್ರಗಳಲ್ಲಿ ಅಧ್ಯಯನ ಯೋಗ್ಯವಾದ ಕೃತಿಗಳನ್ನು ರಚಿಸಿದರು. ಇಷ್ಟಾದರೂ ಸಹಿತ ಬೆಟಗೇರಿಯವರ ಸಾಹಿತ್ಯಸಾಧನೆಯ ಬಗ್ಗೆ ವಿಮರ್ಶೆ ನಡೆದಿದ್ದು ಕಡಿಮೆ. 'ಬೆಳುವಲ' ಎಂಬ ಬೆಟಗೇರಿಯವರ ಅಭಿನಂದನ ಗ್ರಂಥದಲ್ಲಿ ಬೆಟಗೇರಿಯವರ ಸಾಹಿತ್ಯ ಸಾಧನೆಯ ವಿವಿಧ ಆಯಾಮಗಳ ಪರಿಚಯಾತ್ಮಕ ಬರಹಗಳಿವೆ. ಆನಂದಕಂದರ ಕಾದಂಬರಿಗಳ ಬಗ್ಗೆ ಮತ್ತು ಆನಂದಕಂದರ ಗದ್ಯಸಾಹಿತ್ಯದ ಬಗ್ಗೆ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್ ಮತ್ತು ಪಿಎಚ್.ಡಿ.ಯಂಥ ಪ್ರೌಢ ಅಧ್ಯಯನಗಳು ನಡೆದಿವೆ. ಡಾ. ಬಿ.ವ್ಹಿ. ಶಿರೂರ ಅವರು ಬೆಟಗೇರಿಯವರ ಅಪ್ರಕಟಿತ ಬಾನುಲಿ ರೂಪಕಗಳನ್ನು ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ಮೂಲಕ ಪ್ರಕಟಿಸಿದ್ದಾರೆ.

●

ಪರಿಚಯ

## 'ಕಥಾ': ಕರ್ನಾಟಕದ ಆರು ಪಾರಂಪರಿಕ ಪ್ರದರ್ಶನಗಳು

● ಪುರುಷೋತ್ತಮ ಬಿಳಿಮಲೆ

ಗಾಯತ್ರಿ ರಾಜಪುರ್ ಕಸ್ಸೆಬಾಂ ಅವರು ದಕ್ಷಿಣ ಕರ್ನಾಟಕದ ಆರು ಸಾಂಪ್ರದಾಯಿಕ ಪ್ರದರ್ಶನ ಕಲೆ ಮತ್ತು ಸಮುದಾಯಗಳ ಸಾಂಸ್ಕೃತಿಕ ಅನನ್ಯತೆಯ ಸಂರಕ್ಷಣೆಯ ಬಗೆಗೆ ತಮ್ಮ ಪಿಎಚ್.ಡಿ ಪದವಿಗಾಗಿ ನಡೆಸಿದ ಅಧ್ಯಯನದ ವರದಿಯು ಇದೀಗ ಮೈಕ್ರೋಫಿಲಂ ರೂಪದಲ್ಲಿ ಲಭ್ಯವಿದೆ. (ಯುಎಂಐಡಿ ಸರ್ಟೇಶನ್ ಸರ್ವೀಸಸ್, ಮಿಚಿಗನ್ )ಈ ಮಹಾಪ್ರಬಂಧವನ್ನು ೧೯೯೪ರಲ್ಲಿ ವಾಷಿಂಗ್ಟನ್ ವಿಶ್ವವಿದ್ಯಾಯಲಕ್ಕೆ ಸಲ್ಲಿಸಲಾಗಿತ್ತು. ಅದೇ ವಿಶ್ವವಿದ್ಯಾಲಯದ ಸ್ಕೂಲ್ ಆಫ್ ಮ್ಯೂಸಿಕ್ ವಿಭಾಗದಲ್ಲಿ ಪ್ರಾಧ್ಯಾಪಕರಾಗಿರುವ ಪ್ರೊ. ಡೇನಿಯಲ್ ಎಂ. ನ್ಯೂಮನ್ ಈ ಮಹಾಪ್ರಬಂಧದ ಮಾರ್ಗದರ್ಶಕರು. ನ್ಯೂಮನ್ ಅವರು ಭಾರತೀಯ ಸಂಗೀತ ಪರಂಪರೆಯ ಬಗೆಗೆ ಆಳವಾದ ತಿಳುವಳಿಕೆ ಹೊಂದಿರುವ ವಿದ್ವಾಂಸರು. ''ದಿ ಲೈಫ್ ಆಫ್ ಮ್ಯೂಸಿಕ್ ಇನ್ ನಾರ್ತ್ ಇಂಡಿಯಾ''(೧೯೮೦) ಅವರು ಬರೆದ ಉತ್ಕೃಷ್ಟ ಗ್ರಂಥ. ನ್ಯೂಮನ್ ಮಾರ್ಗದರ್ಶನದಲ್ಲಿ ಕರ್ನಾಟಕದ ಆರು ಕಥನ ಪರಂಪರೆಗಳ ಬಗೆಗೆ ಅಧ್ಯಯನ ನಡೆಸಿರುವ ಗಾಯತ್ರಿ ಅವರು, ತಮ್ಮ ಅಧ್ಯಯನದಲ್ಲಿ, ಕಥನಗಳನ್ನು ನಿರೂಪಿಸುವ ವಿಧಾನಗಳಿಗೆ ಮತ್ತು ಅಂಥ ನಿರೂಪಣಾ ವಿಧಾನಗಳ ಮೂಲಕ ಸಮುದಾಯಗಳು ತಮ್ಮ ಸಾಂಸ್ಕೃತಿಕ ಅನನ್ಯತೆಯನ್ನು ಕಾಯ್ದುಕೊಂಡು ಬರುತ್ತಿರುವ ಬಗೆಗೆ ಸೂಕ್ಷ್ಮವಾದ ನೋಟಗಳನ್ನು ನೀಡಿದ್ದಾರೆ.

ಗಾಯತ್ರಿ ಅವರು ಅಧ್ಯಯನಕ್ಕೆ ಆಯ್ದುಕೊಂಡ ಕಥನ ಪರಂಪರೆಗಳೆಂದರೆ-ಕಂಸಾಳೆ, ನೀಲಗಾರರ ಮೇಳ, ಚೌಡಿಕೆಮೇಳ, ಜೋಗೇರ ಮೇಳ, ಬುರ್ರಕಥೆ ಮತ್ತು ಗೊಂದಲಿಗರ ಮೇಳ.''ಸಂಗೀತ ವಾದ್ಯಗಳ ಬಳಕೆ, ಉಪಭಾಷೆಗಳ ಬಳಕೆ, ಕಥಾಪತ್ಯದ ಆಯ್ಕೆ, ಲಿಂಗಭೇದಗಳ ವಿಷಯಗಳಲ್ಲಿ ಈ ಆರೂ ಕಥನ ಪರಂಪರೆಗಳು ಭಿನ್ನತೆಯನ್ನು ತೋರಿಸುತ್ತವೆಯಾದರೂ, ತಮ್ಮ ಸಾಂಸ್ಕೃತಿಕ ಅನನ್ಯತೆಯನ್ನು ಕಾಯ್ದುಕೊಳ್ಳುವ ವಿಷಯದಲ್ಲಿ ಸಮಾನತೆಯನ್ನು ತೋರಿಸುತ್ತವೆಯಾದ್ದರಿಂದ, ಇವುಗಳನ್ನು ಅಧ್ಯಯನಕ್ಕೆ ಆಯ್ದುಕೊಂಡೆ'' ಎಂದು ಗಾಯತ್ರಿ ಅವರು ಹೇಳಿಕೊಂಡಿದ್ದಾರೆ. ಅವರ ಸಾರಲೇಖದ

ಮಾತುಗಳು ಇವು:

"ನನ್ನ ತೀರ್ಮಾನಗಳು ನಾನು ನಡೆಸಿದ ಕ್ಷೇತ್ರಕಾರ್ಯ, (೧೯೮೧-೧೯೮೩)ನನ್ನ ವೀಕ್ಷಣೆ, ನಾನು ಸಂಗ್ರಹಿಸಿದ ವಿವಿಧ ಪಠ್ಯಗಳು ಮತ್ತು ನಡೆಸಿದ ಸಂದರ್ಶನಗಳನ್ನು ಆಧರಿಸಿದೆ. ಈ ಅಧ್ಯಯನದಲ್ಲಿ ಕರ್ನಾಟಕದ ಕಥನ ಪರಂಪರೆಯನ್ನು ನಿರ್ವಚಿಸುವ ಮತ್ತು ವಿವರಿಸುವ ಪ್ರಯತ್ನವನ್ನು ಮಾಡಲಾಗಿದೆ. ಹಾಗೆಯೇ ಈ ಕಥಾ ಪರಂಪರೆಗಳ ಅನನ್ಯ ಲಕ್ಷಣಗಳನ್ನು ಕೂಡಾ ಪರೀಕ್ಷಿಸಲಾಗಿದೆ. ಹೀಗೆ ಮಾಡುವಾಗ ಕಥನ ಪರಂಪರೆಯೊಳಗೇ ಕಂಡು ಬರುವ ಭಿನ್ನತೆಗಳನ್ನು ಪ್ರಾದೇಶಿಕವಾಗಿ ಹೋಲಿಸಿ ನೋಡುವ ಕೆಲಸವನ್ನು ಮಾಡಿದ್ದೇನೆ. ಕನ್ನಡ ಭಾಷೆಯಲ್ಲಿ ದೊರಕುವ ಮಾಹಿತಿಗಳನ್ನು ತೆಲುಗಿನಲ್ಲಿ ದೊರೆಯುವ ಮಾಹಿತಿಗಳೊಡನೆ ತುಲನೆ ಮಾಡಿದ್ದೇನೆ. ಸಾಮಾಜಿಕ ಬದಲಾವಣೆ ತೀವ್ರವಾಗಿ ನಡೆಯುತ್ತಿರುವ ಈ ಕಾಲದಲ್ಲಿ, ಕಥೆಯನ್ನು ನಿರೂಪಿಸುವ ಪುಟ್ಟ ಸಮುದಾಯಗಳು ನಗರೀಕರಣ ಮತ್ತು ಸಂಸ್ಕೃತೀಕರಣಕ್ಕೆ ಪ್ರತಿಕ್ರಿಯಿಸುತ್ತ, ತಮ್ಮ ಸಂಗೀತದ ಮೂಲಕವೇ ತಮ್ಮ ಸಾಮುದಾಯಿಕತೆಯನ್ನು ಸಂರಕ್ಷಿಸಿಕೊಂಡು ಬರುತ್ತಿರುವುದನ್ನು ನಾನಿಲ್ಲಿ ವಿಶೇಷವಾಗಿ ಗಮನಿಸಿದ್ದೇನೆ".

೫೫೬ ಪುಟಗಳ ಈ ಮಹಾಪ್ರಬಂಧದಲ್ಲಿ ೯ ಅಧ್ಯಾಯಗಳಿವೆ. ಇದರಲ್ಲಿ ಮೊದಲನೆಯ ಅಧ್ಯಾಯವು ಪ್ರಸ್ತಾವನೆಗೆ ಮೀಸಲಾಗಿದೆ. ಇಲ್ಲಿ ಗಾಯತ್ರಿಯವರು ಪ್ರಾದೇಶಿಕ ಕಥನ ಪರಂಪರೆಯನ್ನು ನಿರ್ವಚಿಸುವುದರ ಜೊತೆಗೆ ಅದರ ಗುಣಲಕ್ಷಣಗಳನ್ನು ವಿವರಿಸಿದ್ದಾರೆ. ಈ ಹಂತದಲ್ಲಿ ಅವರು ಬ್ರೂನರ್ ಅವರ ವಿಚಾರಧಾರೆಗಳಿಂದ ವಿಶೇಷವಾಗಿ ಪ್ರಭಾವಿತರಾದಂತಿದೆ. "ಕಥನ ಪರಂಪರೆಗೆ ಮುಖ್ಯವಾಗಿ ಎರಡು ಆಯಾಮಗಳಿವೆ, ಒಂದು ಚಾರಿತ್ರಿಕವಾದದ್ದು, ಇನ್ನೊಂದು ವರ್ತಮಾನದ ಉತ್ಕಟತೆಯದು. ಚಾರಿತ್ರಿಕವಾಗಿ ಅದು ಒಂದು ಕಡೆಯಿಂದ ಘಟನೆಗಳನ್ನು ಕ್ರಮಕ್ರಮವಾಗಿ ತರ್ಕಬದ್ಧವಾಗಿ ಜೋಡಿಸುತ್ತದೆ. ಈ ಜೋಡಿಕೆಯು ಅದರ ವರ್ತಮಾನದ ಅವಶ್ಯಕತೆಗಳಿಗೆ ಅನುಗುಣವಾಗಿರುತ್ತದೆ. ಇವೆರಡೂ ಏಕಕಾಲಕ್ಕೆ ಸಂಭವಿಸುವುದೇ ಕಥನಗಳ ವೈಶಿಷ್ಟ್ಯ"(೧೯೮೬:೧೫೩) ಎಂಬ ಬ್ರೂನರ್ ಅವರ ಮಾತನ್ನು ಆಧರಿಸಿ ಗಾಯತ್ರಿ ಅವರು ಸಂಶೋಧನೆಯನ್ನು ಆರಂಭಿಸಿದ್ದಾರೆ. ಮುಂದೆ ಅವರು ಸ್ಟೀಫನ್ ಬ್ಲಮ್ (೧೯೯೧), ಜೋಸಿವೇಡ್ (೧೯೮೦), ರಾಮಾನುಜನ್ (೧೯೭೩), ಕರೋಲ್ ಬಾಬರೇಕಿ(೧೯೯೧), ಸುಧೀರ್ ಕಾಕರ್ (೧೯೯೦) ಮೊದಲಾದವರು ನಡೆಸಿದ ಪ್ರಾದೇಶಿಕ ಅಧ್ಯಯನಗಳಿಂದ, ಕರ್ನಾಟಕದ ಕಥಾ ಪರಂಪರೆಯನ್ನು ವಿಶ್ಲೇಷಿಸಲು ಬೇಕಾದ ಸೈದ್ಧಾಂತಿಕ ಚೌಕಟ್ಟನ್ನು ಪ್ರತೀತಗೊಳಿಸಿಕೊಂಡಿದ್ದಾರೆ. "ಕಥಾ ನಿರೂಪಣೆಗಳು ಆಯಾ ಸಮುದಾಯಗಳ ಆತ್ಮಕಥನಗಳಾಗಿವೆ" ಎಂಬ ನಿಲುವು ಇಲ್ಲಿ ಪೂರ್ವಗ್ರಹೀತವಾಗಿ ಕೆಲಸಮಾಡಿದೆ.

ಮಹಾಪ್ರಬಂಧದ ಎರಡನೇ ಅಧ್ಯಾಯದಲ್ಲಿ ಕಥಾಪರಂಪರೆಗಳ ಬಗೆಗೆ ಲಭ್ಯ ಇರುವ ಸಾಹಿತ್ಯವನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸಲಾಗಿದೆ. ಸಾಮಾನ್ಯವಾಗಿ ಇಂಗ್ಲಿಷ್‌ನಲ್ಲಿ

ಬರೆಯುವವರು, ದೇಶೀಭಾಷೆಗಳಿಂದ ಸಾಮಗ್ರಿಗಳನ್ನು ತೆಗೆದುಕೊಳ್ಳುತ್ತಾರೆ. ಆದರೆ ಅದನ್ನು ತಮ್ಮ ವರದಿಯಲ್ಲಿ ಉಲ್ಲೇಖಿಸುವುದಿಲ್ಲ. ಗಾಯತ್ರಿ ಅವರು ಹಾಗೆ ಮಾಡದೆ, ಕನ್ನಡದಲ್ಲಿ ಕಥಾಪರಂಪರೆಗಳ ಬಗೆಗೆ ನಡೆಸಲಾದ ಅಧ್ಯಯನಗಳನ್ನು ವಿಶೇಷವಾಗಿ ಸ್ಮರಿಸಿಕೊಂಡಿದ್ದಾರೆ. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಜಾನಪದ ಟ್ರಸ್ಟ್, ಉಡುಪಿಯ ಪ್ರಾದೇಶಿಕ ರಂಗಕಲೆಗಳ ಅಧ್ಯಯನ ಕೇಂದ್ರಗಳು ನಡೆಸಿದ ಕೆಲಸಗಳನ್ನು, ಜೀ.ಶಂ. ಪರಮಶಿವಯ್ಯ, ಅಂಬಳಿಕೆ ಹಿರಿಯಣ್ಣ ಮೊದಲಾದವರು ಸಂಗ್ರಹಿಸಿದ ಪಠ್ಯಗಳನ್ನು ಅವರು ಸಾಧಾರವಾಗಿ ಉಲ್ಲೇಖಿಸಿದ್ದಾರೆ. ಇದರ ಜೊತೆಗೆ ಬ್ಲಾಕ್ ಬರ್ನ್, ರಾಮಾನುಜನ್, ನಾರಾಯಣರಾವ್, ಸುಸಾನ್ ವಾಡ್ಲಿ, ಮೊದಲಾದವರು ಭಾರತೀಯ ಕಥನ ಪರಂಪರೆಯ ಬಗೆಗೆ ನಡೆಸಿದ ಅಧ್ಯಯನಗಳನ್ನು ಇಲ್ಲಿ ಸಮೀಕ್ಷಿಸಲಾಗಿದೆ. ಚಾರ್ಲ್ಸ್ ಕಾಪ್ ವೆಲ್ (೧೯೮೬) ಅವರು ಬಂಗಾಲದ ಬಾವುಲ್‌ಗಳ ಬಗೆಗೆ ಮತ್ತು ಎಡ್ವರ್ಡ್ ಹೆನ್ರಿ ಅವರು ಬಿಹಾರದ ಜೋಗಿಗಳ ಬಗೆಗೆ ನಡೆಸಿದ ಅಧ್ಯಯನ(೧೯೮೮)ಗಳನ್ನು ಇಲ್ಲಿ ತೌಲನಿಕ ವಿಶ್ಲೇಷಣೆಗೆ ಬಳಸಿಕೊಳ್ಳಲಾಗಿದೆ. ಹೀಗೆ ಮಾಡಿರುವುದರಿಂದಾಗಿ ಗಾಯತ್ರಿ ಅವರ ಅಧ್ಯಯನಕ್ಕೆ ತುಂಬ ವಿಶಾಲವಾದ ಒಂದು ನೆಲೆ ದೊರೆತಂತಾಗಿದೆ. ಕರ್ನಾಟಕದ ಕಥಾ ಪರಂಪರೆಯನ್ನು ಹೀಗೆ ವಿಶಾಲವಾದ ಚೌಕಟ್ಟಿನಲ್ಲಿರಿಸಿ ಮೌಲ್ಯಮಾಪನ ಮಾಡಿದ ಅಧ್ಯಯನಗಳು ನಮ್ಮಲ್ಲಿ ಬಹಳಷ್ಟಿಲ್ಲ.

೩ ರಿಂದ ೮ನೇ ಅಧ್ಯಾಯದವರೆಗೆ ಆರು ಕಥನ ಪರಂಪರೆಗಳ ಕುರಿತು ಆಳವಾದ ಅಧ್ಯಯನವಿದೆ. ಆಯಾ ಕಥನ ಪರಂಪರೆಯ ಸಾಮಾನ್ಯ ಲಕ್ಷಣ, ಅದರ ಪ್ರಸರಣ, ಅಲ್ಲಿ ಬಳಕೆಯಾಗುವ ವಿವಿಧ ವಾದ್ಯ, ಅದರ ಸಂಗೀತ, ನೃತ್ಯ, ಆಯಾ ಪರಂಪರೆಯ ವಾರಸುದಾರರು, ವಾರಸುದಾರರಿಗೆ ನೀಡಲಾಗುವ ದೀಕ್ಷಾವಿಧಿ, ಕಥಾಪಠ್ಯ ಮತ್ತು ಅವುಗಳ ವೈವಿಧ್ಯ, ಗುರುಪರಂಪರೆ, ಇವುಗಳ ಮೇಲಾಗುತ್ತಿರುವ ಆಧುನಿಕತೆಯ ಪ್ರಭಾವ, ಮೊದಲಾದುವುಗಳನ್ನು ಇಲ್ಲಿ ವಿವರವಾಗಿ ಪರಿಶೀಲಿಸಲಾಗಿದೆ. ಮುಖ್ಯ ಗಾಯಕನು ತನ್ನ ನಿರೂಪಣೆಯನ್ನು ಆರಂಭಿಸುವ ಕ್ರಮ, ಅದನ್ನು ಸಹಗಾಯಕರು ಮುಂದುವರಿಸುವ ವಿಧಾನ, ಈ ವಿಧಾನದಲ್ಲಿ ಪಠ್ಯವು ಪ್ರೇಕ್ಷಕರನ್ನು ತಲುಪುವ ಬಗೆ- ಇವುಗಳಿಗೆ ಇಲ್ಲಿ ಹೆಚ್ಚು ಒತ್ತು ನೀಡಲಾಗಿದೆ. ಈ ನಿಟ್ಟಿನಲ್ಲಿ ಈ ಆರೂ ಕಥನ ಪರಂಪರೆಗಳು ತೋರಿಸುವ ವೈವಿಧ್ಯಗಳ ಕುರಿತೂ ಇಲ್ಲಿ ಹೇರಳವಾದ ಮಾಹಿತಿಗಳಿವೆ. ಇವೆಲ್ಲವನ್ನು ಸಾರಾಂಶರೂಪದಲ್ಲಿ ಈ ಕೆಳಗಿನಂತೆ ಮಂಡಿಸಬಹುದು.

೧. ಮಕ್ಕಳ ಬಯಕೆ, ಫಲವಂತಿಕೆಯ ಸಂಕೇತವಾದ ಏಳು ಹೆಡೆಯ ಹಾವು, ಕೌಟುಂಬಿಕ ಹಿಂಸೆ, ಬಂಜೆಯ ಕುರಿತಾದ ಜುಗುಪ್ಸೆ, ದಾಂಪತ್ಯ ಸಮಸ್ಯೆ ಮತ್ತು ಸ್ಥಳೀಯ ದೈವಗಳ ಕಾಟ ಮತ್ತು ರಕ್ಷಣೆ-ಇವು ಎಲ್ಲ ಕಥನ ಪರಂಪರೆಗಳಲ್ಲಿ ಕಂಡು ಬರುವ ಸಮಾನ ಅಂಶಗಳಾಗಿವೆ.

೨. ವಾದ್ಯಗಳ ಬಳಕೆ, ಸಮುದಾಯನಿಷ್ಠ ಸಂಕೇತಗಳ ಬಳಕೆ, ಸಮುದಾಯಗಳ ಭಾಗವಹಿಸುವಿಕೆಯ ವಿಧಾನ, ದೀಕ್ಷೆ, ಉಪಭಾಷೆಗಳ ಬಳಕೆ, ಕಲಾವಿದರ ಭೌಗೋಳಿಕ ಪ್ರಸರಣ, ಕಥಾ ನಿರೂಪಕರ ಲಿಂಗ, ಪ್ರದರ್ಶನ ವಿಧಾನ ಮತ್ತು ದೈವಗಳು- ಈ ವಿಷಯಗಳಲ್ಲಿ ಎಲ್ಲ ಪರಂಪರೆಗಳು ವಿಶಿಷ್ಟವಾಗಿವೆ.

೩. ಕಥಾ ಪರಂಪರೆಗಳ ಉಗಮವು ಮೂಲತಃ ಪ್ರಾದೇಶಿಕವಾಗಿದ್ದರೂ, ಅವುಗಳು ಹಲವು ಬಾರಿ ದ್ರಾವಿಡ ಪದ್ಧತಿಗೂ, ಕೆಲವು ಬಾರಿ ಅಖಿಲ ಭಾರತ ಮಟ್ಟದ ಕಥಾಪದ್ಧತಿಗೂ ಹತ್ತಿರವಾಗಿವೆ.

೪. ಈ ಕಥನಗಳು ಭಾರತೀಯ ಲಿಖಿತ ಕಥಾ ಪರಂಪರೆ ಮತ್ತು ಮೌಖಿಕ ಕಥಾ ಪರಂಪರೆಗಳೆರಡರ ಲಕ್ಷಣಗಳನ್ನು ಒಳಗೊಂಡು ಸಂಕೀರ್ಣವಾಗಿವೆ. ಹೀಗಾಗಿ ಇವನ್ನು ಶಿಷ್ಟ ಅಥವಾ ಜನಪದ ಎಂದು ಸರಳೀಕರಿಸಿ ನೋಡಬಾರದು.

೫. ಕಥಾಪರಂಪರೆಗಳು ಆಯಾ ಸಮುದಾಯಗಳನ್ನು ನಿಶ್ಚಿತವಾಗಿ ಪ್ರತಿನಿಧಿಸುತ್ತವೆ. ದಕ್ಷಿಣ ಆಫ್ರಿಕಾದ ವೆಂಡಾ ಸಮುದಾಯದ ಕಥನ ಪರಂಪರೆಯೂ ಇದೇ ರೀತಿಯದು.

೬. ಈ ಕಥನ ಪರಂಪರೆಗಳ ಸಂಗೀತಕ್ಕೆ ದೈವಿಕ ಆಯಾಮ ಇರುವುದರಿಂದ ಅದು ಸಮುದಾಯಗಳ ಧಾರ್ಮಿಕತೆಯನ್ನು ನಿರಂತರವಾಗಿ ಸಂರಕ್ಷಿಕೊಂಡು ಬರುತ್ತದೆ.

೭. ಸಂಗೀತ, ಗೀತ, ವಾದ್ಯ, ನೃತ್ಯಗಳ ವಿಷಯದಲ್ಲಿ ಈ ಕಥನ ಪರಂಪರೆಗಳು ನಮ್ಮ ಅಭಿಜಾತ ಕೃತಿಗಳಲ್ಲಿ ನಿರೂಪಿಸಲಾದ ಸಂಗೀತಶಾಸ್ತ್ರದ ಗುಣಲಕ್ಷಣಗಳಿಗೆ ಅನುಗುಣವಾಗಿವೆ.

೮. ಕಥಾನಿರೂಪಣೆಗಳಲ್ಲಿ ಕಂಡುಬರುವ 'ಶುದ್ಧತೋಡಿ'ಯು ವಸ್ತುವಿನ ಪಾವಿತ್ರ್ಯ ರಕ್ಷಣೆಗೆ ಅನುಕೂಲಕರವಾಗಿದೆ.

೯. ಈ ಪರಂಪರೆಗಳಲ್ಲಿನ ದೈವಗಳು ವೇದೋತ್ತರ ಕಾಲದ ದೈವ ಸ್ವರೂಪವನ್ನು ಹೊಂದಿವೆ ಮತ್ತು ಮೂಲತಃ ಬ್ರಾಹ್ಮಣೇತರ ಪರಂಪರೆಯನ್ನು ಪ್ರತಿನಿಧಿಸುತ್ತವೆ. ಅವರೂ ಈಚೆಗೆ ಇವು ಹಿಂದೂ ದೇವರುಗಳ ಚೌಕಟ್ಟಿಗೆ ಸೇರಿಕೊಳ್ಳುವ ಹಾಗೆ ಬೆಳೆಯುತ್ತಿವೆ.

೧೦. ಕಥಾ ನಿರೂಪಣೆಗಳು ಅಂಶಿಕವಾಗಿ ಖಾಸಗಿ ಸ್ವರೂಪವನ್ನು, ಅಂಶಿಕವಾಗಿ ಸಾರ್ವಜನಿಕ ಸ್ವರೂಪವನ್ನು ಹೊಂದಿದ್ದು ಸಂಕೀರ್ಣವಾಗಿವೆ.

೧೧. ಈಚೆಗೆ ತೀವ್ರಗತಿಯಲ್ಲಿ ನಡೆಯುತ್ತಿರುವ ನಗರೀಕರಣಕ್ಕೆ ಪ್ರತಿಕ್ರಿಯಿಸುತ್ತಿರುವ ಸಮುದಾಯಗಳು ತಮ್ಮನ್ನು ಹೆಚ್ಚು ಹೆಚ್ಚು ಪ್ರಾದೇಶಿಕವಾಗಿರಿಸಿಕೊಳ್ಳುತ್ತವೆ ಮತ್ತು ಸಮುದಾಯಬದ್ಧಗೊಳಿಸಿಕೊಳ್ಳುತ್ತಿವೆ. ಇದು ನಗರೀಕರಣಕ್ಕೆ ಆಳವಾದ ಪ್ರತಿಭಟನೆಯಾಗಿದೆ.

ಹೀಗೆ ಗಾಯತ್ರಿ ಅವರ ಅಧ್ಯಯನವು ತುಂಬ ವ್ಯಾಪಕವಾದ ಚೌಕಟ್ಟನ್ನು ಹೊಂದಿದೆ. ಆದರೆ ಅದರ ಬಂಧ ಶಿಥಿಲವಾಗಿಲ್ಲ. ಕರ್ನಾಟಕದ ಕಥನ ಪರಂಪರೆಗಳನ್ನು ವಿಸ್ತಾರವಾಗಿ ಚರ್ಚಿಸಿದ ಪ್ರೊ. ಜೀ.ಶಂ. ಪರಮಶಿವಯ್ಯ, ಪ್ರೊ. ಬಿ.ಎ. ವಿವೇಕ ರೈ ಅವರ ಅಧ್ಯಯನಗಳ ಸಾಲಿನಲ್ಲಿ ಗಾಯತ್ರಿ ಅವರ ಈ ಮಹಾಪ್ರಬಂಧವು ಸೇರಿಕೊಳ್ಳುತ್ತದೆ.



ಮುಖಾಮುಖಿ

# ಮುದೇನೂರ ಸಂಗಣ್ಣ ಅವರೊಂದಿಗೆ

● ಸಂಪಾದಕ

*ಸಂ: ನೀವಿರೋದು ಚಿಗಟೇರಿಯಲ್ಲಿ. ನಿಮ್ಮ ಹೆಸರಲ್ಲಿರೋ ಮುದೇನೂರು ಎಲ್ಲಿದೆ?*

ಮು: ಮುದೇನೂರು.... ಮೂರ್ನಾಲ್ಕಿದಾವ. ರಾಯಚೂರು ಡಿಸ್ಟ್ರಿಕ್ಟ್‌ನಲ್ಲಿ ಒಂದಿದೆ. ಬಿಜಾಪೂರ ಡಿಸ್ಟ್ರಿಕ್ಟ್‌ನಲ್ಲಿ ಒಂದಿದೆಯಂತೆ. ಆಮೇಲೆ ರಾಣೆಬೆನ್ನೂರ ತಾಲ್ಲೂಕಿನಲ್ಲಿ ಒಂದು ಮುದೇನೂರಿದೆ. ಹಡಗಲಿ ತಾಲೂಕಿನಲ್ಲಿ ಒಂದದ. ನಮ್ಮದು ಯಾವುದು ಅನ್ನೊದು ಹೇಳೋದು ಕಷ್ಟ.

*ಸಂ: ಚಿಗಟೇರಿಗೆ ಯಾವಾಗ ಬಂದ್ರಿ?*

ಮು: ನಮ್ಮುತ್ತಾತ ಯಾವಾಗ್ಲೋ ಬಂದಿರ್ಬೇಕು.

*ಸಂ: ನಿಮ್ಮ ಕುಟುಂಬದ ಹಿನ್ನೆಲೆ ಹೇಳಿ ಸಾರ್.*

ಮು: ನಮ್ಮ ತಂದೆ ಮುದೇನೂರ ಕೊಟ್ರಬಸಪ್ಪ ಅಂತ. ಎಳೆವಯಸ್ಸಿನಲ್ಲಿ ತಂದಿ ಕಳಕೊಂಡವರು. ಮತ್ತ ನಮ್ಮ ಅಜ್ಜ ಎಲ್ಲಾ ಬಡ್ಡಿ ಖಾತೆ ವ್ಯವಹಾರ ಮಾಡ್ತಿದ್ರು. ಅವರೆಲ್ಲಾ ಬಡ್ಡಿ ಕೊಟ್ಟು ತಗೋಳ್ತಾ ಇದ್ದುದ್ದು, ಯಾವ್ದೂ ಪತ್ರಗಳ ಇಲ್ಲದ ಹಾಗೆ ಎಲ್ಲಾ ವಿಶ್ವಾಸದಿಂದ ನಡೀತಾ ಇತ್ತು. ಅವ್ರು ಸಾಗರದ ಕಡೆ ವ್ಯಾಪಾರ ಮಾಡ್ತಿದ್ರು ಬಂಡಿಯಲ್ಲಿ.

*ಸಂ: ಏನ್ ವ್ಯಾಪಾರ?*

ಮು: ಈ ಕಡೆಯಿಂದ ಏನೇನ ಒಯ್ತಿದ್ರೊ ಏನೋ, ಆ ಕಡೆಯಿಂದ ಮರದ ಮುಟ್ಟು, ಪೆಟ್ಟಿಗೆ, ಲತ್ತೂಡಿ, ಉದ್ದೊಮಣೆ ತರ್ತಿದ್ರು.

*ಸಂ: ಬಯಲಸೀಮೆ ರೈತರಿಗೆ ಬೇಕಾದ ವಸ್ತುಗಳು.*

ಮು: ಹ್ಞಾಂ. ಇಲ್ಲಿಗೆ ಬೇಕಾದದ್ದನ್ನೆಲ್ಲಾ ತರ್ತಿದ್ರು. ಒಳ್ಳೆ ಅಡಕೆ ತಗೊಂಡುಬಂದು ಮಾರ್ತಿದ್ರು. ಅವರು ಆಸ್ತಿ ಮಾಡ್ಲಿಕ್ಕೆ ಹೋದವರಲ್ಲಾ. ನಮ್ಮಜ್ಜ ಕೊಟ್ಟಂಥಾ ಕಾಲದಲ್ಲಿ ಅವ್ರು ತೀರಿದ ಮ್ಯಾಲೆ, ಸುಮಾರು ೨೦೦ ಎಕರೆ ಜಮೀನು ನಮ್ಮ,

ಸ್ವಾಧೀನಕ್ಕ ಬಂತು. 'ಹಣ ಕೊಡ್ರಿ' ಅಂದ್ರ 'ಈ ಜಮೀನ ತಗೊಂಡು ಮುಟ್ಸಿಕೊಳ್ರಿ' ಅಂತ ಬಂದದ್ದು. ಇನ್ನ ಸಾವಿರಗಟ್ಲೆ ಎಕರೆ ಮಾಡಬಹುದಾಗಿತ್ತು. ಭೂದಾಹ ಇದ್ದಿಲ್ಲ ಅವರಿಗೆ. ಎಳೆವಯಸ್ಸಿನಲ್ಲಿ ಅವರು ರಾಜಕಾರಣದಲ್ಲಿ ಬಿದ್ದಿದ್ರು. ಬೆಳಗಾಂವಿಯಲ್ಲಿ -೧೯೨೪ ಇರಬೇಕೇನೋ ಅದು- ಆದಂಥ ಅಖಿಲಭಾರತ ಕಾಂಗ್ರೆಸ್ ಸಮ್ಮೇಳನದಲ್ಲಿ ಅವರು ಪಾಲ್ಗೊಂಡಂಥವರು. ಕೊನೆವರೆಗೂ ರಾಜಕೀಯದಲ್ಲಿ ಸಕ್ರಿಯವಾಗಿ ಇದ್ರು, ಕಾಂಗ್ರೆಸ್‌ನಲ್ಲೇ ಇದ್ರು. ಆಮೇಲೆ ಬಿಟ್ಟು ಅವರು ತಮ್ಮಷ್ಟಕ್ಕ ತಾವಿದ್ರು.

*ಸಂ: ಸಾಹಿತ್ಯ ಕ್ಷೇತ್ರಕ್ಕೆ ಬರೋಕೆ ನಿಮಗೆ ಏನು ಪ್ರೇರಣೆ?*

ಮು: ನಾನು ಚಿಕ್ಕವಯಸ್ಸಿನಲ್ಲಿ ಊರಿನಲ್ಲಿ ಚೆಂಡು ಆಡೋದು, ಚಿಣಿ ಆಡೋದು ಇದ್ರೆ, ಸಾವ್ಕಾರ್ ಮಗ ಅಂತ ಪಾರ್ಟಿ ಕಟ್ಸಿ ಯಾವುದೋ ಒಂದು ಪಕ್ಷಕ್ಕ ಸೇರಿಸ್ತಿರ್ಲಿಲ್ಲ. ಕೆಲವರು ಯಾವಾಗಲೂ ಆಡೋದೇ, ಸೋಲು ಪ್ರಶ್ನೆ ಇಲ್ಲೇ ಇಲ್ಲ. ಹುಳಿಸೊಪ್ಪು ಅಂತಾರ ಅದಕೆ. ಯಾವುದಕ್ಕ ಹಾಕಿದ್ರೂ ಹೊಂದಾಣಿಕೆ ಆಗ್ತದಂತೆ. ಹಂಗ ನಾನು ಬೆಳೆದವ. ಈ ಕಾರಣದಿಂದ ನನಗ ಕ್ರೀಡಾ ಮನೋಭಾವ ಇದ್ದಿಲ್ಲ. ಹರಪನಹಳ್ಳಿ ಹೈಸ್ಕೂಲ್‌ಗೆ ಹೋದಮ್ಯಾಲೆ ನಾನು ಯಾವುದೂ ಸ್ಪೋರ್ಟ್ಸ್‌ಗೆ ಸೇರಲಿಲ್ಲ. ನನಗೊಂದ್ ನಮೂನಿ ಕೀಳರಿಮೆ ಅನಿಸ್ತು. ಶಾಲಾ ವಾರ್ಷಿಕೋತ್ಸವ ಇಟ್ಕೊಂಡ್ರು. ನಾನು ಭಾಷಣ ಸ್ಪರ್ಧೆಯಲ್ಲಿ ಪಾಲ್ಗೊಳ್ಳೋಣ ಅಂತ ಹೆಡ್ ಮಾಸ್ತರ್ ಹತ್ರ ಹೆಸರು ಕೊಡ್ಲಿಕ್ಕೋದ್ರೆ "ನೀನೇನ್ ಭಾಷ್ಣ ಮಾಡ್ತಿಯೋ? ನಾಳಿ ಬಂದು ಕರ್ನಾಟಕ ಏಕೀಕರಣದ ಬಗ್ಗೆ ಒಂದೈದ್ ನಿಮ್ ಷ ಮಾತಾಡು ಅಂದ್ರು". ಇದು ೪೫ನೇ ಇಸ್ವಿ ಸಮಾಚಾರ. ನನಗೆ ಪ್ರಥಮ ಬಹುಮಾನ ಬಂತು. ಅಲ್ಲಿ ಆವೇಶ ಬಂತು ನನಗ. ಆವಾಗ್ಲೆ ಒಂದ ಪದ್ಯ ಬರೆದೆ, ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಮೇಲೆ. ಇನ್ನೂ ಆದಿ ಅಂತ್ಯದ ಪ್ರಾಸಗಳ ವ್ಯಾಮೋಹ ಇದ್ದಕಾಲ. ನಮ್ಮ ಗುರುಗಳು ಅದನ್ನ ತಿದ್ದಪಡಿ ಮಾಡಿಕೊಟ್ಟರು, ಅವರಾ ಮುದ್ರಣ ಮಾಡಿ ತರ್ಸಿದ್ರು. ಆಮ್ಯಾಲೆ ಓದಿ ಅದನ್ನ ಅಳವಡಿಸಿ ಸಣ್ಣ ಹುಡಿಗೇರಿಂದ ಹಾಡ್ಸಿದ್ರು. ಹಿಂಗಾಗಿ ಅದೊಂದು ನಮೂನಿ ಪ್ರೇರಣೆ ಬಂತು ನನಗ.

*ಸಂ: ಜನಪದ ಸಾಹಿತ್ಯ ಸಂಗ್ರಹ ಯಾವಾಗ ಶುರು ಮಾಡಿದ್ರಿ?*

ಮು: ಜನಪದ ಸಾಹಿತ್ಯದ್ದು ಆಮ್ಯಾಲೆ. ನಮ್ಮ ಮನೆಯಲ್ಲಿ ಒಂಬತ್ತು ಸಂಬಳದ ಆಳುಗಳಿದ್ರು. ಅವರು ಬೀಸುವಾಗ, ಹಗ್ಗ ಹೊಸೆಯುವಾಗ, ಹೊಲದಲ್ಲಿ ಗೊಬ್ಬರ ಹೇರುವಾಗ ಹಾಡ್ತಿದ್ರು. ಹಾಡತಕ್ಕಂತದ್ದು, ಕಥೆ ಹೇಳತಕ್ಕಂತದ್ದು, ಜೀವನದ ಒಂದು ಭಾಗ ಆಗಿತ್ತು. ನನಗ ಅದರಲ್ಲಿ ವಿಶೇಷ ಏನ ಕಂಡಿದ್ದಿಲ್ಲ. ನನಗೆ ಈ ಜಾನಪದದಲ್ಲಿ ಆಸಕ್ತಿಮೂಡಿದ್ದು, ಅದರ ಮಹತಿ ಗೊತ್ತಾದದ್ದು ೪೭ರಲ್ಲಿ. ಆವಾಗ ನನಗ ದೊರೆತದ್ದು 'ಗರತಿಯ ಹಾಡು' ಮತ್ತು ಎಲ್ ಗುಂಡಪ್ಪ ಅವರ ಜಾನಪದ ಪುಸ್ತಕ

ಇರಬೇಕ ಕಾಣಸ್ತದ. ಹೆಚ್ಚಾಗಿ 'ಗರತಿಯ ಹಾಡು' ನನ್ನ ಮ್ಯಾಲೆ ಪ್ರಭಾವ ಬೀರ್ತು. 'ಅರೇ! ಇದು ಬಹಳ ಅಪರೂಪದ ಸಾಹಿತ್ಯ. ಇದು ಜೀವನಾನ ನಿರ್ವಚಿಸ್ತದೆ' ಹೀಗೆ ಅಂತ ಅಂದ್ಕೊಂಡು ಆ ಕಡೆ ಲಕ್ಷ್ಯ ಹೋತು.

*ಸಂ: ನಿಮ್ಮ ಮೊದಲನೇ ಸಂಗ್ರಹ..*

ಮು: 'ಹಕ್ಕಿಯ ಹಾಡುಗಳು' ಅಂತ ಏನೋ ಇರಬೇಕು ಅದರ ಹೆಸರು. ವಿರೂಪಾಕ್ಷಗೌಡ್ರು ಅನ್ನವರು ಒಬ್ರು ಸೇರ್ಸಿ, ಜಂಟಿ ಹೆಸರ್ಲಿಂದ ಪ್ರಕಟಣ ಆಯ್ತು.

*ಸಂ: ಸಾಹಿತಿಗಳಲ್ಲಿ ಯಾರ ಪ್ರೇರಣೆಯಿತ್ತು?*

ಮು: ಯಾರೂ ಇಲ್ಲ. ಆದ್ರ ಹರಪನಹಳ್ಳಿಯ ಪ್ರೌಢಶಾಲೆಯಲ್ಲಿ ಆಗ್ತಾ ಇದ್ದಂಥಾ ವಾರ್ಷಿಕೋತ್ಸವಗಳಿಗೆ ಬೇಂದ್ರೆ ಬಂದು ಹೋದ್ರು, ಬಿ.ಎಂ.ಶ್ರೀಕಂಠಯ್ಯ ಬಂದು ಹೋದ್ರು, ಪಿ. ಸೀತಾರಾಮಯ್ಯ ಬಂದು ಹೋದ್ರು, ಅ.ನ.ಕೃಷ್ಣರಾಯರು ಮತ್ತಿನ್ನ್ಯಾವುದಕ್ಕೋ ಬಂದು ಹೋದ್ರು. ಹಿಂಗಾಗಿ ಅದೊಂದ ನಮೂನಿ ಗುಂಗು ಹಿಡಿಸೋ ವಾತಾವರಣ ಆಯಿತು.

*ಸಂ: ಸ್ವಾತಂತ್ರ್ಯ ಬಂದಿತ್ತಾ ದೇಶಕ್ಕೆ?*

ಮು: ಇಲ್ಲ, ಇನ್ನೂ ಬ್ರಿಟಿಶ್ ಸರಕಾರ ಇತ್ತು. ಮಂಗಳೂರು ಅನಂತಮೂರ್ತಿ, ಸಾಹಿತ್ಯ ಭಂಡಾರ ಹುಬ್ಬಳ್ಳಿ, ಅವರು ಪುಸ್ತಕಗಳನ್ನು ಮಾರಲಿಕ್ಕೆ ಬರತಿದ್ದರು. ಅವ್ನೆಲ್ಲಾ ನೋಡಿದಾಗ ನನಗೆ ಖುಶಿಯೆನಿಸಿ ಅಷ್ಟು ಕೊಂಡೆ; ಹೀಗೆಲ್ಲಾ ಇದ್ದಾಗ, ಪದ್ಯ ಬರೀಲಿಕ್ಕೆ ಪ್ರಾರಂಭ ಮಾಡಿದೆ. ನಾನಿನ್ನಾ ಹೈಸ್ಕೂಲ ಸೆಕೆಂಡ್ ಇಯರ್. ನನ್ನ ಪದ್ಯಗಳು ಬಂದಿದ್ದು 'ಜಯಂತಿ'ಯಲ್ಲಿ ; ಅವಾಗ ಅದು ಪ್ರತಿಷ್ಠಿತ ಪತ್ರಿಕೆ. 'ಜೀವನ' ಕೂಡಾ ಅದೇ ಇನ್ನ ಹೊರಟಿತ್ತು. ಅದ್ರಲ್ಲಿ ಕಥೆಗಳು ಬರೀತಿದ್ದೆ, ಲೇಖನ ಬರೀತಿದ್ದೆ. ಅವರು ತಿದ್ತಾ, ಮಾರ್ಗದರ್ಶನ ಮಾಡ್ತಾ ಇದ್ರು.

*ಸಂ: ವಿಚಿತ್ರ ಅಂದ್ರೆ, ಬಳ್ಳಾರಿ ಜಿಲ್ಲೆಯಲ್ಲಿ ಇದ್ರು ಕೂಡಾ, ನಿಮ್ಮ ಸಂಪರ್ಕ ಹೆಚ್ಚು ಆದ್ದದ್ದು ದಕ್ಷಿಣ ಕನ್ನಡದಲ್ಲಿ. ಇದ್ಹೇಗೆ?*

ಮು: ದಕ್ಷಿಣ ಕನ್ನಡದ ಹುಡುಗ್ರು ನಮ್ ಜತೆಗೆ ಓದ್ತಿದ್ರು. ನಮ್ಮಂಗೆ ದಕ್ಷಿಣ ಕನ್ನಡ ಮದ್ರಾಸ್ ಸ್ಟೇಟ್‌ಗೆ ಸಂಬಂಧಿಸಿದ್ದು. ಆವಾಗ ಇದ್ದದ್ದು ಮಂಗಳೂರಿನಲ್ಲಿ ಒಂದೇ ಕಾಲೇಜು. ಏನ್ ಹೆಸರದು...? ಹೆಸರು ನೆನಪಿಲ್ಲ ನನಗೆ. ಹೆಚ್ಚಿಗೆ ಮಾರ್ಕ್ಸ್ ಬಂದವರಿಗೆ ಅಲ್ಲಿ ಸೀಟು ಸಿಗತಿದ್ದು. ಉಳಿದೋರೆಲ್ಲರೂ ಈ ಮದನಪಲ್ಲಿ, ಮದ್ರಾಸು, ಅನಂತಪುರಕ್ಕಾ ಬರತಿದ್ರು. ಮದನಪಲ್ಲೀದು ಥಿಯಾಸಾಫಿಕಲ್ ಕಾಲೇಜ್. ನಮ್ಮ ಗುರುಗಳು ಒಬ್ರು ಆನಂದರಾಯ ಅಂತ ಇದ್ರು. ಅವರ ರೆಕ್ಮೆಂಡೇಶನ್ ಮ್ಯಾಲೆ ನಾನು ಥಿಯಾಸಾಫಿಕಲ್ ಕಾಲೇಜ್ ಸೇರಿದೆ. ಅಲ್ಲಿ ಎಲ್ಲಾ

ದೈತ್ಯ ಪ್ರತಿಭೆಯವರೇ ಇದ್ರು. ಡಾ.ಗುರುಮೂರ್ತಿ ಅಂತ ಇದ್ರು, ಬಹಳ ಅದ್ಭುತವಾದ ವ್ಯಕ್ತಿ ಅವ್ರು. ಏನ್ ಇಂಗ್ಲೀಶ್ ಅವರದು? ಡಾ.ರಾಧಾಕೃಷ್ಣನ್ ಗೆ ಬಹಳ ಬೇಕಾದಂಥವ್ರು. ರಾಧಾಕೃಷ್ಣನ್ ಅವಾಗ ಬನಾರಸ್ ಯುನಿವರ್ಸಿಟಿಗೆ ವೈಸ್ ಚಾನ್ಸೆಲರ್ ಆಗಿದ್ರು. ಅವರಾ ಅಲ್ಲಿಂದ ಪತ್ರ ಬರದ್ರು 'ನೀ ಇಲ್ಲಿ ಬಂದು ಸೇರು' ಅಂತ. ಇಲ್ಲ 'ನಾನಿಲ್ಲೆ ಇರತೀನಿ' ಅಂತ ಹೇಳಿದ್ರು. ಹೋಗಲಿಲ್ಲ. ಬಹಳ ಸಾಮಾನ್ಯ, ಉದಾತ್ತ ಜೀವ್ನ ನಡ್ಸ್ತಾ ಇದ್ದಂಥ ಪ್ರಾಧ್ಯಾಪಕವರ್ಗ ಇತ್ತು, ಅಲ್ಲಿ.

ಸಂ: *ಬ್ರಿಟಿಶ್ ಕಾಲದಲ್ಲಿ ಬಾಲ್ಯ ಕಳೆದಿದ್ದೀರಿ. ಬ್ರಿಟಿಷರ ನೆನಪುಗಳನ್ನು ಹೇಳಿ..*

ಮು: ಅವರ ಆಡಳಿತದಲ್ಲಿ ಬಹಳ ಶಿಸ್ತು ಇತ್ತು. ಸರಕಾರ ಭ್ರಷ್ಟವಾಗಿರಲಿಲ್ಲ. ಅನ್ನಬೇಕು, ಎಲ್ಲಾ ದೃಷ್ಟಿಯಿಂದಲೂ ಅವರು ನಿಗಾ ಇಟ್ಟಿರತಿದ್ರು. ಅದೇನೋ 'ಕತ್ತಿ ಪರದೇಶಿ ಆದರೆ ನೋವೆ, ನಮ್ಮವರೇ ಹದ ಹಾಕಿ ತಿವಿದರೆ ಅದು ಹೂವೆ' ಅಂತ, ಕುವೆಂಪು ಹೇಳ್ತಾರಲ್ಲ, ತಿವಿಯಾದೆಲ್ಲ ಈಗಿನವರು. ಅವರು ವಸಾಹತುಶಾಹಿಗಳು. ಶೋಷಿಸತಿದ್ದರು ಹಾಗೆ ಹೀಗೆ ಅಂತ ಹೇಳತಾರೆ. ಏನ ಹೇಳಿದರೂ ಕೂಡಾ ಅವರ ಆಡಳಿತ ಸಡಿಲ ಇರಲಿಲ್ಲ. ಪ್ರಾಮಾಣಿಕತೆ ಹೆಚ್ಚಿತ್ತು ಅನಬೇಕು.

ಸಂ: *ರಾಜಕೀಯ ಚಳವಳಿಗಳನ್ನ ದಮನ ಮಾಡತಿರಲಿಲ್ಲವಾ?*

ಮು: ಮಾಡತಿದ್ದರು. ಅವರು ತಮ್ಮ ಸ್ವಾರ್ಥ ಇಟ್‌ಕೊಂಡೇ ಆಳತಾ ಇದ್ದಂಥವರು. ಅವಾಗ ಭಾಷಣ ಮಾಡಾಕ ದೊಡ್ಡಮೇಟಿ ಅಂದಾನಪ್ಪ, ಕಮಲಾದೇವಿ ಚಟ್ಟೋಪಾಧ್ಯಾಯ ಅಂಥವರೆಲ್ಲಾ ಬರತಿದ್ದರು ನಮ್ಮ ಕಡಿಗೆ. "ಈ ಇಂಗ್ಲೆಂಡಿನವರು ಬೆಳೆಯೋದೆಲ್ಲಾ ಏಳ ವಾರಕ್ಕಾಗುವಷ್ಟು ಆಹಾರ. ಎಲ್ಲಾ ನಮ್ಮದಾ ಲೂಟಿಮಾಡ ಕೊಂಡ ಹೋಗತಾರ. ಅಲ್ಲಿ ಎಲ್ಲಾ ಉತ್ಪತ್ತಿಯಾಗೋದು ನಮ್ಮ ದೇಶದ ಕಚ್ಚಾ ಸರಕಲಿಂದ" ಹೀಂಗೆಲ್ಲಾ ನಮಗ ಆವೇಶ ತುಂಬತಿದ್ದರು.

ಸಂ: *ಆವಾಗ ಬಳ್ಳಾರಿಯಲ್ಲಿ ಈ ಹೋರಾಟಗಳ ನಾಯಕರು ಯಾರು?*

ಮು: ಟೇಕೂರ ಸುಬ್ರಹ್ಮಣ್ಯಂ ಇದ್ರು. ಬೂದಿಹಾಳ್ ಅನಂತಾಚಾರ್ ಇದ್ರು. ಬೆಲ್ಲದ ಚೆನ್ನಪ್ಪ ಇದ್ರು. ಡಾ.ನಾಗನಗೌಡರಿದ್ರು ಇಲ್ಲಿ. ಅಲ್ಲಿ ನಮ್ಮ ಭಾಗಕ್ಕ ಹೊಸಪಾಲಪ್ಪ ಅಂತ ರಂರಾ. ದಿವಾಕರರ ಸಹಪಾಠಿಗಳು ಇದ್ರು.

ಸಂ: *ಕೊಟ್ಟೂರು ಬಹುಶ: ಆಗ ತುಂಬಾ ಆಕ್ಟೀವ್ ಆಗಿತ್ತು.*

ಮು: ಕೇಂದ್ರನೇ ಆಗಿತ್ತು. ಹರಪನಹಳ್ಳಿ ಏಕೀಕರಣ ಚಳುವಳಿಯಲ್ಲಿ ತೆಲುಗರನ್ನ ಹಿಮ್ಮೆಟಿಸಬೇಕು ಅಂದರ, ಹರಪನಹಳ್ಳಿ ಜನನಾ ಆಗಿದ್ದರು ಅವಾಗ.

ಸಂ: *ನಿಜಾಂ ಪ್ರಾಂತ್ಯ ಬಳ್ಳಾರಿ ಜಿಲ್ಲೆಗೆ ತಗುಲಿಕೊಂಡೇ ಇತ್ತು. ಅಲ್ಲಿನ ಚಳುವಳಿಗಳ ಸಂಪರ್ಕ ಇತ್ತಾ ನಿಮಗೆ?*

ಮು: ಇಲ್ಲ, ನಮಗ ತಾಕಲಿಲ್ಲ. ತುಂಗಭದ್ರಾ ನದಿ ಆಚೆ ಈಚೆ ಇರತಕ್ಕಂತಹ ಊರುಗಳಿದ್ದವಲ್ಲಾ, ಆ ಮಟ್ಟಿಗೆ ಅಷ್ಟೆ ಒಡನಾಟಿತ್ತು. ಬರೋದಕ ಹೋಗೋದಕ ಏನ ತೊಂದರೆ ಇದ್ದಿಲ್ಲ.

*ಸಂ: ಹಿಂದೂಸ್ತಾನಿ ಸಂಗೀತದಲ್ಲಿ ಆಸಕ್ತಿ ನಿಮಗೆ ಹೆಂಗ್ ಬಂತು?*

ಮು: ಹ್ಯಾಗೆ ಅಂದರ, ನಮ್ಮೂರಿನಲ್ಲಿ ಒಬ್ಬರು ಕೊಟ್ರಯ್ಯಸ್ವಾಮಿ ಅಂತ ಇದ್ರು. ಪಂಚಾಕ್ಷರಿ ಗವಾಯಿಗಳ ಹತ್ರ ಸಂಗೀತ ಕಲತವರು. ಅದಕೂ ಮೊದ್ಲ ಸಿನೇಮಾ ಹಾಡುಗಳು ಹಿಂದೂಸ್ತಾನಿ ಶೈಲಿಯಲ್ಲಿ ನಮಗೆ ಖುಷಿ ಕೊಡತಿದ್ವು.'ಜುಗ್ನು' 'ಮೇಲಾ'. 'ದಿವಾಳಿ' ಸಿನಿಮಾಗಳು ಪ್ರಭಾವ ಬೀರತಿದ್ವು. ಮತ್ತೆ ಸಿನೇಮಾ ಸಂಗೀತಕ್ಕ ರೇಡಿಯೋ ಸಿಲೋನ್, ರೇಡಿಯೋ ಗೋವಾ ಇದ್ದವು. ನಮ್ಮನೆಯಲ್ಲಿ ೩೩ನೇ ಇಸ್ವಿಯಲ್ಲಿ ಗ್ರಾಮಫೋನ್ ಇತ್ತು. ಅವಾಗ ಈ ಮರಾಠಿ ಹಾಡುಗಳು ಶಾಸ್ತ್ರೀಯ ಸಂಗೀತದವ್ರು, ನಮ್ಮ ಜಮಾನ್ರು ತಗೊಂಡ ಬಂದಿದ್ರು. ಎಳೇವಯಸಲಿಂದ ಸಂಗೀತದ ಕಡೀಗೆ ಒಲವು ಆಯಿತು.

*ಸಂ: ನೀವು ವೃತ್ತಿಯಲ್ಲಿ ವ್ಯಾಪಾರಿಗಳಾಗಿ ಇಷ್ಟೊಂದು ಸಾಂಸ್ಕೃತಿಕ ಆಸಕ್ತಿಗಳನ್ನು ಇಟ್ಕೊಂಡಿದ್ದೀರಿ. ಏನೂ ವೈರುಧ್ಯ ಇರ್ಲಿಲ್ವಾ?*

ಮು: ಖಂಡಿತಾ ಇರ್ಲಿಲ್ಲ. ಒಂದನೇ ಕಾರಣ ಅಂದ್ರ, ಅದು ಸುಗ್ಗಿಯ ವ್ಯವಹಾರ. ಇಡೀ ೧೨ ತಿಂಗಳ ನಡೀತಕ್ಕಂಥದ್ದಲ್ಲ.

*ಸಂ: ಏನ್ ವ್ಯಾಪಾರ ಅದು?*

ಮು: ತಂಬಾಕದ ವ್ಯಾಪಾರ. ನಮ್ಮಲ್ಲಿ ಬೀಡಿ ತಂಬಾಕ ವಿಶೇಷ ಬೆಳೀತಾರ. ಅದರ ವ್ಯಾಪಾರಕ್ಕ ಮಹಾರಾಷ್ಟ್ರದಿಂದ, ಆಂಧ್ರದಿಂದ, ತಮಿಳನಾಡಿನಿಂದ ವ್ಯಾಪಾರಿಗಳು ಬರೋದು ಇರ್ತಿತ್ತು. ಅವಾಗ ಮೂರ್ನಾಲ್ಕು ತಿಂಗಳು ನಮ್ಮ ಮನೆ, ನಮ್ಮ ಅಂಗಡಿಯಲ್ಲೆಲ್ಲ ಮರಾಠಿ ವಾತಾವರಣ ಇರತಿತ್ತು. ವ್ಯಾಪಾರಿಗಳು, ನಮ್ಮಲ್ಲೆ ಉಳಿದ ಬಿಡ್ತಿದ್ದರು. ಆವಾಗ ಹೋಟೆಲುಗಳು ಏನೂ ಇದ್ದಿಲ್ಲ. ತಂಬಾಕದ ವ್ಯಾಪಾರದ ಪದ್ಧತೀನ ಹಾಗ. ಬಂದವರ್ನ ತಮ್ಮನೆಯಲ್ಲೆ ಉಳಿಸಿಕೊಳ್ಳತಕ್ಕಂತದ್ದು. ನಿಪ್ಪಾಣಿ ತಂಬಾಕದ ವ್ಯಾಪಾರದಲ್ಲಿ ಇಡೀ ದೇಶಕ್ಕೆ ಪ್ರಮುಖ ಕೇಂದ್ರ. ಆ ದೃಷ್ಟಿಯಿಂದ ಅಲ್ಲಿ ವ್ಯಾಪಾರಿಗಳು ಹೆಚ್ಚು ಬರ್ತಾ ಇದ್ದರು. ಮಹಾರಾಷ್ಟ್ರದ ಸಂಪರ್ಕದಿಂದ ನಾನು ಮರಾಠಿ ಕಲೀಬೇಕಾತು. ಅಲ್ಲಿಯ ವ್ಯಾಪಾರಿ ಮಿತ್ರರು ನನಗೆ ಮರಾಠಿಯಲ್ಲಿರೋ ಆಸಕ್ತಿ, ನಾಟಕದಲ್ಲಿರೋ ಆಸಕ್ತಿ ನೋಡಿದರು. ಒಳ್ಳೆ ನಾಟಕ ಯಾವಾದ್ರು ಕೊಲ್ಹಾಪುರಕ ಸಾಂಗ್ಲಿಗೆ ಮೀರಜಗೆ ಬಂದ್ರ, ಟೆಲಿಗ್ರಾಂ ಕೊಟ್ಟು ಕರಿಸಿಕೊಳ್ಳತಿದ್ದರು.

*ಸಂ: ಈ ತಂಬಾಕ ವ್ಯಾಪಾರ ನಿಮ್ಮ ಹಿರೀಕರಂದ ಬಂದ ವೃತ್ತಿನಾ?*

ಮು: ಏನು ಅಲ್ಲಾ, ನಮ್ಮ ತಂದೆ ವ್ಯಾಪಾರಿಗಳs ಅಲ್ಲ. ಅವರು ಭೂಸ್ವಾಮಿಗಳು. ೭೦೦ ಎಕರೆ ಇತ್ತು.

*ಸಂ: ಹಾಗಾದ್ರೆ ಈ ತಂಬಾಕ ವ್ಯಾಪಾರ ಹೆಂಗೆ ಶುರುವಾಯಿತು?*

ಮು: ಅವಾಗ ನಮ್ಮಲ್ಲಿ ಬೇಳಿತಾ ಇದ್ದಂತ ತಂಬಾಕನ, ಸರೀ ವ್ಯಾಪಾರ ಮಾಡಿ ಪಟ್ಟಿ ತೀರ್ಸೋದಕ್ಕೆ ದಲ್ಲಾಳಿ ಬೇಕಿತ್ತು. ಬಹುಜನರು ನಮ್ಮ ತಂದಿಯವರಿಗೆ ಒತ್ತಡ ತಂದರು. ಗಾಂಧೀ ಪ್ರಭಾವದಿಂದ ಆದರ್ಶ ಅನಕೊಂಡು ಅವರು ಒಪ್ಪಲಿಲ್ಲ. ಎಲ್ಲಾರದು ಒತ್ತಡ ಬಂತು. ಆದರ ನಾನ ವ್ಯಾಪಾರ ಮಾಡಬೇಕಾತು. ಇದರಿಂದ ದುಡಿದು ಹಣಾನ ಹಿಂದಕ್ಕ ಇಡದೇ ಇದ್ರೂ, ಹಲವು ಜನರದ ಪರಿಚಯ ಆತು. ಮನಸ್ಸನ್ನ ತೆರೆದುಕೊಳ್ಳೋದಕ್ಕ ಆತು.

*ಸಂ: ನಿಮ್ಮ ವ್ಯಾಪಾರದಲ್ಲಿ ಸಂಗೀತ ಸಾಹಿತ್ಯ ನಾಟಕಕ್ಕೆ ಸಂಬಂಧ ಹೆಂಗೆ ಆಯಿತು?*

ಮು: ಅದಕ ಅವಕಾಶ ಇತ್ತು ಮಹಾರಾಷ್ಟ್ರದಲ್ಲಿ. ಅಲ್ಲಿ ಈ ಸಂಗೀತ ಸಾಹಿತ್ಯದಲ್ಲಿ ಆಸಕ್ತಿ ಇದ್ದಂಥಾ ವ್ಯಾಪಾರಿಗಳನ್ನ ನಾನು ಕಂಡಕೊಂಡೆ. ನಾನು ಹೋದ್ರ ಅವರು ಸಂಗೀತದ ಒಂದ ಗೋಷ್ಠಿನs ಏರ್ಪಾಟ ಮಾಡತಿದ್ದರು. ಆಮ್ಯಾಲೆ ಕೆಲವು ಮರಾಠಿ ಸಾಹಿತಿಗಳನ್ನ ಕೊಲ್ಲಾಪುರದಿಂದ ಕರಸಿ ಪರಿಚಯ ಮಾಡಿಕೊಡತಿದ್ದರು. ಈ ನನ್ನ ಅಭಿರುಚಿಗಳಿಗೆ ಪ್ರೋತ್ಸಾಹ ಕೊಡದರಿಂದ್ರ ನಾನು ಹೆಚ್ಚು ವ್ಯಾಪಾರಿಕವಾಗಿ ಹತ್ತಿರದವನಾಗ್ತೇನೆ ಅನ್ನತಕ್ಕಂಥಾ ದೃಷ್ಟಿ ಅವರಿಗೆ ಇತ್ತು.

*ಸಂ: ಅದೊಂದು ವ್ಯಾಪಾರಿ ತಂತ್ರ?*

ಮು: ಟೆಕ್ನಿಕ್ ಅದು. (ಕೆಳದನಿಯಲ್ಲಿ) ಇನ್ನೇನ ಮಾಡತಿದ್ದರು ಅಂದ್ರ, ಹೇಳತಿದ್ದರಪ್ಪಾ. ನಾನು ಸಂಪರ್ಕ ಪಡದಷ್ಟೊತ್ತಿಗ ಕಡಿಮಿ ಆಗಿತ್ತು. ಉತ್ತರ ಹಿಂದೂಸ್ತಾನದ ವ್ಯಾಪಾರಿಗಳು ಬಂದ್ರ ಅವರ ತಿಂಗಳ ತಿಂಗಳ ಇರತಿದ್ದರು. ಬಂದವರೆಲ್ಲ ಆವಾಗ ನಾಚನಾರಿಲೋಗ ಇವರಲ್ಲೇ ಇಳಕೊಳ್ಳಬೇಕು. ಕೊಲ್ಲಾಪುರ ಮಿರಜ ಸಾಂಗ್ಲಿ ಅಲ್ಲಿಗೆ ಬೈಟಕಿ ಕರಕೊಂಡ ಹೋಗದು. ಅವರ್ನೆಲ್ಲರನೂ ಖುಶಿಯಾಗಿಡತಕ್ಕಂಥದ್ದು. ಮತ್ತ ನಾವ ಎಲ್ಲಿ ಹೋಗದಿಲ್ಲಾಂದರ ಇದ್ದಲ್ಲೆ ಈ ಸಂಗೀತ ಇಡಸೋದು....

*ಸಂ: ಅಂದರೆ ವ್ಯಾಪಾರಿ ಸಂಸ್ಕೃತಿಯ ಭಾಗವಾಗಿಯೇ ಈ ಕಲೆಗಳೆಲ್ಲ ಬದುಕಿದ್ದವು...*

ಮು: ಹೌದೌದು. ನಮ್ಮ ಮಿತ್ರ ಸಾತಪ್ಪಣ್ಣ ಅಥಣಿ ಅಂತ ಹೇಳಿ ಇದ್ರು. ಅವರು ಬಂದು ತಮಾಷಾಕ ಕರಕೊಂಡ ಹೋದರು. ಹೋದರ, ನಾ ಹೀಂಗ ಕುತಕೊಂಡೆ. ಅವರ ಹೀಂಗ ದುಂಡಗ ನನ್ನ ಆ ಪಕ್ಕದಾಗ ಕುಂಡಿಸಿಕೊಂಡರು. "ನನಗ ಒಲ್ಲೆನ್ರಿ" ಅಂತ ನಾನು. "ನೀವು ಇದನ್ನ ತಿಳಕೊಳ್ಳದಕ ನಿಮ್ಮನ್ನ ಕರಕೊಂಡ ಬಂದಿರೋದು. ಇದು

ಒಂದು ಜಾನಪದ ಪ್ರಕಾರ, ತಮಾಷಾ ಅಂತ ನೋಡ್ರಿ ಅದನ್ನ" ಅಂತಂದ ಹೇಳಿ. ಅವರು ಕುಣಿದರು. ಹಾಡಿದರು. ಏನ ಲಯ? ಏನ ಗತ್ತು? ಭಾಳ ಅದ್ಭುತವಾಗಿತ್ತು. ಅವರು ಕಲಿಯೋದಕ ಎಷ್ಟ ಶ್ರಮ ಪಟ್ಟಿದ್ರೋ ಏನೋ, ಒಬ್ಬಾತ "ನನ್ನ ತೊಡಿ ಮ್ಯಾಲೆ ಕುತಕೊಂಡರ ನಿನಗ ೧೦೦ ರೂಪಾಯಿ ಕೊಡತೀನಿ" ಅಂದರ, ತೊಡಿಮ್ಯಾಲ ಕುತಗೊಂಡು ರೂಪಾಯಿ ಇಸಕೊಂಡ್ಳು; ಇನ್ನೊಬ್ಬನು ಬಾಯಲ್ಲಿ ೧೦೦ ರೂಪಾಯಿ ನೋಟ ಕಚ್ಚಿಕೊಂಡಿದ್ದ 'ನೀನು ಕಚ್ಚಿ ತಗೋಬೇಕ' ಅಂದರ ಆಕಿ ಆ ಕಡೆ ಹೋಗಿ ಕಚ್ಚಿ ಕಿತ್ತಗೊಂಡ್ಳು.

*ಸಂ: ಈಗಲೂ ಈ ಟ್ರೆಡಿಶನ್ ಇದೆಯಾ ?*

ಮು: (ವಿಷಾದದ ದನಿಯಲ್ಲಿ) ಈಗೆಲ್ಲಾ ಹೋಯಿತು. ಎಲ್ಲಾ ಹೋಯಿತು. ಅಲ್ಲಿ ಏನಾಗದ ಅಂದ್ರ, ನಾವು ಒಮ್ಮೆ ಸೊಲ್ಲಾಪುರಕ್ಕ ಹೋದಾಗ ಅಲ್ಲಿ ಸಿದ್ಧರಾಮನ ಜಾತ್ರಿ ಇತ್ತು. ಅಲ್ಲೊಂದ ತಮಾಷಾ ಕಂಪನಿ ಬಂದದಂದ್ರು. ನೋಡೋಣಾಂತ ಹೋದವಿ, ಹಗಲೊತ್ತ ಇತ್ತ ಅದು. ಹೋದರ ಅಲ್ಲೆಲ್ಲಾ ಸಿನೇಮಾ ಹಾಡುಗಳಿಗೆ ಫರಮಾಯಿಶ್ ಚೀಟಿಗಳು ಬಂದವು!

*ಸಂ: ಕರ್ನಾಟಕದಲ್ಲಿ ವ್ಯಾಪಾರ ಲೋಕದಲ್ಲಿ ಈ ರೀತಿಯ ಸಂಸ್ಕೃತಿ ಇದೆಯಾ?*

ಮು: ಇಲ್ಲ. ಅಲ್ಲಿದು ಹೇಳಬೇಕೂ ಅಂದ್ರೆ, ಒಮ್ಮೆ ರಾತ್ರಿ ರೋಡಿನೊಳಗ ಹೋಗುವಾಗ ಜನ ಸೇರಿದ್ದರು. ಸಂಗೀತ ಕೇಳಿಸ್ತು. 'ಏನ ತದ್ರಿ ನೋಡೋಣ' ಅಂತಂದ ಹೇಳಿ ನೋಡಿದೆ. ಅವನು ಬಾರ್‌ಬರಿ! 'ಅವತ್ತು ತನ್ನ ಅಂಗಡಿ ಓಪನ್ ಮಾಡತಾನ. ಅದಕ ಸಂಗೀತ ಇಡಸ್ಯಾನ' ಅಂತಂದ್ರು.

*ಸಂ: ಶಿವರಾಮಕಾರಂತರ ಜತೆ ಗಾಢವಾದ ಸಂಬಂಧವಿತ್ತು ನಿಮಗೆ. ಈ ಜಾನಪದ ರಂಗಭೂಮಿ, ಸಂಗೀತ ಇವು ಅವರಿಗೂ ಪ್ರೀತಿಯ ಕ್ಷೇತ್ರಗಳು ತಾನೇ? ನಿಮ್ಮ ಒಡನಾಟಕ್ಕೆ ಇವು ಕಾರಣವಾದವಾ?*

ಮು: ಒಮ್ಮೆ ಏನಾಯಿತು ಅಂದರ, ಕೆ.ವಿ. ಸುಬ್ಬಣ್ಣನವರು ಒಂದು ವಾರದ ಯಕ್ಷಗಾನದ ಶಿಬಿರ ಏರ್ಪಾಟ ಮಾಡಿದ್ದರು. ಪತ್ರಿಕೆಯಲ್ಲಿ 'ಆಪೇಕ್ಷೆ ಇದ್ದವರು ಬರಬಹುದು' ಅಂತ ಇತ್ತು. ವೀರಭದ್ರನಾಯಕರಂಥ ಯಕ್ಷಗಾನದ ಹೇಮಾಹೇಮಿಗಳೆಲ್ಲರನ್ನ ಸೇರಿಸಿದ್ದರು ಅವರು. ಕಾರಂತರು ಬರ್ತಾರಂತ ಹೋದದ್ದು ನಾನು. ನನಗೆ [illegible]ನೇ ಇಸ್ವಿಯಿಂದ ಕಾರಂತರ ಪರಿಚಯ. ಅವರು ಬರೆದಂಥ 'ಕನ್ನಡ ಪಾಠಮಾಲೆ'ಯ ಪುಸ್ತಕಗಳನ್ನ ನಮಗ ಪ್ರಾಥಮಿಕ ಶಾಲೆಯಲ್ಲಿ ಪಠ್ಯಗಳಾಗಿದ್ದವು. ಮತ್ತ ನಾನು ಹೈಸ್ಕೂಲಿನಲ್ಲಿ ಓದ್ತಾ ಇದ್ದಾಗಿನ ಚಿಲ್ಲರ-ಚಪಾಟಿ ಕೂಡಿ ಇಟಕೊಂಡು 'ಬಾಲ ಪ್ರಪಂಚ'ದ ಮೂರು ಭಾಗಗಳನ್ನ ತರಿಸಿ ಇಟಕೊಂಡಿದೆ. ಆಮ್ಯಾಲೆ, ಹಾವಗಲಿ ನಾಡಹಬ್ಬಕ್ಕ ಕಾರಂತರು ಬಂದಾಗ ನಾನು ಅವರ ಜೊತೆಗೆ ಮೂರು ದಿವಸ ಇರ್ತಿದೆ.

*ಸಂ:* *ಕನ್ನಡ ಸಂಸ್ಕೃತಿ ಕಳೆದ ಶತಮಾನ ಸೃಷ್ಟಿಸಿದ ದೊಡ್ಡ ವ್ಯಕ್ತಿತ್ವಗಳಲ್ಲಿ ಕಾರಂತರದ್ದೂ ಒಂದು. ಆದರೆ ತಮ್ಮ ಕೊನೆಯ ದಿನಗಳಲ್ಲಿ ಅವರು ಅನೇಕ ಸಾರ್ವಜನಿಕ ಚರ್ಚೆಯ ವಿಷಯಗಳಲ್ಲಿ ವಿವೇಕ ತೋರಲಿಲ್ಲ. ಭಿನ್ನಾಭಿಪ್ರಾಯಗಳನ್ನು ಸಿಡುಕಿನಿಂದಲೇ ನೋಡುತ್ತಿದ್ದರು.*

ಮು: ಭಿನ್ನಾಭಿಪ್ರಾಯವನ್ನೆಲ್ಲ ಸಹಾನುಭೂತಿಯಿಂದ ಕಾಣತಕ್ಕಂಥ ಒಂದು ಕಾಲಖಂಡ ಇತ್ತು. ಅದರ ನೆರಳನ್ನು ನಾವು 'ಮೈಮನಗಳ ಸುಳಿಯಲ್ಲಿ' ಆಮೇಲೆ 'ನಂಬಿದವರ ನಾಕ ನರಕ'ದಲ್ಲಿ, ಅದಕ್ಕಿಂತ ಹೆಚ್ಚಾಗಿ 'ಅಳಿದ ಮೇಲೆ'ಯಲ್ಲಿ ಕಾಣತೀವಿ. ಕಾರಂತರನ್ನು ಅವರ ಕಾದಂಬರಿಗಳಲ್ಲಿ ನಾವ ಹೆಚ್ಚು ಕಾಣಬೇಕು ಅನಸತದ. ಆನಂತರದ ಅವರ ಬದುಕಲ್ಲಿ ಏನಾಯಿತೆಂದರೆ, ಈ ಅರಿವಿನ ಅನ್ವೇಷಣೆಯಲ್ಲಿ, ಬಹುಮುಖ ಪ್ರತಿಭೆಯಲ್ಲಿ ಈ ಯಾವ ಯಾವುದೋ ಹುಚ್ಚು ಇಟಕೊಂಡು ಆಕಡೆ ಈಕಡೆ ಅಡ್ಡಾಡುವುದರಲ್ಲಿ ಮಾನಸಿಕ ನೆಮ್ಮದಿಯನ್ನ ನಾನು ಕಾಣಲಿಲ್ಲ ಅವರಲ್ಲಿ. ಒಬ್ಬ ವ್ಯಕ್ತಿ ಕುಟುಂಬದ ಯಜಮಾನನಾಗಿ ಒಬ್ಬ ಸಾರ್ವಜನಿಕ ವ್ಯಕ್ತಿಯಾಗಿ ಮಾಡತಕ್ಕಂಥಾ ಕರ್ತವ್ಯಗಳಲ್ಲಿ ಏನೂ ಹೆಚ್ಚು ಕಡಿಮೆ ಕಾಣಲಿಲ್ಲ. ಇನ್ನೊಬ್ಬ ಗಾಂಧಿ ಹಂಗ ವರ್ತನ ಮಾಡಿದರು. ತಮ್ಮ ಕೌಟುಂಬಿಕ ಬದುಕಿನ ಕಡೆಗೆ ಲಕ್ಷ್ಯ ಇರಲಿಲ್ಲಂತ ಈಗ ಹೇಳತಾರ. ಏನಿದ್ರು ಅರಿವಿನ ಹಂಬಲ, ಸಾಮಾಜಿಕ ಚಳುವಳಿ, ಇತ್ತೀಚೆಗೆಲ್ಲಾ ಪರಿಸರ, ಒಂದಲ್ಲ ಒಂದಕ್ಕ ಅಂಟಿಕೊಳ್ಳುತ್ತಿದ್ದರು. ದೊಡ್ಡ ಸಲಗವಾಗಿ ತಾವು ನಡೆದಿದ್ದ ಹಾದಿ ಅನ್ನೊಹಾಗ, ತಮ್ಮಷ್ಟಕ್ಕ ಬದುಕಿದವರು. ಮತ್ತೆ ಅವರ ನಂಬಿಕೆಗಳಲ್ಲಿ ಬದಲಾವಣೆ ಆಗಿದ್ದನ್ನ ಕಾಣತಿವಿ. ಬದುಕು ಮಾಗಿದ ಹಾಗೆ ಯಾವುದೋ ಒಂದು ಸಂಪರ್ಕ ಇತ್ತು. ಆಮೇಲೆ ಅಷ್ಟಮಠಗಳ ಸಾನಿಧ್ಯದಲ್ಲಿ ಇವರು ಭಾಷಣ ಮಾಡಿದ್ದುಂಟು ಅಂತ ಕೇಳಿದೆ. ಇವೆಲ್ಲ ಅವರ ವಯಸ್ಸಿನ ಒಂದು ಹಂತ ಹೇಳತವೆ.

*ಸಂ:* *ಈ ಕಾಲದ ದೊಡ್ಡ ಲೇಖಕರಲ್ಲಿ ಕಾರಂತರನ್ನ ಬಿಟ್ಟು ಉಳಿದವರ ಜೊತೆಗೆ ನಿಮ್ಮ ಒಡನಾಟ ಇರಲಿಲ್ಲ.*

ಮು: ಇರಲಿಲ್ಲಾ. ಅದಕ ಕಾರಣ ಅಂದ್ರ ಮೈಸೂರು- ಬೆಂಗಳೂರು ನಮಗೆ ಸಂಬಂಧಿಸಿದ ಭಾಗ ಆಗಿರಲಿಲ್ಲಾ.

*ಸಂ:* *ಬೇಂದ್ರೆ ಜೊತೆಗೆ?*

ಮು: ಬೇಂದ್ರೆಯವರ ಜೊತೆಗೆ ಸಂಪರ್ಕ ಇತ್ತು. ಸ್ವಲ್ಪ ಭಿನ್ನಾಭಿಪ್ರಾಯ ಬಂದದ್ದೂ ಉಂಟು.

*ಸಂ:* *ಯಾವುದಕ್ಕೆ?*

ಮು: ಅದು ಜಿಜ್ಞಾಸುಗಳ ಕೂಟ ಅಂತ ಒಂದ ಮಾಡಿದ್ದರು ಗೋಕಾಕರು. ಪ್ರತಿವರುಷ ಒಂದೊಂದೂರಿನಲ್ಲಿ ಸೇರತಕ್ಕದ್ದು. ಯಾರಾದರೂ ಒಬ್ಬರ ಅಭ್ಯಾಸಿಸೋದು. ಆರೀತಿ ಇದ್ದಾಗ ಹಲಸಂಗಿಯಲ್ಲಿ ಒಮ್ಮೆ ಇತ್ತು. ಹೋಗಿದ್ವಿ. ಅಲ್ಲಿ 'ಅರವಿಂದ ಮಂಡಳಿ' ಅಂತ ಮಧುರಚೆನ್ನರು ಮಾಡಿದಂಥಾದ್ದು, ಅದರ ೨೫ನೇ ವಾರ್ಷಿಕೋತ್ಸವ ಇತ್ತು. ಅದಕ್ಕೆ ಮದರ್ ಅರವಿಂದಾಶ್ರಮದ ಒಬ್ಬ ಪ್ರತಿನಿಧಿ ಕಳಿಸಿಕೊಟ್ಟಿದ್ದರು. ಒಂದ ಸಂದೇಶ ಪ್ರಿಂಟ್ ಮಾಡಿ, ಮದರ್‌ದು ಅರವಿಂದರದ್ದು ಫೋಟೊ ಎದುರಿಗೆ ಈ ಸಂದೇಶದ ಹಾಳಿಗಳನ್ನ ಇಟ್ಟು, ಒಬ್ಬೊಬ್ಬರ ನಮಸ್ಕಾರ ಮಾಡಿ ತಗೋಳ್ಳದು. ನಾನು ಗಿರಡ್ಡಿ ಹೋದ್ವಿ. ಸುಮ್ಮನ ತಗೊಂಡ್ವಿ. ಬಂದ್ವಿ. ಅವಾಗ ಅರವಿಂದ ಭಕ್ತರಿಗೆ ಸ್ವಲ್ಪ ನೋವ ಅನಿಸ್ತು. ನಮ್ಮ ಮುಖದಲ್ಲಿ ಭಕ್ತಿ ಕಾಣಲಿಲ್ಲ ಅವರಿಗೆ. ಗೊತ್ತಿಲ್ಲದವರಿಗೆ ಹೆಂಗ ಕೈ ಮುಗಿಯಾನ ಅಂತ ನಮ್ಮದು. ಮುಗಳಿ, ಬೇಂದ್ರೆ, ಅವರೆಲ್ಲಾ ಅರವಿಂದರ ಶಿಷ್ಯರು. ಗೋಕಾಕರ ಪರಮಾಪ್ತರು. ಭಾಷಣ ಮಾಡುವಾಗ ಬೇಂದ್ರೆಯವರ ಒಂದು ಬ್ಲಾಕ್ ಬೋರ್ಡ್ ತರಿಸಿ, ಅದರ ಮ್ಯಾಲೆ ಒಂದು ಆಶ್ಚರ್ಯದ ಚಿನ್ಹೆ ಬರದರು. ಗಿರಡ್ಡಿ ಗೋವಿಂದರಾಜ್, ಇವರ ಸರತಿ ಬಂತು ಮಾತಾಡದಕ. ಅವರದು ವಂಡರಮಾರ್ಕ ಇನ್ನ ಹಂಗ ಇತ್ತು. ಈ ಆಶ್ಚರ್ಯ ಚಿನ್ಹೆ ಮುಂದ ಪ್ರಶ್ನಾರ್ಥಕ ಚಿನ್ಹೆ ಮಾಡಿದ್ರು. ಅವರಿಗೆ ಇನ್ನೂ ತೊಂದರಿ ಅನಿಸ್ತು. ಆಗ ಇನ್ನ ಯುವ ವಯಸ್ಸು ನಮ್ಮದು, ಸ್ವಲ್ಪ ಬಂಡೇಳೊ ಮಾತುಗಳ ಇರಬೇಕು. ಅಷ್ಟಾದ ಮ್ಯಾಲೆ ಅವ ಸನತ್ಕುಮಾರ ಬ್ಯಾನರ್ಜಿ ಏನ ಪ್ರತಿನಿಧಿ ಬಂದಿದ್ದ ಪಾಂಡಿಚೆರಿಯಿಂದ, "We Should make the soul active" ಅಂದ ಭಾಷಣ ಮಾಡುವಾಗ. ನಾನು ಬೇಂದ್ರೆಯವರನ ಸಹಜವಾಗಿ ಕೇಳ್ದೆ: "ಏನ್ ಸಾರ್ ಹಿಂಗಂತಾರ. Soul active ಆಗೆ ಇರತದ. ಮತ್ತ ಅದನ್ನೇನ active ಮಾಡದು" ಅಂದೆ ನಾನು, "ಅಲ್ಲೊ ನೀನೇನು ನನ್ನ ಪರೀಕ್ಷೆ ಮಾಡಾಕ ಕೇಳ್ತಿಯೊ ಏನ ನಿನಗ ಅರ್ಥ ಆಗಲಿಲ್ಲಂತ ಕೇಳ್ತಿಯೊ? ಅದು ಅನುಭವದಿಂದ ಅರ್ಥ ಆಗಬೇಕದು, ನಿನ್ನ ಆತ್ಮ ನಿನಗೆ ಗೊತ್ತಾಗಬೇಕು. ಅದು ನಿನ್ನ ಜಾಗ್ರತಗೊಳಿಸಬೇಕು" ಅಂತ ಇನ್ನೊಷ್ಟು ತಿಳಿದಂಗ ಏನೋ ಹೇಳಿದರು. ಅಲ್ಲಿಂದ ನನ್ನ ಪ್ರೀತಿಯಿಂದಲೆ ಕಾಣತಿದ್ದರನು ಕೂಡಾ ಮನಸ್ಸು ಬಾಳ ದೂರಾತು.

*ಸಂ: ಕಾರಂತರ ಜೊತೆಗೆ ನಿಮ್ಮ ಸಂಬಂಧ ಹತ್ತಿರ ಆಗಲು ಕಾರಣ ಏನು?*

ಮು: ಅವರ ಚಿಂತನ ಸ್ವಾತಂತ್ರ್ಯ ನನಗೆ ಬಾಳ ಮುಖ್ಯವಾಗಿ ಕಾಣಿಸ್ತು. ಆ ನಮೂನಿ ಮನೋಭಾವದ ಹೇಳಿಕೆಗಳನ್ನ, ನಾನು ಥಿಯಾಸಾಫಿಕಲ್ ಕಾಲೇಜಿನಲ್ಲಿ ಕೇಳತಿದ್ದೆ. ಜೇಮ್ಸ್, ಎಚ್. ಕಸಿನ್ಸ್ ಅವರೆಲ್ಲರೂ ಅಲ್ಲಿಗೆ ಬರತಿದ್ದರು. ಹರೀಂದ್ರನಾಥ ಚಟ್ಟೋಪಾಧ್ಯಾಯ ಅಲ್ಲಿಗೆ ಬಂದು ಹೋದವರು ಸರೋಜಿನಿ ನಾಯ್ಡು ಬಂದು

ಹೋದಂಥವರು. ಆ ನಮೂನಿ ಮುಕ್ತ ಚಿಂತನೆ ಮತ್ತು ದಿಟ್ಟವಾಗಿ ಹೇಳತಕ್ಕಂಥದ್ದು, ಇದು ನನಗೆ ಭಾಳ ಖುಶಿಕೊಟ್ಟಿತು. ಅದೇ ಹೊತ್ತಲ್ಲಿ ಅವರ 'ಬಾಳ್ವೆಯೇ ಬೆಳಕು' ಶಂಬಾ ಜೋಶಿ ಪ್ರಕಟ ಮಾಡಿದ್ದರು. ಒಂದು ರೂಪಾಯಿ ನಾಕಾಣೆ ಪುಸ್ತಕ. ಅವರು ಹೇಳಬೇಕಾದಂತಹ ಇಡೀ ಚಿಂತನೆಯನ್ನು ಸೂತ್ರರೂಪದಲ್ಲಿ ಆ ಪುಸ್ತಕದಲ್ಲಿ ಹೇಳಿದ್ದಾರಂತ ನಾನಿವತ್ತಿಗೂ ಅಂದಕೊಂಡಿರುವನು. ಅವರ ಎಲ್ಲಾ ಪುಸ್ತಕಗಳ ರಾಶಿಗೆ ಅದೊಂದ ಶಿಖರಪ್ರಾಯ.

*ಸಂ: ನಿಮ್ಮ ಸಂಪಾದನೆ ಹಾಗೂ ಸ್ವಂತರಚನೆ ಎರಡೂ ಬಗೆಯ ಕೃತಿಗಳಲ್ಲಿ ಹೆಚ್ಚಿನವು ಜನಪದ ರಂಗಭೂಮಿಗೆ ಸಂಬಂಧಿಸಿದವು. ಇದಕ್ಕೆ ಕಾರಣ ಏನು ?*

ಮು: ನಾನು ಜಾನಪದ ರಂಗಕಲೆಗಳೊಂದಿಗೇ ಬೆಳೆದವನು. ನಮ್ಮೂರಿನಲ್ಲಿ ಬಯಲಾಟ ಬಿಟ್ಟರೆ ಯಾವೂ ಇರ್ತಿದ್ದಿಲ್ಲ. ಕಂಪನಿ ನಾಟಕಗಳು ತುಂಬಾ ದಿವಸ ಇರ್ತಿದ್ದವು. ಒಮ್ಮೊಮ್ಮೆ ತಿಂಗಳು ಎರಡು ತಿಂಗಳು ಇರ್ತಿದ್ದವು. ಉತ್ತರ ಕರ್ನಾಟಕದ ಅನೇಕ ಕಂಪನಿ ನಾಟಕಗಳೆಲ್ಲಾ ಚಿಗಟೇರಿಯಿಂದ ಪ್ರೋತ್ಸಾಹ ಪಡೆದಂಥವು. ನಮ್ಮೂರಿನಲ್ಲಿ ಕೆಲವು ಹಲಗೇರಿ ಜೀತಪ್ಪನ ಕಂಪನಿಯಲ್ಲಿ ಇದ್ದಂಥವರು.

*ಸಂ: ದೊಡ್ಡಾಟಗಳಿದ್ದವಾ?*

ಮು: ದೊಡ್ಡಾಟಗಳಿದ್ದವು. ನಮ್ಮೂರಲ್ಲೇ ದೊಡ್ಡಾಟ ಬರೆಯುವರಿದ್ದರು. ಹಳೆಮನಿ ಕೊಟ್ರಬಸಪ್ಪ ಅಂತ ಹೇಳಿ. ದೊಡ್ಡಾಟದ ಒಂದು ವಿಶೇಷ ಹೇಳಬೇಕೂ ಅಂದ್ರ, ನಮ್ಮೂರಿನಲ್ಲಿ ಮದ್ದಿ ಫಕೀರಪ್ಪ ಅಂತ ಒಬ್ಬ ಪ್ರಸಿದ್ಧ ವ್ಯಕ್ತಿ, ಒಮ್ಮೆ ಬಯಲಾಟ ತಗೊಂಡು ಬಳ್ಳಾರಿಗೆ ಹೋಗಿದ್ದ. ಅದರಲ್ಲಿ ನಮ್ಮಪ್ಪಂದು ಒಂದು ಪಾತ್ರ. ಸಣ್ಣ ಹುಡುಗರಿದ್ವಿ ನಾವು. ಅಲ್ಲಿ ಇವರಿಗೆ ವಾಪಸ್ ಬರಲಿಕ್ಕೆ ಹಣದ ತೊಂದರಿ. ಯಾರೋ ವಕೀಲರ ಹತ್ತಿರ (ಈತನ ಶ್ರೀಮಂತಿಕೆ ಮನವರಿಕೆ ಮಾಡಿಕೊಟ್ಟು) ಈತನ್ನ ವತ್ತಿ ಇಟ್ಟು, ಹಣ ತಗೊಂಡು ಊರಿಗೆ ಬಂದು, ಆಮ್ಯಾಲೆ ನಮ್ಮಪ್ಪನ್ನ ಬಿಡಿಸಕೊಂಡ ಬಂದರು.

*ಸಂ: ನಿಮಗೆ ಬಳ್ಳಾರಿ ರಾಘವ, ಜೋಳದರಾಶಿ ದೊಡ್ಡನಗೌಡರ ಪರಿಚಯವಿತ್ತಾ ?*

ಮು: ತುಂಬಾ ಪರಿಚಯ ಇತ್ತು. ೧೯೪೫ ರಿಂದ. ರಾಘುವರಿಗೆ ಬೆಂಗಳೂರು ಒಡನಾಟವೂ ಹೆಚ್ಚು ಇತ್ತು. ಆದರೆ ಕನ್ನಡಕ್ಕಿಂತ ತೆಲುಗಿನಲ್ಲೇ ಅವರ ಕೆಲಸ ದೊಡ್ಡದು, ರಂಗಕಲೆಗಳಲ್ಲಿ.

*ಸಂ: ಜೋಳದರಾಶಿಯವರ ಬಗ್ಗೆ ಹೇಳಿ.*

ಮು: ಅದ್ಭುತ ವ್ಯಕ್ತಿ ಅವರು. ಈ ಶರಣ ಸಾಹಿತ್ಯವನ್ನು ತುಂಬಾ ಅಭ್ಯಾಸ ಮಾಡಿದಂಥವರು. ಜೋಳದರಾಶಿಯ ಆಗಿನ ಕಾಲದ ಸಾಮಾಜಿಕ ಆಗುಹೋಗುಗಳ ನೇತಾರರ

ಆಗಿದ್ದಂಥವರು. ಅವರು ಅಲ್ಲಿ ಪಂಚಾಯ್ತಿ ಪ್ರೆಸಿಡೆಂಟ್ ಆದರು. ನಾನಿಲ್ಲಿ ಪ್ರೆಸಿಡೆಂಟ್ ಆಗಿದ್ದೆ. ಅವರ ಗಮಕದ ರೀತಿ ಅದ್ವಿತೀಯ. ಮೈಸೂರ ಕಡೀ ಗಮಕಿಗಳದೆಲ್ಲ ಹೇಳಿಕೆ ಪದ್ಧತಿ; ಲಯದಲ್ಲಿ ಹೆಚ್ಚು ಕರ್ನಾಟಕೀ ಪ್ರಭಾವ. ಇವರದು ಹಾಗಲ್ಲ. ಇವರ ವೈಶಿಷ್ಟ್ಯ ಅಂದರ, ನಾಟಕೀಯ ಒಂದು ಡಂಗ್ ಬರಬೇಕು. ಅದಕ್ಕೆ ಅತ್ಯಂತ ಲಾಯಕ್ಕಾದದ್ದು ಅಂದರ 'ಹರಿಶ್ಚಂದ್ರ ಕಾವ್ಯ'. ೪೯ನೇ ಇಸ್ವಿಯಲ್ಲಿ ಅವರು ಹರಪನಹಳ್ಳಿಗೆ ಬಂದಿದ್ದರು. 'ಚಂದ್ರಮತಿಯ ಪ್ರಲಾಪ' ವಾಚನಮಾಡ್ತಾಗ ಕುಂತಂಥ ಜನ ಅತ್ತಿದ್ದನ್ನ ನಾನು ನೋಡಿದೆ.

*ಸಂ: ವಿಚಿತ್ರ ಅಂದ್ರೆ, ನೀವಿಬ್ಬರೂ ಕೂಡಾ ಬಳ್ಳಾರಿ ಜಿಲ್ಲೆಯ ಎರಡು ಭೂಮಾಲಿಕ ಕುಟುಂಬಗಳಿಂದ ಬಂದು ರಂಗ ಭೂಮಿ ಮತ್ತು ಸಂಗೀತದಲ್ಲಿ ಕೆಲಸ ಮಾಡಿದ್ರಿ...*

ಮು: ನನ್ನ ಅನುಭವದ ಅನುವಿನಲ್ಲಿ ಹೇಳಬೇಕೂ ಅಂದ್ರ, ನಮ್ಮಪ್ಪ ಶ್ರೀಮಂತಿಕೆಯ ದರ್ಪ ಇದ್ದಂಥವರಲ್ಲಾ. ಸಾಮಾಜಿಕ ಆಗುಹೋಗುಗಳೊಂದಿಗೆ ತೊಡಗಿದಂಥಾ ವ್ಯಕ್ತಿ ಆತ. ನಮ್ಮ ತಂದೀದ ನಾ ಹೇಳಬಾರದು. ಊರಲ್ಲಿ ಯಾರಾದರೂ ಬಯಲಾಟ ಮಾಡತಾರಂದ್ರ ಮನೆಯಲ್ಲಿದ್ದ ಬಂಗಾರೆಲ್ಲ ಒಂದು ಪುಟ್ಯಾಗಿಟ್ಟಾ ಕೊಟ್ಟುಬಿಡುತಿದ್ರು.

*ಸಂ: ಜನಪದ ಸಾಹಿತ್ಯ ರಂಗಭೂಮಿ ಕ್ಷೇತ್ರಗಳಲ್ಲಿ ಕೆಲಸ ಮಾಡಬೇಕಾದರೆ ಆ ಕಲೆಯನ್ನುಳ್ಳ ಸಮುದಾಯದ ಜೊತೆ ಆತ್ಮೀಯ ಸಂಪರ್ಕ ಇಟಕೋಬೇಕು. ಇದಕ್ಕೆ ನಿಮ್ಮ ರಾಜಕೀಯ ಆರ್ಥಿಕ ಸ್ಟೇಟಸ್‌ಗಳು ಕಷ್ಟಕೊಡುತ್ತಿದ್ದವೋ ಸಹಾಯಕವಾಗಿದ್ದವೋ?*

ಮು: ಈ ನಾಟಕ ಇವೆಲ್ಲಾ ಏನ ಇದ್ದಾವಲ್ಲ, ಇವಕ್ಕೂ ಸ್ಟೇಟಸ್‌ಗೂ ಸಂಬಂಧಿಲ್ಲ. ಸ್ವಾಭಾವಿಕವಾಗಿ ಎಲ್ಲಾ ಕುಲದವರು ಎಲ್ಲಾ ವರ್ಗದವರು ಸಾಮಾನ್ಯವಾಗಿ ಸೇರತಕ್ಕಂಥ ಒಂದು ಕಣ್ವಾಶ್ರಮ ಅಂದರ ರಂಗಭೂಮಿ.

*ಸಂ: ಎಚ್ ಎಲ್ ನಾಗೇಗೌಡರ ಅನುಭವದಲ್ಲಿ, ಅವರ ಅಧಿಕಾರಕ್ಕೆ ಹೆದರಿ ಹೆಳವರಂಥ ಅನೇಕ ಕಲಾವಿದರು ಬಂದು ಭೇಟಿಮಾಡುವ ಪ್ರಸಂಗ ಬರ್ತದೆ. ಜನರ ಜತೆ ಸಾಮಾನ್ಯವಾಗಿ ಬೆರೆಯೋಕೆ ಕಷ್ಟವಾಗುತ್ತೆ.*

ಮು: ಅಂಥಾದ್ದು ಏನೂ ಇಲ್ಲ ನನಗೆ. ಆ ನಮೂನಿ ಮನೋಭಾವ ನಮ್ಮ ಭಾಗದಲ್ಲಿ ಇರಲಿಲ್ಲ. ನಮ್ಮ ತಂದಿಯವರಿಗೂ ಇರಲಿಲ್ಲ. ಇಲ್ಲಿ ರಾಮಕ್ಕನಹಳ್ಳಿ ಅಂತ ಒಂದು ಹಳ್ಳೀ ಅದ. ಅಲ್ಲಿ ಜೋಗೇರ ಬಂದಿದ್ದರು ಮಾಡತಾ ಇದ್ದ ಉದ್ಯೋಗ ಅಂದ್ರೆ, ತತ್ವಪದ ಹೇಳೋದು. ಅವರು ಬಂದ್ರ ಹಾಡಿಸಿ, ಬಟ್ಟೆ, ಹಣ, ಜ್ವಾಳ ಕೊಟ್ಟು ಕಳಸತಿದ್ದರು.

*ಸಂ: ಸಂಗೀತ, ಜನಪದ ರಂಗಭೂಮಿ, ಜನಪದ ಸಾಹಿತ್ಯ ಸಂಗ್ರಹ ಮಾತ್ರ ಇದ್ದ*

*ನಿಮಗೆ, ನಗರದ ಶಿಷ್ಟನಾಗರಿಕ ಸಮುದಾಯದ ಜೊತೆಗೆ ಒಂದು ಸಂಬಂಧ ಏರ್ಪಟ್ಟಿತು. ಆದರೆ ಇವನ್ನೆಲ್ಲ ಸೃಷ್ಟಿ ಮಾಡತಿದ್ದ ಸಮುದಾಯಗಳ ಒಳಗಡೆ ನೀವು ಮಾಡತಿದ್ದ ಕೆಲಸಕ್ಕೆ ಎಂಥ ಪ್ರತಿಕ್ರಿಯೆ ಬರ್ತಿತ್ತು?*

ಮು: ಯಾವಾಗಲೂ ನಮ್ಮ ಭಾಗದ ಜನಪದ ಕಲಾವಿದರ ಜೊತೆಗೆ ನಂದು ಹೆಚ್ಚು ಒಡನಾಟ. ಬಹುತೇಕ ಅವರು ಗೊತ್ತಿರತಕ್ಕಂಥವರು. ಅವರನ್ನು ಪ್ರೀತಿಯಿಂದ ಕಂಡುಬಿಟ್ಟರೆ, ಅವರು ತೆರೆದ ಹೃದಯಿಗಳಾಗತಾರ. ತಮ್ಮನ್ನ ನಮ್ಮ ಜತಿಗೆ ಗುರುತಿಸಿಕೊಂಡ್ರು ಅಂದರ, ಯಾವುದೇ ಹಿಂಜರಿಕೆ ಇರೋದಿಲ್ಲ.

*ಸಂ: ನನ್ನ ಪ್ರಶ್ನೆ ಏನೆಂದರೆ, ನಮ್ಮ ಹೆಚ್ಚಿನ ಸಂಗ್ರಾಹಕರು ಹೊರಗಿನವರಾಗಿ ಬಂದು ಸಂಗ್ರಹ ಮಾಡಿಕೊಂಡು ಹೋಗಿದ್ದಾರೆ. ನೀವು, ಸಿಂಪಿ ಲಿಂಗಣ್ಣ, ಮಧುರಚೆನ್ನ, ಒಂದು ಹಳ್ಳಿಯನ್ನೇ ಕೇಂದ್ರ ಮಾಡಿಕೊಂಡು ಕೆಲಸಮಾಡ್ತಾ ಅಲ್ಲೇ ಉಳಿದವರು. ಯಾವುದೇ ಕಲೆಗಳಲ್ಲಿ ಭಾಗವಹಿಸ್ತಾನೇ ಬದುಕಬೇಕಾದಂಥ ವಾತಾವರಣದಲ್ಲಿ ಸಂಗ್ರಹ ಮಾಡೋದು, ಪುಸ್ತಕ ಮಾಡೋದು ಇವೆಲ್ಲ ಚಟುವಟಿಕೆ ಹಳ್ಳಿಗಳಲ್ಲಿ ಪರಕೀಯವಾಗಿ ಉಳಿದವು ಅನಿಸಲಿಲ್ಲವಾ?*

ಮು: ಇಲ್ಲ ನಮಗೇನೂ ಅನ್ಸಲಿಲ್ಲಾ. ನಮ್ಮ ಭಾಗದ ಕೆಲಸ ನಾವು ಮಾಡ್ತೇವೆ. ಆ ನಮೂನಿಯ ಒಂದು ಮನೋಭಾವ ನಮಗಿತ್ತು. ನಾವು ಸಂಗ್ರಹ ಮಾಡದಃ, 'ನಮ್ಮನ್ನ ಗುರುತಿಸಿದರಲ್ಲಾ. ನಮ್ಮನ್ನ ಹತ್ರ ಹರಕೊಳ್ಳತಾರಲ್ಲ ಇವರು' ಅನ್ನೋದ, ಅವರಿಗೆ ಒಂದು ದೊಡ್ಡದಾಗಿ ಕಾಣಸ್ತಿತ್ತು.

*ಸಂ: ನಿಮ್ಮ ಸಂಗ್ರಹಕಾರ್ಯದಲ್ಲಿ ಬಹಳ ವಿಶಿಷ್ಟ ನೆನಪಾಗಿ ಉಳಿದಿರುವ ಒಂದು ಅನುಭವ ಹೇಳಿ ಸಾರ್.*

ಮು: ಮತ್ತಿಹಳ್ಳಿಗೆ ನಾನು ಈ 'ಲಕ್ಷಾಪತಿರಾಜ' ಕತೆ ಸಂಗ್ರಹ ಮಾಡಲಿಕ್ಕೆ ಹೋಗಿದ್ದೆ - ಬಂಡಿ ಕಟ್ಟಿಸಿಕೊಂಡು, ಟೇಪ್ ರೆಕಾರ್ಡರ್ ಹೇರಿಕೊಂಡು. ಅದು ನಮ್ಮ ಹರಪನಹಳ್ಳಿ ಕ್ಷೇತ್ರದ ಪರಿದಿಯೊಳಗ ಬರತದ. ಮತ್ತಿಹಳ್ಳಿಗೆ ಹೋಗಿ ರಾತ್ರಿ ಇಡಿಸಿದಿವಿ. ಸಾಕಷ್ಟ ಜನ ಸೇರಿದ್ರು, ಟೇಪ್ ರೆಕಾರ್ಡರ್ ನೋಡೋದಕ. ಜೋಗೇರ ಗೋಣೆಪ್ಪ ಅಂತ ಅಂವ್ನ. ಕುಡುದಾ ಕುಡುದಾ... ಎಷ್ಟ್ ಕುಡುದಾ ಅಂದ್ರ, ಯಾವಾಗ ಅರ್ಜುನ, ಯಾವಾಗ ಕರ್ಣ, ಯಾವಾಗ ಭೀಮ ಆತಗ ಗೊತ್ತಿಲ್ಲದಂಗಾತು. ಕೊನಿಗೆ ಅಡ್ಡ ಮಲಗಿಬಿಟ್ಟ. ಮುಂದೆ ಆತನಿಂದ ಸುಮಾರು ೧೪ ತಾಸಿನ ಭಾರತ ನಾನು ಸಂಗ್ರಹ ಮಾಡಿದೆ. (ಅದು ಟ್ರಾನ್ಸ್ ಕ್ರೈಬ್ ಮಾಡೋದ ಆಗಿಲ್ಲ ಇವತ್ತಿಗೂ) ಅಲ್ಲಿಯ ರಾಮನಾಗಲಿ, ಸೀತೆಯಾಗಲಿ, ಕೃಷ್ಣನಾಗಲೀ ಅವರೆಲ್ಲಾ ತೀರಾ ಸಾಮಾನ್ಯರು. ಆತ ಅಜ್ಜಾ ಅಜ್ಜಿ ಕಥಿಯೊಳಗ ಬರತಕ್ಕಂಥಾ ಪವಾಡಗಳನ್ನು ತೋರಸತಾನ ಅಷ್ಟ ಹೊರತಾಗಿ, ಆಚಿಗಿ ಏನೂ ಆಗಿ ಕಾಣದಿಲ್ಲ.

*ಸಂ: 'ಚಿತ್ರಪಟ ರಾಮಾಯಣ' ಎಲ್ಲಿ ಸಿಕ್ತು ನಿಮಗೆ?*

ಮು: ಶಿವರುದ್ರಪ್ಪ ಅಂತ ಇದ್ರು ಮೈದೂರಲ್ಲಿ. ಆ ಊರ ಸ್ಪೆಶಾಲಿಟೀನೇ 'ಚಿತ್ರಪಟ ರಾಮಾಯಣ'. ಏನೂ ಇಲ್ಲಾ ಅಂದ್ರ, ಮುಂಜಾನೆ ಒಂದು ಗೂಟ ಹುಗದು ರಾತ್ರಿಗೆ ಆಡೇಬಿಡವಾ ಅದನ್ನ. ಅಷ್ಟು ಹೃದ್ಗತ ಆದಂಥಾದು ಆ ಊರಿಗೆ ಅದು. ಅಲ್ಲಿಂದ ನಾನು ಪ್ರತಿ ತಗಸಿದೆ. ರೋಮಾಂಚನದ ಅನುಭವ ಅಂದ್ರ, ಈ ಗೊಂದಲಿಗರ ದೇವೇಂದ್ರಪ್ಪನ 'ಶೀಲಾವತಿ' ಮೊದಲ ನಾನು ಆಡಸಿ ನೋಡಿದೆ. ಆತ ಪಾತ್ರಗಳನ್ನ ಕಥೆಯ ಮೂಲಕ ಸೃಷ್ಟಿ ಮಾಡತಾ ಇದ್ದಂಥಾ ರೀತಿ, ಆಯಾ ಪಾತ್ರವಾಡುವಾಗ ತೋರಿಸ್ತಾ ಇದ್ದಂಥ ತಾಟಸ್ಥ್ಯ, ಶೀಲಾವತಿದಕೂ ಕಳ್ಳಂದಕ್ಕೂ ಆಯಾ ದನಿಯಲ್ಲಿ ಬಂದಾಗ ಆತ ಅದರಲ್ಲಿ ತನ್ಮಯ ಆಗ್ತಿದ್ದಂಥ ರೀತಿ, ಮತ್ತೆ ಕೂಡಲೇ ಇನ್ನೊಂದು ಪಾತ್ರದ ಮೈಯಲ್ಲಿ ಸೇರಿಕೊಂಡಂಥ ರೀತಿ, ಅದನ್ನ ಕಥಾ ರೂಪಕ್ಕೆ ತರತಾ ಇದ್ದಂಥ ರೀತಿ, ಭಾಳ ಅದ್ಭುತವಾಗಿ ಕಾಣಿಸ್ತು ನನಗೆ. ಆ ಕಥಾ ನಿರೂಪಣೆಯಲ್ಲಿಯ ನಾಟಕೀಯತೆ ನಾನು ಮೊದಲನೇ ಸಾರಿ ಕಂಡುಕೊಂಡಿದ್ದು.

*ಸಂ: 'ಚಿತ್ರಪಟರಾಮಾಯಣ'ವನ್ನು ಉಡುಪಿಯ ಆರ್‌ಆರ್‌ಸಿಯವರು ಪ್ರಕಟಿಸಿದ್ರು. ಅವರ ಸಂಪರ್ಕ ಹೇಗಾಯಿತು ?*

ಮು: ಆರ್‌ಆರ್‌ಸಿ ಸ್ಥಾಪನಾ ಮಾಡಿದ ಮ್ಯಾಲೆ ಅದಕ್ಕೆ ಪ್ರಥಮ ಯಜಮಾನಿಕೆ ಇದ್ದದ್ದು ಕಾರಂತರದು. ಕಾರಂತರು ಚಿಗಟೇರಿಗೆ ಬಂದಾಗ ನಾನು ರೆಕಾರ್ಡ್ ಮಾಡಿದವೆಲ್ಲಾ ಅವರೆದುರಿಗೆ ಹಾಕಿ ತೋರಿಸ್ತಿದ್ದೆ. ತೋರಿಸಿದಾಗ 'ಇಲ್ಲೇನೋ ವಿಶೇಷ ನಿಧಿ ಇದೆ. ಈ ಮನುಷ್ಯ ಏನೇನೋ ನೆರವಾಗಬಲ್ಲ' ಅಂತ ಹೇಳಿ ನನ್ನನ್ನ ಆರ್ ಆರ್ ಸಿಗೆ ಸಂಪರ್ಕಿಸಿದರು.

*ಸಂ: ಆರ್‌ಆರ್‌ಸಿ ಜೊತೆ ನೀವು ಸಂಪರ್ಕವಿಟ್ಟುಕೊಂಡು ಬಂದ ಇನ್ನೊಂದು ಸಂಸ್ಥೆ 'ನೀನಾಸಂ'. ಈ ಎರಡೂ ಸಂಸ್ಥೆಗಳು ಫೋರ್ಡ್ ನೆರವು ಪಡೀತಾ ಇರುವಂಥವು. ವಿದೇಶಿ ಫೌಂಡೇಶನ್ನುಗಳ ಸಂಪರ್ಕ ಅಂದ್ರೆ ಪ್ರತಿಷ್ಠೆಯ ಸಂಕೇತವಾಗಿದ್ದ ಕಾಲವಿತ್ತು. ಈಗೀಗ ಇವಕ್ಕೆ ಬೇರೆ ರಾಜಕೀಯ ಆಯಾಮಗಳಿರುವ ಸಂಗತಿ ತಿಳೀತಾ ಇದೆ. ನಿಮಗೇನು ಮುಜುಗರ ಅನಿಸಲಿಲ್ವಾ?*

ಮು: ನನಗೆ ಮುಜುಗರ ಅನಿಸಿದಾಗ ಅದನ್ನ ಹರಿದಾಸಭಟ್ಟರಲ್ಲಿ ಹೇಳಿದೆ. ಕಾರಂತರಲ್ಲೀನೂ ಹೇಳಿದೆ. "ಅವರು ಕೊಟ್ಟ ಹಣಕ್ಕೆ ನಮ್ಮಿಂದ ಒಂದು ತುಂಡು ಕಾಗದ ಕೂಡಾ ಪಡಿಯೋದಿಲ್ಲ. ನಮ್ಮಿಂದ ಅವರು ಏನಾದರೂ ಒಂದು ಕ್ಯಾಸೆಟ್ ಆದರೂ ಒಯ್ದಾರ್ಯ?" ಏನು ಸಂಗ್ರಹ ಮಾಡತೀರಿ ಅದನ್ನ ನಿಮ್ಮಲ್ಲೇ ಇಟಕೊಳ್ರಿ ಅಂತಾರೆ ಅಂದ್ರು". ಅವರು ಒಂದು ಎದುರ್ ಪ್ರಶ್ನೆ ಹಾಕಿದರ ನನಗೆ. "ಇದನ್ನ ಇನ್ನಾ ರಾಜ್ಯ ಮಾಡುವಂಥದ್ರ ಪಾಡು. ಇಲ್ಲಿಯವರಿಗ ಕೊಟ್ಟು ಮಾಡಿಸಲಿ. ನಾವೇ ಮಾಡಬೇಕು

ಅಂತ ಇಲ್ಲ. ನಾವೂ ಮಾಡಲಿಲ್ಲ, ಮುಂದಿಗೂ ಮಾಡಗೊಡ್ತಲಿಲ್ಲ ಅನ್ನದು ಇದು ಯಾವುದು?"

ಸಂ: *ನಮ್ಮ ಜಾನಪದವನ್ನ ಸಂಗ್ರಹ ಮಾಡಿ ಪ್ರಕಟಿಸೋದು ಒಂದಿದೆ. ಇನ್ನೊಂದು ಇದನ್ನ ಸೃಜನಶೀಲವಾಗಿ ಬಳಸಿಕೊಂಡು ಹೊಸ ಸಾಹಿತ್ಯ ಸೃಷ್ಟಿಸೋ ವಿಧಾನ ಇದೆ. ನೀವು ಎರಡೂ ಮಾಡಿದ್ದೀರಿ. ಇದರಲ್ಲಿ ಅರ್ಥಪೂರ್ಣ ಅನಿಸೋದು ಯಾವುದು?*

ಮು: ಕಾಲಧರ್ಮಕ್ಕೆ ಅನುಸರಿಸಿ ಸಾಮಾಜಿಕ ಬದುಕಿನಲ್ಲಿ ಈ ಸಮೂಹ ಮಾಧ್ಯಮಗಳಲ್ಲಿ ಬದಲಾವಣೆ ಕಾಣತಿವಿ. ಗೊಂದಲಿಗರು ಪ್ರಯೋಗ ಮಾಡತಾ ಇರತಕ್ಕಂಥ ರೀತಿಯಲ್ಲೆ ಆಟ ಯಾರೂ ನೋಡಲಿಕ್ಕೆ ತಯಾರಿಲ್ಲ. ಯಾಕಂದ್ರೆ ಮಾತಿನಲ್ಲಿ ಹೇಳಿಕೋದನ್ನ ಅವು ಪದ್ಯದಲ್ಲಿ ಹೇಳತಾರ; ಪದ್ಯದಲ್ಲಿ ಹೇಳಿರೋದನ್ನ ಮಾತಿನಲ್ಲಿ ಹೇಳತಾರ; ಅಷ್ಟು ದಡ್ಡರ ಈಗಿಲ್ಲ. ಎರಡೂವರಿ ತಾಸಿನಲ್ಲಿ ಎಲ್ಲ ಮುಗೀಬೇಕು ಅನ್ನೋದ ಇರುವಾಗ, ಬಹಳ ಪರಂಪರಾಗಗತವಾಗಿ ಬಂದಂಥ ಕಲೆಗಳನ್ನು ಇಂದಿನ ಕಾಲದ ಅಭಿರುಚಿಗೆ ಅನುಸರಿಸಿ ಯಾವ ರೀತಿಯಲ್ಲಿ ಸುಧಾರಿಸಿಕೊಂಡು ನಾವೂ ಪ್ರಯೋಗ ಮಾಡಿದರ, ಅವು ಬದುಕಿಯಾವು. ಈಗ ಟೀವಿಯಲ್ಲಿ ಬರತಕ್ಕಂಥಾ ಗೊಂದಲಿಗರ ಆಟ ನೋಡಬಲ್ಲರೆ ಹೊರತಾಗಿ, ಅವರನ್ನೇ ಪ್ರಾಯೋಜನೆ ಮಾಡಿ ನೋಡೊ ಬುದ್ದಿ ಈಗ ಯಾರಿಗಿದೆ? ರಾತ್ರಿಯೆಲ್ಲಾ ಎಚ್ಚರಿದ್ದು ನೋಡಲಿಕ್ಕೆ ತಯಾರಿ ಇಲ್ಲ. ಮದುವಿಯಲ್ಲಿ ಗೊಂದಲದ ವಿಧಿಆಚರಣೆ ಆದಾವು. ಕಲಾತ್ಮಕದೃಷ್ಟಿಯಿಂದ ಅವನ್ನ ಉಳಿಸಿಕೊಂಡು ಬೆಳೆಸೋದಕ್ಕೆ ಯಾರಿಂದಲೂ ಪ್ರೋತ್ಸಾಹ ಇಲ್ಲ. ಅವು ಇರೋಸ್ಥಿತಿಯಲ್ಲಿ ಯಾರನ್ನೂ ಅವು ತಾಕೋದಿಲ್ಲ. ಆದ ಕಾರಣ, ಅವನ್ನ ಬೇರೆರೀತಿಯಾಗಿ ನಾವು ದುಡಿಸಿಕೊಳ್ಳಬಾರದು ಯಾಕೆ? ಈಗ ಬಹುತೇಕ ಗೊಂದಲಿಗರು ಬೇರೆ ಬೇರೆ ವ್ಯಾಪಾರದಲ್ಲಿ ತೊಡಗಿದ್ದಾರೆ. ಸಿಲಾವರ ಸಾಮಾನದ ವ್ಯಾಪಾರ ಮಾಡತಾರೆ; ಈ ಸ್ಮಯೋರ ಕಂಪನಿ (ಸಂಡೂರಿನ ಕಬ್ಬಿಣದ ಅದಿರಿನ ಕಾರ್ಖಾನೆ-ಸಂ.)ಯಲ್ಲಿದ್ದಾರ. 'ಇದು ಭಿಕ್ಷೆ ಬೇಡತಕ್ಕಂಥ ಹೀನ ಕೆಲಸ' ಅಂತ ಅಂದಕೊಳ್ತಾರೆ.

ಸಂ: *ಹೊಸ ತಲೆಮಾರಿನಲ್ಲಿ ಈ ಅಭಿಪ್ರಾಯವಿದ್ರೆ, ಅದು ಸರಿ ಅಂತ ಅನಸಲ್ವಾ?*

ಮು: ಖಂಡಿತಾ ಸರಿ.. ಯಾರಲ್ಲಂತಾರ? ಅದು ಹೊಟ್ಟಿ ತುಂಬುದು ಸಾಧ್ಯ ಇಲ್ಲ. ಭಿಕ್ಷೆ ಬೇಡಾದು ಬೇಡ ಅಂತಕ್ಕಂಥ ಆತ್ಮಾಭಿಮಾನ ಏನು ಇದೆ, ಅದನ್ನ ಗೌರವಿಸಬೇಕು. ಅವರು ಹಂಗ ಇರ್ಲಿ, ಅವರ ಕಲೆ ಉಳೀತೈತಿ ಅಂತ ಅಲ್ಲ. ಆ ಕಲೆಯನ್ನ ತಗೊಂಡು ನಾವು ಬೇರೆ ರೀತಿಯಲ್ಲಿ ದುಡಿಸಿಕೊಳ್ಳೋಣ. ಉದಾ: ಕಂಬಾರರರ 'ಜೋಕುಮಾರಸ್ವಾಮಿ' ಅದರಾಗೆ ಮೊದಲಿನ ಪ್ರಸಂಗ ಪನ ಬರ್ತದಲ್ಲ, 'ನಿಮ್ಮ ದೇವರು ಪನ ಕರ್ಕಿ ಪತ್ರೀನ...' ಅದು ಪಾರಿಜಾತದೊಳಗಿಂದು. ಅದನ್ನು ಅವರು

ಬಳಸಿಕೊಂಡಾರ ತಮ್ಮದೇ ಆದ ರೀತಿಯಲ್ಲಿ.

ಸಂ: *ಜಾನಪದವನ್ನು ಆಧುನಿಕ ಲೇಖಕರು ಮರುಸೃಷ್ಟಿಗೆ ದುಡಿಸಿಕೊಳ್ಳುವ ಹಾಗೂ ಅದನ್ನ ಹಾಗಾಗೇ ಬಳಸಿಕೊಳ್ಳುವವರ ಬಗ್ಗೆ ಕನ್ನಡದಲ್ಲಿ ಗೊಂದಲ ಇದ್ದಂತಿದೆ.*

ಮು: ಬೇರೊಂದು ರೂಪಕೊಟ್ಟು ಬಳಸತಕ್ಕಂತಾದ್ದು ಏನಿದೆ ಅದನ್ನ ಮೆಚ್ಚತಕ್ಕದ್ದು. ಯಥಾವತ್ತಾಗಿ ತಗೊಂಡು ತಮ್ಮ ಹೆಸರ ಏನ ಹಾಕ್ಕೊಳ್ತಾರೆ, ಇದು ಸಾಹಿತಿಗಳು ಮಾಡಬೇಕಾದ ಕೆಲಸಲ್ಲ. ಉದಾ: ಕಂಬಾರರು 'ಸಂಗ್ಯಾ ಬಾಳ್ಯಾ' ಸಂಗ್ರಹ ಮಾಡಿ ಪ್ರಕಟಣ ಮಾಡಿದರು. ಜೊತೆಗೆ ಕೀರ್ತಿನಾಥ ಕುರ್ತಕೋಟಿ ಹೆಸರು ಕೂಡಾ ಇದೆ.

ಸಂ: *ಇಲ್ಲಿ ಇನ್ನೊಂದು ಸಮಸ್ಯೆ ಇದ್ದಂತಿದೆ. ಸಂಗ್ರಾಹಕರಲ್ಲಿ ನಾಗರಿಕ ಜಗತ್ತಿಗೆ ಗೊತ್ತಿರದಿದ್ದನ್ನು ಕೊಡಬೇಕು ಅನ್ನೋ ಮನೋಭಾವವೇ ಮುಖ್ಯವಾಗಿದೆ. ಕಲೆಯನ್ನು ಸೃಷ್ಟಿಸುತ್ತಾ ಅದರಲ್ಲಿ ಬದುಕುತ್ತಾ ಇರೋ ಸಮುದಾಯಕ್ಕೆ, ಆ ಕಲೆಯ ಜೊತೆಗಿನ ಸಂಬಂಧಗಳು ಬದಲಾಗ್ತಾ ಇರೋ ಸಂಗತಿಯನ್ನು ಗಮನಿಸ್ತಿಲ್ಲ. ಅಮುಖ್ಯವಾಗಿದೆ.*

ಮು: ಬಳಸಿಕೊಳ್ಳೋರು ಕೂಡ ಯಾವುದೋ ಒಂದು ಫಾರಮ್ಮನ್ನ ಇಡಿಯಾಗಿ ಬಳಸಿಕೊಳ್ಳತಾ ಇಲ್ಲ. ಇದನ್ನಷ್ಟು ಅದನ್ನಷ್ಟು ತಗೊಂಡು ಮಿಸಳಭಾಜಿ ಅಂತಾರಲ್ಲ, ಅದು ಯಾವುದೂ ಒಂದು ನೆಲೆಗೆ ತಲುಪೋದಿಲ್ಲ. ಆ ಕಡಿಗೆ ಮಂಟೇಸ್ವಾಮಿ ಪದನೂ ಬಳಸತಾರೆ, ಈ ಕಡಿಗೆ ವೀರಭದ್ರ ದೇವರ ಒಡಪುಗಳ ರೀತಿಯನ್ನೂ ಬಳಸತಾರೆ. ಒಂದು ಕಲೆಗೆ ನ್ಯಾಯ ಒದಗಿಸಿ ಕೊಟ್ಟಂಗ ಆಗೋದಿಲ್ಲ. ಆ ಕಲೆಗಳನ್ನು ಪುನರುಜ್ಜೀವಿಸಬೇಕು. ಅವನ್ನ ಹೊಸ ರೀತಿಯಲ್ಲಿ ದುಡಿಸಿಕೊಳ್ಳೋದಕ್ಕ ಮೊದಲು, ಅದರಲ್ಲಿ ಏನ ಸಾಧ್ಯತೆ ಇದೆ, ಏನ ಪರಿಮಿತಿ ಇದೆ ಅನ್ನೋದನ್ನ ಚಿತ್ತ ಸಮಾಧಾನದಿಂದ ಯೋಚನೆ ಮಾಡಿ, ಬಲ್ಲಂಥವರು, ಅದರ ಫಾರಂ ಏನದ ಅನ್ನೋದನ್ನ ಕಂಡುಕೊಂಡು, ಸೃಷ್ಟಿಮಾಡಿದರ ಅದಕ ಅರ್ಥ ಇರತದ.

ಸಂ: *ಬೇಂದ್ರೆ ಕಾವ್ಯ ಜಾನಪದದ ಅರ್ಥಪೂರ್ಣ ಬಳಕೆ ಅನ್ನಬಹುದಾ?*

ಮು: ಹೌದು, ಅದರ ಸತ್ವ ಹೀರಿಕೊಂಡು ತಮ್ಮದನ್ನಾಗಿ ಮಾಡಿಕೊಂಡು, ಸ್ವಂತಿಕೆಯ ಮುದ್ರಿ ಒತ್ತಿದಾರ ಅವರು.

ಸಂ: *ಓದುಗರಾಗಿ ಕಾರಂತ - ಕುವೆಂಪು - ಬೇಂದ್ರೆಯವರಲ್ಲಿ ನಿಮಗೆ ಹಿಡಿಸಿದ ಸಂಗತಿಗಳ್ಯಾವುವು ?*

ಮು: ಕಾದಂಬರಿಗಳನ್ನ ತಗೊಂಡ್ರ ಕಾರಂತರು. ಪದ್ಯಗಳನ್ನು ತಗೊಂಡ್ರ ಬಹುಮಟ್ಟಿಗೆ ಜನರಿಗೆ ನಿಲುಕತಕ್ಕಂತಹ ಬೇಂದ್ರೆಯವರು ಅದ್ಭುತ ರಸದೃಷ್ಟಿ ಮತ್ತು ಪ್ರೌಢವಾಗಿ ಬರದಂಥ ಪುಟ್ಟಪ್ಪನವರು, ನನಗೆ ಹತ್ತಿರದವರಾಗಿ ಕಂಡರು.

ಸಂ: *ಕುವೆಂಪು ಕಾದಂಬರಿಗಳು ಪ್ರಿಯವಾಗಲಿಲ್ಲವಾ ?*

ಮು: ಇಲ್ಲ. ೧೯೫೯ನೇ ಇಸ್ವಿಯಲ್ಲಿ 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ನಾ ಓದಿದ್ದೆ ಅಷ್ಟೆ. ಮತ್ತ ಓದಲಿಲ್ಲ.

*ಸಂ: 'ಜಾನಪದವನ್ನ ರಕ್ಷಣೆ ಮಾಡಬೇಕು. ಇದು ನಾಶವಾಗ್ತಾ ಇದೆ' ಅನ್ನೋ ಹಳಹಳಿಕೆ ನಿಮ್ಮೆಲ್ಲ ಸಂಗ್ರಹಗಳ ಮುನ್ನುಡಿಗಳಲ್ಲಿ ಕೆಲಸಮಾಡಿದೆ. ಇದು ಕನ್ನಡದಲ್ಲಿ ಬಹಳ ಪ್ರಚಲಿತವಾಗಿರೋ ಒಂದು ಮನೋಭಾವ. ಈಗ ನಿಮ್ಮ ನಿಲುವನ್ನು ಬದಲಾಯಿಸಿಕೊಳ್ಳಬೇಕು ಅಂತ ಅನಿಸಿದೆಯಾ?*

ಮು: ಯಥಾವತ್ತಾಗಿ ಅದನ್ನ ರಕ್ಷಿಸಬೇಕು ಅಂತ ನನಗನಸೋದಿಲ್ಲ. ಇಂದಿನ ಅಗತ್ಯಕ್ಕೆ ತಕ್ಕಹಾಗೆ ಸದಭಿರುಚಿಯನ್ನು ಮೂಡಿಸೋ ರೀತಿಯಲ್ಲಿ,ಅದನ್ನ ಒಂದು ಮಾಧ್ಯಮ ವಾಗಿ ದುಡಿಸಿಕೊಳ್ಳೋದಕ್ಕೆ ಅವಕಾಶ ಇದೆ.

*ಸಂ: ಈ ಜನಪದ ಸಾಹಿತ್ಯ ಕಲೆ ಹುಟ್ಟಿ ಬೆಳೆದು ಬದುಕ್ತಾ ಇರೋ ಸಮಾಜದಲ್ಲಿ ಜಾತಿ ವ್ಯವಸ್ಥೆ ಇವೆ. ಫ್ಯೂಡಲಿಸಂ ಇದೆ, ಹೆಣ್ಣನ್ನು ಕೀಳಾಗಿ ನೋಡುವಂಥ ಪ್ರವೃತ್ತಿ ಇದೆ. ಇದರ ಮೇಲೆ, ನಿಮ್ಮ ಮುನ್ನುಡಿಗಳಲ್ಲಿ ಯಾವುದೇ ವಿಮರ್ಶೆಯಿಲ್ಲ. ಈ ದೃಷ್ಟಿಕೋನ ನಮ್ಮ ಸಮಾಜವನ್ನು ಅರ್ಥ ಮಾಡಿಕೊಳ್ಳೋಕೆ ತೊಡಕಲ್ಲವಾ?*

ಮು: ನನಗೆ ಹಾಗೆ ಅನಿಸಿಲ್ಲಾ. ನಮ್ಮ ಪರಂಪರೆಯನ್ನ, ನಮ್ಮ ನಿನ್ನೆಯನ್ನ, ಸಹಾನುಭೂತಿಯಿಂದ ಕಾಣದೆ ನಾವು ಇವತ್ತು ಪ್ರಸ್ತುತಗೊಳಿಸಲಿಕ್ಕೆ ಏನ ಸಾಧ್ಯ? ಅನ್ನೋದು ನೋಡಬಹುದಾದಂಥ ರೀತಿ.

*ಸಂ: ನಿಮ್ಮ ಚಿಂತನೆಗಳಲ್ಲಿ ಎಲ್ಲೂ ವಚನಕಾರರ ಸುಳಿವು ಇಲ್ಲ. ಲಿಂಗಾಯತ ಸಮಾಜದ ಜೊತೆಗೆ ನಿಮ್ಮ ಸಂಬಂಧಗಳ ಬಗ್ಗೆ ಕುತೂಹಲವಿದೆ.*

ಮು: ನನ್ನ ಪ್ರದೇಶದಲ್ಲಿ ಎರಡು ವಿಧ ಇದೆ, ಗುರುಸ್ಥಲ ವಿರಕ್ತಸ್ಥಲ ಅಂತ. ಉಜ್ಜನಿ ಹತ್ತಿರ ಇರೋದರಿಂದ ನಮ್ಮ ಭಾಗದಲ್ಲೆಲ್ಲ ಈ ಗುರು ಪರಂಪರೆ ಪ್ರಾಧಾನ್ಯತೆ ಹೆಚ್ಚು. ನಮ್ಮ ಭಾಗದಲ್ಲಿ ನಾನು ೧೯೫೮ರಲ್ಲಿ ಮೊದಲನೆ ಸಾರಿ ಬಸವ ಜಯಂತಿ ಮಾಡಿದೆ. ನನ್ನ ಜಾತಿಯವರು ವಿರೋಧ ಮಾಡಿದರು. ಇಷ್ಟೆಅಲ್ಲ, 'ಬಸವಪುರಾಣ'ದ ಜೊತೆಗೆ ಹಳೆ ಮೂಗಹರಕ ಚಪ್ಪಲಿ ಇಟ್ಟು, ಸುಟ್ಟಿದ್ದರಂತ. ಅದಕ ಕಾರಣ ಅಂದರೆ ಬಸವಣ್ಣ ಮಾದಿಗರ್ನ, ಎಲ್ಲಾರನ್ನೂ ಏಕ ಮಾಡಿದ. ನಾನು-ಅ.ನ.ಕೃಷ್ಣರಾಯರು ಸಂಪಾದಿಸಿದ 'ಮರುಳ ಸಿದ್ಧಕಾವ್ಯ' ಮೊದಲು ಕೊಂಡು, ನನ್ನ ಊರಿನ ಲೈಬ್ರರಿಗೆ ಕೊಟ್ಟಿದ್ದೆ. ಅದನ ತಗೊಂಡು ಒಲಿ ಉರಿ ಹಚ್ಚಿದ್ದು ಗೊತ್ತಾತು ನಮಗ ಆಮ್ಯಾಲೆ. ಇಷ್ಟು ವಿರೋಧ ಇದ್ದ ಜಾಗ ಇದು.

*ಸಂ: ಈ ಭಾಗದಲ್ಲಿ ಶರಣ ಚಳುವಳಿಯ ಪ್ರಭಾವ ಇಲ್ಲದಿರೋದಕ್ಕೆ ಇನ್ನೇನು ಕಾರಣ ಇರಬಹುದು?*

ಮು: ಮುಖ್ಯ ಕಾರಣ ಅಂದ್ರೆ, ಗುರುಸ್ಥಲದ್ದು. ಪಂಚಾಚಾರ್ಯರದ್ದು ಇಲ್ಲಿ ಭಾಳ ಇತ್ತು. ಅವಕ ನಡಕೊಳ್ಳತಕ್ಕಂತಹ ಮಠಗಳಿದ್ದವು. ಮಡಿವ್ಯಾಲಿಗೆ ಭಾಳ ಇತ್ತು. ಲಿಂಗಾಯತರಲ್ಲಿಯ ಒಳ ಪಂಗಡಗಳಲ್ಲಿಯೇ ಪರಸ್ಪರರಲ್ಲಿ ಊಟ ಮಾಡ್ತಿದ್ದಿಲ್ಲ. ನಾವು ಪಂಚಮಸಾಲಿ. ನಮ್ಮೂರಿನ ಲಿಂಗಾಯತ ನೇಕಾರರ ಮನೆಯಲ್ಲಿ ಊಟ ಮಾಡಿದ್ದಕ್ಕೆ ಐದು ಪಾವಲಿ ನಮ್ಮಪ್ಪಗ ಜುಲ್ಮಾನೆ ಹಾಕಿದ್ದರು.

*ಸಂ: ಶರಣರ ಪ್ರಭಾವ ಈ ಭಾಗದಲ್ಲಿ ಕಡಿಮೆ ಅಂದ್ರಿ. ಆದರೆ ಬಸವಣ್ಣನವರನ್ನು ಕುರಿತು ಜನಪದರು ಎಷ್ಟೊಂದು ಹಾಡಿದ್ದಾರಲ್ಲ?*

ಮು: ಹಾಂ, ಬಸವಣ್ಣನ ಹೆಸರೆ ಈ ಎತ್ತಿಗೂ ಸಮೀಪಿಸಿಕೊಂಡಿದೆ ಕನ್ನಡದಲ್ಲಿ. ಎತ್ತು ಬದುಕಿನ ಕಾರ್ಯಕ್ಕೆ ಹತ್ತಿರ ಆಗಿರೋದ್ರಿಂದ ಬಸವಣ್ಣರ ಜನಪ್ರಿಯತೆ ಸಾಮಾಜಿಕವಾಗಿ ಹೆಚ್ಚಾತೇನೋ ಅಂತ ನನಗನಿಸತದ. ಶರಣ ಪಂಥಕ್ಕೆ ಸೇರಿದವರನ ಬಿಟ್ಟು ಕೂಡಾ ಬಸವಣ್ಣ ಯಾಕ ಜನಸಾಮಾನ್ಯರ ಬಾಯಲ್ಲಿದ್ದಾನೆ. ಅಂದರೆ, ಆ ಕೃಷಿಗೆ ಬಳಸತಕ್ಕಂತಹ ಎತ್ತು. ಬಸವ ಜಯಂತಿ ದಿನ ಎತ್ತಿನ ಮೆರವಣಿಗೆನ ಹೊರಡಸತಾರ.

*ಸಂ: ನಮ್ಮ ಜಾನಪದ ವಿದ್ವಾಂಸರಲ್ಲಿ ಯಾರ ವಿಧಾನ ನಿಮಗೆ ಮುಖ್ಯವಾದುದು?*

ಮು: ಸಂಗ್ರಹ ಮಾಡೋದಕ ಅಂದರ ನಾಗೇಗೌಡರ ಮೊದಲಿಗರಾಗತಾರಿ.

*ಸಂ: ಜಾನಪದಾನ ಅಧ್ಯಯನ ಮಾಡತಾ ಇರೊ ಸ್ಕಾಲರ್ಸ್ ಬಗ್ಗೆ ಕೇಳಿದೆ.*

ಮು: ನನಗೆ ವೀರಣ್ಣ ದಂಡೆ ಅನಿಸ್ತು, ಆಮ್ಯಾಲೆ ಹಿ.ಶಿ.ರಾಮಚಂದ್ರೇಗೌಡರು. ಹಿಶಿ ಅವರಲ್ಲಿ ಸ್ವಲ್ಪ ನೆಗಟಿವ್ ಆಟಿಟ್ಯೂಡ್ ಬರ್ತಾವ. ನಾವು ಜಾನಪದವನ್ನ ಜಾನಪದವಾಗಿಯೇ ನೋಡಬೇಕಾಗ್ತದ. ಇಂಥದ್ದ ಅದರಲ್ಲಿ ಬೇಕು ಅಂತ ಹುಡುಕಲಿಕ್ಕೆ ಹೋದರ ಸಿಗೋದಿಲ್ಲ.

*ಸಂ: ನೀವೊಂದು ಮಾತು ಹೇಳಿದ್ರಿ, ಬದಲಾದ ಕಾಲಕ್ಕೆ ಜಾನಪದವನ್ನು ಹೊಸರೂಪದಲ್ಲಿ ಬಳಕೆ ಮಾಡಬೇಕು ಅಂತ. ಆದರೆ ಆ ಬಳಕೆ ಮಾಡ್ತಿರೋ ಶಕ್ತಿಗಳಲ್ಲಿ ಬೇರೆಬೇರೆ ಇವೆ. ಉದಾ: ಮಾರುಕಟ್ಟೆಶಕ್ತಿಗಳು.*

ಮು: ಜಾನಪದ ಪ್ರಕಾರಗಳು ಅಗಣಿತವಾಗಿರತಕ್ಕಂಥವು. ಅವೆಲ್ಲವೂ ಇವತ್ತು ಸುಸಂಗತವಾಗಿರಲಾರವು. ಅವರಲ್ಲಿ ಬಹಳಷ್ಟು ಆರಾಧನೆಗೆ ಹೊಂದಿಕೊಂಡಂಥವು. ಕಲಾತ್ಮಕವಾಗಿ ಉಳಿಬೇಕಾದಂಥವು ಕೆಲವು.(ಮರೆತಂತಾಗಿ)..ನೀವೇನ ಪ್ರಶ್ನೆ ಕೇಳಿದ್ರಿ?

*ಸಂ: ಕಲೆ - ಆಚರಣೆ - ಸಾಹಿತ್ಯವನ್ನು ಬಳಕೆ ಮಾಡೋಕೆ ತಯಾರಾಗಿರೋ ಶಕ್ತಿಗಳು ಬೇಂದ್ರೆ ತರಹ ಸೃಜನಶೀಲ ಶಕ್ತಿಗಳು ಮಾತ್ರ ಇಲ್ಲ ಅಂದೆ.*

ಮು: ಅಲ್ಲರಿ, ಇದು ಹುಟ್ಟಿಕೊಂಡದ್ದೂ ಬದುಕ ಬೇಕಾದದ್ದೂ ಸಮೂಹದ ಮಧ್ಯದಲ್ಲಿ. ಜನರಿಗೇ ಬ್ಯಾಡಾದವನ್ನ ನಾವೇನ ಮಾಡಿ ಉಳಿಸೋದಕ ಸಾಧ್ಯ?

ಸಂ: *ಇತ್ತೀಚೆಗೆ ನೀವು ಕವಿತೆಗಳನ್ನು ಬರೀತಾ ಇದ್ದೀರಿ..*

ಮು: ಮೊವಲೆಲ್ಲಾ ನಾನು ಕವಿತೆಗಳನ್ನs ಹೆಚ್ಚು ಬರದಾಂವ್ನ. ಮೊದಲನೆ ಕವಿತೆ ೪೬ನೇ ಇಸ್ವಿಯಲ್ಲಿ 'ಜಯಂತಿ'ಯಲ್ಲಿ ಬಂತು. ಈ ಜಾನಪದದ ಅಮಲು ತಲೆಗೆ ಹತ್ತಿದ ಮ್ಯಾಲೆ, ಆ ಕಡಿಗೆ ಲಕ್ಷ್ಯ ಕೊಡಲಿಲ್ಲ. ಆ ಮಧ್ಯದಲ್ಲಿ ಬಂಗಾಲಿ, ಮರಾಠಿ ಕಲಿಲಿಕ್ಕಿ ಚಾಲೂ ಮಾಡಿದೆ. ನನ್ನ ವ್ಯಾಪಾರಿ ಅಡ್ಡಾಟಗಳಿದ್ದವು. ನಾನೀಗ ಏಕಾಕಿ. ಕಾವ್ಯದ ಒಡನಾಟದಲ್ಲಿ ನನ್ನನ್ನು ನಾನು ತುಂಬಿಕೊಳ್ಳಿಕ್ಕೆ ಚಾಲೂಮಾಡಿದೇನೆ.

ಸಂ: ಸೂಫಿಸಂಗೀತ ಅಧ್ಯಯನ ಮಾಡಿದೀರಿ. ಇದರ ಹಿನ್ನೆಲೇಲಿ ಕರ್ನಾಟಕದ ಸಂಸ್ಕೃತಿಯನ್ನು ನೋಡೋಕೆ ಸಾಧ್ಯವಾ?

ಮು: ಬಹುಮಟ್ಟಿಗೆ ನನಗೆ ಅನಸೋದು, ಬಳ್ಳಾರಿ ಜಿಲ್ಲೆಯ ಮುಸಲ್ಮಾನರ ಒಡನಾಟಂತಲೆ ಅನ್ನೋನು. ನೇರವಾಗಿ ಇಲ್ಲಿನ ಗೋಡೆ ಕಟ್ಟಿಕೊಂಡು ಇರೋದಾಗಿಲ್ಲ. ಮೊಹರಂ ಹಬ್ಬಗಳನ್ನು ನಮ್ಮನೆಯಲ್ಲಿ ಆಚರಣೆ ಮಾಡತಾ ಇದ್ದ ನೆನಪದೆ ನನಗೆ. ನಮ್ಮ ಅಜ್ಜಿ ಮನೆಯಲ್ಲಿ ತಗಣಿ ಜಾಸ್ತಿಯಾದಾಗ ಒಂದನಾಕ ಗಿದ್ನ ಹುಳ್ಳಿ ಒಯ್ದು ಅಲಾಬಿ ಕೆಂಡದಲ್ಲಿ ಹಾಕಸತಿದ್ದಳು. ಉಳ್ಳಿ ಆಕಾರಕ ಇರತಾವ ತಗಣಿ. ಮನೆಯಲ್ಲಿದ್ದವು. ಸಾಯತಾವೆ ಅಂತ. ಫಕೀರಪ್ಪ ಅಂತ ಹೆಸರಿಡತಿದ್ದರು. ಫಕೀರಯ್ಯ ಅಂತ ಜಂಗಮರು ನಮ್ಮಲ್ಲಿದ್ದರು. ಈಗಲೂ ಕೆಲವು ಊರುಗಳಲ್ಲಿ ಮುಸಲ್ಮಾನರದು ಒಂದೇ ಮನಿ ಇದ್ದರೆ, ಆ ದೇವರ್ನ ಹೊರತಕ್ಕಂಥವರು ಎಲ್ಲರೂ ಹಿಂದುಗಳೇ ಇದಾರೆ. ಯಾರು ಒಕ್ಕಲತನದ ಸಂಪರ್ಕದಲ್ಲಿರ್ತಾರೆ ಅಲ್ಲಿ ಜಾತಿ ಕೆಲಸ ಮಾಡೋದು ಇಲ್ಲ.

ಸಂ: ಅಂದರೆ ಈ ಜಾತಿಪದ್ಧತಿಯ ಕ್ರೌರ್ಯಗಳು ಈಗಲೂ ರಿಪೋರ್ಟಾಗ್ತಾ ಇರೋದು ಫ್ಯೂಡಲಿಸಂ ಇರೋ ಒಕ್ಕಲುತನದ ಹಳ್ಳಿಗಳಲ್ಲಿ.

ಮು: Feudalisn ಇದ್ದೆ ಇತ್ತು. ಅವಾಗ ಈಗಿಂತ ಹೆಚ್ಚು ಬಡತನವಿತ್ತು ಮತ್ತು ಜಾಗ್ರತಿ ಇರಲಿಲ್ಲ. ದಲಿತ ವರ್ಗಗಳಲ್ಲಿ ನಾಕ ರೂಪಾಯಿ ಸಂಬಳದಲ್ಲಿ ಏನನ್ನೆಲ್ಲ ಕಳಿಬೇಕಿತ್ತವರು. ಸಂಬಳದ ಆಳುಗಳಲ್ಲಿ ಅಂದರೆ ಅವರೆ, ಈ ಕಾರ್ಯಗಳಲ್ಲಿ ಕೈ ಮುಟ್ಟಿ ಕೆಲಸ ಮಾಡತಕ್ಕಂತವರು ಕೂಡೊಕ್ಕಲಾಗಿ ಒಂದಾಗಿ ಕೆಲಸ ಮಾಡತಿದ್ದರು. ಎಲ್ಲಾ ಕೈಗಳು ಸೇರಿ ಅಲ್ಲಿ ಕುಲದ ಪ್ರಶ್ನೆ ಬರತಿರಲಿಲ್ಲ ಆ ಅರ್ಥದಲ್ಲಿ

ಸಂ: *ಆದರೆ ಆರ್ಥಿಕವಾಗಿ ಭಿನ್ನತೆ ಇತ್ತು.*

ಮು: ಖಂಡಿತಾ ಇತ್ತು

ಸಂ: *ಜಾನಪದದಲ್ಲಿ ನಮ್ಮ ಚೈತನ್ಯಕ್ಕೆ ಬೇಕಾದ ಸಂಗತಿಗಳು ಇರೋ ಹಾಗೆ ನಾವು ಆಧುನಿಕವಾಗಿ ಒಪ್ಪಲಾಗದ ಸಂಗತಿಗಳಿವೆಯಂತ ಅನಸಲ್ವಾ ನಿಮಗೆ?*

ಮು: ಯಾವಾಗಲೂ ಜಾನಪದ ಅಂದರೆ, ಬರೀ ಜುಳು -ಜುಳು ಹರೀತಕ್ಕಂಥಾ ತಿಳಿನೀರಿನ

ಒಂದು ಪ್ರವಾಹ ಅಂತ ನಾವಂದಕೊಳ್ಳೋದು ಯಾಕ? ಅದು ಮಹಾಪ್ರವಾಹ ಅದರಲ್ಲಿ ಕಸಕಡ್ಡಿಕೊಳಚೆ ಎಲ್ಲಾ ಇರತದ. ಅದರಲ್ಲಿ ಬೇಡಾದದ್ದು ತಗಿಯೋದ ಬಹಳಷ್ಟು ಅದ. ಹೇಳಬೇಕು ಅಂದರೆ ಶರಣರ ವಚನಗಳಲ್ಲಿ ಸಾಕಷ್ಟು ಅಸಂಬದ್ಧಗಳಾದವು.

*ಸಂ: ನಿಮ್ಮ ಸೀಮೆಯ ಜನಪದ ಕತೆಗಾರ-ಹಾಡುಗಾರರ ಬಗ್ಗೆ ಹೇಳಿ.*

ಮು: ಪನ್ನಿತಿರಕಪ್ಪ ಅಂತಂದ ಹೇಳಿ ಅದ್ಭುತ ಕಥೆಗಾರ ಬಹಳ ಚೆನ್ನಾಗಿ ಹೇಳತಿದ್ದ. ಸೀದಾ ನಮ್ಮ ಮನಃಪಟಲದ ಮ್ಯಾಲೆ ನಾಟಕ ನಡೆದಂಗ ಆಗಬೇಕು. ತಾಳಮದ್ದಳೆ ಪ್ರಸಂಗಾನ ಹಲವರು ಸೇರಕೊಂಡ ಮಾಡಿದರೆ, ಇವನೊಬ್ಬನ ಅದನ ಎಲ್ಲ ಮಾಡತಿದ್ದ, ಹಾಡ ಇದ್ದಿಲ್ಲ ಅಷ್ಟೆ. ಒಂದೊಂದು ಪಾತ್ರಕ್ಕೂ ವಿಶಿಷ್ಟವಾದಂಥ ಮುದ್ರಿ ಒತ್ತುತ್ತಿದ್ದ ಕಥೆಗಾರ.

*ಸಂ: ಅದನ್ನ ಸಂಗ್ರಹ ಮಾಡಿದಿರಾ?*

ಮು: ಮಾಡಿದೆ. ಮಾಡಿ ಎ.ಕೆ. ರಾಮಾನುಜನ್‌ಗೆ ಕಳಿಸಿಕೊಟ್ಟೆ. ೩೭ ಡಾಲರ್ ರೊಕ್ಕ ಕಳಿಸಿದರು. 'ರಸದಾಳರಾಜ' ಅಂತ ಒಬ್ಬ ರಾಜನ ಕತೆ. ನಾಲ್ಕು ಗುಟೆ ಎಸ್ಟ್ರಾಕ್ಟ್ ಮಾಡದು, ಹಾಡೋದು, ಮಾತ ಎಲ್ಲಾ ಬರತದಲ್ಲ ಅದರೊಳಗ.

*ಸಂ: ಜನಪದ ಪ್ರತಿಭೆ ಒಂದು ಕಥೆಯನ್ನ ಹಾಡಾಗಿ, ನಾಟ್ಯವಾಗಿ ಪರಿವರ್ತನೆ ಮಾಡ ಬಲ್ಲದು....*

ಮು: ಗದ್ಯವಾಗಿ ನಿರೂಪಿಸಬಲ್ಲದು.

*ಸಂ: ಅಂದರೆ ಇಲ್ಲಿ ಸಂಗೀತ, ಥಿಯೇಟರ್ ಅನ್ನೋದು ಕಥೆಯೊಳಗೆ, ಕಥೆ ಅನ್ನೋದು ಮ್ಯೂಸಿಕ್ ಹಾಗೂ ನಾಟಕೀಯತೆಯೊಳಗೆ, ಒಟ್ನಲ್ಲಿ ಬಹುರೂಪಿಯಾದ ಆಯಾಮ ಗಳೆಲ್ಲ ಒಂದು ಪಠ್ಯದ ಏಕೀಕೇಂದ್ರದಲ್ಲಿಯೇ ಇರಬಲ್ಲವು.*

ಮು: ಅದರ ಕಾರಣ ಅಂದರ ಒಬ್ಬ ವ್ಯಕ್ತಿ ಮನೆಯಲ್ಲಿ ಕಲಾವಿದ ಅಲ್ಲ. ಕಥಾ ರೂಪದಲ್ಲಿ ಅಜ್ಜಿ ಇದನ್ನ ಹೇಳತಾಳ. ಗೊಂದಲಿಗರು ಅಥವಾ ಕಿನ್ನರ ಜೋಗಿಗಳು ಅದನ್ನ ನಿರೂಪಣೆ ಮಾಡತಾರ ರಾತ್ರಿಯೆಲ್ಲಾ. ಈ ಬೇರೆ ಬೇರೆ ವಾದ್ಯಗಳನ್ನ ಬಳಸದಿದ್ರ ಅವರು ಇಷ್ಟು ಜನರು ಬರೀ ಕಟಗೊಂತ ಇರಬಾರದಂತ ಅವರಿಗೆ ಸಂದರ್ಭ ಬಂದಾಗ ಅವರೆಲ್ಲರೂ ಒಂದೊಂದು ಪಾತ್ರವಾಗಿ ನುಡಿತಾರೆ. ಇದೇ ಟೈಮಿನಲ್ಲಿ ಹಿಂದೆ ಹಿಮ್ಮೇಳಾಗಿ ಅವರು ಹಾಡತಾರೆ

*ಸಂ: ಯಕ್ಷಗಾನಗಳನ್ನೂ ನಮ್ಮ ದೊಡ್ಡಾಟಗಳನ್ನು ನೋಡಿದ್ದೀರಿ. ದೊಡ್ಡಾಟಗಳು ಸೊರಗಿದ ಹಾಗೆ ಕಾಣತವೆ. ಕಾರಣ ಏನು?*

ಮು: ಕಾರಣ ಅಂದರೆ, ಯಕ್ಷಗಾನಕ್ಕೆ ವೃತ್ತಿಪರತೆ ಇದ. ಮತ್ತು ದೇವಸ್ಥಾನದ ಸಂಪರ್ಕ

ಇದಾವ. ಆ ಚಿಟ್ಟಾಣಿ ರಾಮಚಂದ್ರ ಅನ್ನುತನಿಗೆ ಒಂದು ಸೀಜನ್ನಿಗೆ ೫೦ ಸಾವಿರ ಕೊಡತಾರೆ. ಇಲ್ಲಿ ಉಮೇದಿಗೆ ೨೦ ದಿವಸ ಕಲ್ತು ಆಡಿಬಿಡ್ತಕ್ಕಂಥವರು, ಅದರಲ್ಲಿ ಈ ವೃತ್ತಿಪರತೆಯನ್ನು ಕೃತಿಶುದ್ಧತೆಯನ್ನು ನೀವು ಲೆಕ್ಕಕ್ಕೆ ತಗೊಳ್ಳೋ ಹಾಗಿಲ್ಲ. ಹಾಡುವಾತ ಭಾಗವತ ಒಬ್ಬಾತ್ನ ಇದ್ದುದರಲ್ಲಿ ವಾಸಿ. ಬಯಲಾಟದ ಪ್ರೇಕ್ಷಕರು ಊರಿನವರು ನಟರ ಸಂಬಂಧಿಕರು. ಪಾತ್ರದವನು ಇನ್ನ ಬಾಯನ, ತಗೆದಿರಲಿಲ್ಲ ಅವನಿಗಾಗಲೇ ಆಹೆರ ಕೊಡಲಿಕ್ಕೆ ಚಾಲೂನೆ.

ಸಂ: *ಆದರೆ 'ಕೃಷ್ಣಪಾರಿಜಾತ' ತೊಗಲುಗೊಂಬೆ ಆಟಕ್ಕೆ ವೃತ್ತಿಪರತೆ ಇದೆ.*

ಮು: ಹೌದೌದು. ಖಂಡಿತಾ ಅದು ಹುಟ್ಟಿದ್ದ ಆ ರೀತಿಯಾಗಿ. ಇದು ಬರೇ ಉಮೇದಿಗೆ. ಅದು ವೃತ್ತಿಪರತೆ ಅನ್ನೋದಕ್ಕಿಂಥ ಅನುವಂಶಿಕ ನಿರ್ದಿಷ್ಟ ಜಾತಿಯವರೇ ಮಾಡ ತಕ್ಕದ್ದು. ಗೊಂದಲಿಗರದ್ದು ಆಗಲಿ, ಕಿನ್ನರಿ ಜೋಗಿಗಳದ್ದು ಆಗಲಿ ಮಂಟೇ ಸ್ವಾಮ್ಯಾರದ ಆಗಲಿ ಅದಕ ಮೀಸಲಾದಂಥದ್ದು

ಸಂ: *ದೊಡ್ಡಾಟ ನಶೀಸಲಿಕ್ಕೆ....*

ಮು: ಒಳಗೇನೆ ಕಾರಣ ಅದಾವ. ಅಂತಹ ಅಚ್ಚ ಬಯಲಾಟದ ಕಥೆಗಳು ಹಳೆವ ನೋಡಿದರೆ ಅವು ಅತ್ಯಂತ ಹಳೆಗನ್ನಡ ಭೂಯಿಷ್ಠವಾಗಿಯೇ ಇದ್ದಾವ.

ಸಂ: *ನಿಮ್ಮ 'ಚಿಗಟೇರಿ ಪದಕೋಶ' ಇದೆ. ಗ್ರಾಮೀಣ ವಿಶಿಷ್ಟ ಪದಗಳನ್ನು ಸಂಗ್ರಹಿಸಿ ಪ್ರಕಟಿಸೋದಕ್ಕ ಒತ್ತಡ ಏನು?*

ಮು: ಅದು ಮುಖ್ಯವಾದ ಪ್ರಶ್ನೆ. ನನಗಿದ್ದದ್ದು ಇಡೀ ಬಳ್ಳಾರಿ ಜಿಲ್ಲೆದು ಪದಕೋಶ ಸಂಗ್ರಹ ಮಾಡದು, ಆಮೇಲೆ ಬಳ್ಳಾರಿದಲ್ಲ, ನಮ್ಮ ಭಾಗದ್ದ ಮಾಡದು ಕೂಡಾ ನನ್ನ ಆಯುಷ್ಯ ಸಾಲದು ಅನಿಸ್ತು. ಯಾಕಂದರೆ ಒಂದೂರಿಗೂ ಇನ್ನೊಂದೂರಿಗೂ ಒಂದೇ ಶಬ್ದಕ್ಕ ಹೆಚ್ಚು ಕಡಿಮೆ ಆಗತದ. ಬಹಳಷ್ಟು ಶಬ್ದಗಳು ಸತ್ತು ಹೋಗತಾ ಇವೆ.

ಸಂ: *ಗ್ರಾಮೀಣ ಪ್ರದೇಶದಲ್ಲೂ?*

ಮು: ಬಹಳಷ್ಟು. ಟಿ.ವಿ ಭಾಷೆನ ಅನುಕರಿಸವವರು ಸಾಕಷ್ಟು ಜನ ಅದಾರ.

ಸಂ: *ಈ ಆಧುನಿಕ ಬದಲಾವಣೇನ ತಡಿಯೋಕೆ ಸಾಧ್ಯ ಇದೆ ಅಂತ ಅನಸುತ್ತಾ?*

ಮು: ಮನಸ ಮಾಡಿದರ ತಡೀಬೌದು. ಇದು ಸಾಮೂಹಿಕವಾಗಿ ಆಗಬೇಕಾದಂತಹ ಕೆಲಸ. ಒಂದು ಹೊಲಕ್ಕ ಯಾವುದಾದರೂ ಒಂದು ರೋಗ ಬಿದ್ರ, ನಮ್ಮ ಹೊಲಕ್ಕ ಒಂದ ನಾವು ಔಷದ ಹೊಡಕೊಂಡ್ರ? ಮುಂದ್ಲ ಹೊಲಕ ಹೋಗಿ ಮತ್ತ ಹರಡ್ತದ. ಆ ಭಾಗದ ಜನ ಎಲ್ಲ ಸೇರಕೊಂಡು ಔಷದ ಹೊಡದರ ಆ ರೋಗ ಹೋದೀತು.

ಸಂ: *ನಮ್ಮ ಶಬ್ದ ಸಂಪತ್ತು ಉಳಿಸಿಕೊಳ್ಳಬೇಕು ಅಂದರ ಅವುಗಳನ್ನ ಒಂದು ಪುಸ್ತಕ*

*ರೂಪದಲ್ಲಿ ಸಂಗ್ರಹ ಮಾಡೋದ?*

ಮು: ಬಳಸಿಕೊಳ್ಳಬೇಕು ನಿಸಾತ್ರ ಜೀವನದಲ್ಲಿ. ಆ ಛಲಬೇಕು. ಆದರ ಅನಿವಾರ್ಯವಾದ ಶಬ್ದಗಳನ್ನು ತಗೊಳ್ರೀ.

ಸಂ: *ಈ ಆಧುನಿಕವಾದ ಕಟು ಬೆಳವಣಿಗೆಗಳ ಎದುರಿಗೆ ಭಾವನಾತ್ಮಕ ಛಲವೊಂದೇ ಬದಲಾವಣೆ ಉಂಟುಮಾಡುತ್ತಾ?*

ಮು: ಬದಲಾವಣೆ ಮಾಡವರೆಲ್ಲಾ ನಾವ ಅಲ್ಲ ಸಾರ್. ಉದಾಗೆ: ಸ್ಪೇನ್‌ನಲ್ಲಿ ಕಡ್ಡಾಯದಿಂದ ಅಲ್ಲಿ ಯಾವುದೇ ಒಂದು ಜನಾಂಗದ ಭಾಷೆ ಮೇಲೆ ಇವರು ಹೇರಲಿಕ್ಕೆ ಹೋದರು, ಅವರು ನಿರಾಕರಿಸಿದರು. ಅದೇ ರೀತಿಯಲ್ಲಿ ಐರ್ಲೆಂಡಿನಲ್ಲಿ England ಪಕ್ಕದಲ್ಲೆ ಬರುತ್ತೆ, ಇಂಗ್ಲೀಷ್ ಭಾಷೆಯನ್ನ ಹೇರಲಿಕ್ಕೆ ಹೋದರು. ಅವರು ಒಪ್ಪಲಿಲ್ಲ. ತಮ್ಮ ಭಾಷೆಗಳನ್ನ ಉಳಿಸಿಕೊಂಡರು. ರಷ್ಯಾದಲ್ಲಿ ವಿಜ್ಞಾನಿಗಳು ಇಂಗ್ಲೀಷ್ ಶಬ್ದಗಳನ್ನೇ ಬಳಸಲಿಲ್ಲ.

ಸಂ: *ಚರಿತ್ರೆಯ ಬಹಳ ಸಂಕೀರ್ಣವಾದ ಒಂದು ಸಂಗತಿಯನ್ನು ನೀವು ಹೇಳತಾ ಇದ್ದೀರಿ. ಆಧುನಿಕ ಬದಲಾವಣೆಗಳನ್ನು ಭಾರತದಲ್ಲಿ ಉಂಟುಮಾಡಿದ ಮಾಡುತ್ತಿರುವ ಜಾಗತಿಕ ಶಕ್ತಿಗಳನ್ನು ಬೇರೆ ತರಹ ಅರ್ಥಮಾಡಿಕೊಳ್ಳಬೇಕಾಗಿದೆ. ಇಲ್ಲದಿದ್ರೆ ಇವು ಬರೀ ಅಭಿಮಾನದ ಮಾತಾಗಿ ಬಿಡುವ ಅಪಾಯವಿದೆ.*

ಮು: ಅಭಿಮಾನ ಯಾಕೆ, ದುಡಿಸಿಕೊಳ್ಳಬೇಕಲ್ಲ. ಭಾಷೆ ಮೇಲೆ ನಮ್ಮ ಬದುಕು ಆಧರಿಸದ, ನಾವು ನಮ್ಮನ್ನ ಇನ್ನೊಬ್ಬರಿಗೆ ತೋಡಿಕೊಳ್ಳೋದಕ ಭಾಷೆ ಬೇಕಲ್ಲರಿ, ಇದೊಂದ ಹೇಳತಿನಿ. ಚಿಗಟೇರಿ ಪದಕೋಶದಲ್ಲಿ ಮಳೆ ಬೀಳೋದನ್ನ ೨೪ ನಮೂನಿ ಗುರುತಿಸಿದಾರೆ. ಅವು ಇವತ್ತ ಕಳೆದು ಹೋಗತಾವ. ಎಷ್ಟು ಮಳಿ ಬಂತ ಅಂತ ಹೇಳೋದು ಕಷ್ಟ ಆಗತದ. ಬಹಳಷ್ಟು ವಿಷಯಗಳಲ್ಲಿ ನಮ್ಮನ್ನು ನಾವು ತೋಡಕೊಳ್ಳೋದಕ್ಕೆ ನಮ್ಮ ಭಾಷೆ ಅಸಮರ್ಥ ಅಂತಲೊ ಅಥವಾ ನಾವೇ ಅಸಮರ್ಥ ಅದೀವಿ ಅನ್ನೋದನ್ನ ಹೆಜ್ಜೆಹೆಜ್ಜೆಗೂ ತೋರಿಸಿಕೊಳ್ಳತಾ ಇದ್ದೀವಿ.

ಬರಹ: ಐ.ಜೆ. ಮ್ಯಾಗೇರಿ

ಆಕರಸೂಚಿ

# ಹೊರನಾಡುಗಳಲ್ಲಿ ಕೆಳದಿ ಇತಿಹಾಸದ ಆಕರಗಳು

● ಕೆಳದಿ ಗುಂಡಾಜೋಯಿಸ್

ಮಧ್ಯಕಾಲೀನ ಭಾರತ ಚರಿತ್ರೆಯಲ್ಲಿ ಕ್ರಿ.ಶ. ೧೪೯೯ರಿಂದ ೧೭೬೩ರವರೆಗೆ ದಕ್ಷಿಣ ಭಾರತದಲ್ಲಿ ವೈಭವದಿಂದ ರಾಜ್ಯವಾಳಿದ ಕೆಳದಿ ಇತಿಹಾಸ ಪ್ರಮುಖವಾದುದು. ರಾಜಕೀಯ, ಆರ್ಥಿಕ, ಸಾಮಾಜಿಕ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಕೆಳದಿ ಅರಸರ ಕೊಡುಗೆ ಗಮನಾರ್ಹವಾದುದು. ಈಗಿನ ಇಂಗ್ಲೆಂಡಿಗಿಂತಲೂ ಹೆಚ್ಚಾದ ವಿಸ್ತಾರ ಪ್ರದೇಶಗಳನ್ನೊಳಗೊಂಡ ಈ ಇತಿಹಾಸವನ್ನು ಪ್ರಥಮವಾಗಿ ಪೀಟರ್ ಆಲ್ವಾರಿಸ್‌ರವರು. ಬೊಂಬಾಯಿ ವಿಶ್ವವಿದ್ಯಾಲಯಕ್ಕೆ ಮಹಾ ಪ್ರಬಂಧವನ್ನು ಸಾದರಪಡಿಸಿ ಬೆಳಕಿಗೆ ತಂದರು. ರಾಜಕೀಯ ಇತಿಹಾಸದಿಂದ ಈವರೆಗೆ ಬೆಳಕು ಕಂಡ ಕೆಳದಿ ಚರಿತ್ರೆಯ ಮಹಾ ಸಂಪುಟಗಳಲ್ಲಿ ಹೊಸನಾಡಿನಲ್ಲಿರುವ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಸಾಗರೋತ್ತರ ಇತಿಹಾಸದ ಆಕರಗಳು ವಿದ್ವಾಂಸರ ಗಮನಕ್ಕೆ ಬಾರದೇ ಅವುಗಳು ವಿಪುಲವಾಗಿದ್ದರೂ ಅವಕಾಶ ವಂಚಿತವಾದಂತಿವೆ. ಈ ಕಾರಣಗಳಿಂದ ಅಪೂರ್ಣವೆನಿಸಿದ ಕೆಳದಿ ಇತಿಹಾಸದ ಸಂಪುಟ ರಚನೆಗೆ ಮೂಲ ಸಾಮಗ್ರಿಗಳ ಅನ್ವೇಷಣೆ, ಪರಿವೀಕ್ಷಣೆ ಹಾಗೂ ಅಧ್ಯಯನ ಕಾರ್ಯಗಳು ವಸ್ತುನಿಷ್ಠ, ನಿರ್ದಿಷ್ಟ ಇತಿಹಾಸ ರಚನೆಗೆ ಎಂದಿಗಿಂತ ಇಂದು ಹೆಚ್ಚು ಗಮನ ಹರಿಸುವುದು ಆದ್ಯ ಕರ್ತವ್ಯವಾಗಿದೆ. ಕರ್ನಾಟಕ ಹಾಗೂ ದಕ್ಷಿಣ ಭಾರತ ಇತಿಹಾಸ ರಚನೆಯ ನಿಟ್ಟಿನಲ್ಲಿ ಸಂಪತ್ಸಮೃದ್ಧವಾದ ಕೆಳದಿ ಚರಿತ್ರೆಯ ಮೂಲ ಆಕರಗಳು ಹೊರನಾಡಿನಲ್ಲಿ ವಿಪುಲವಾಗಿ ಇತರೆ ಭಾಷೆಗಳಲ್ಲಿದ್ದು ಸಂಶೋಧನೆಗೆ ಎದುರು ನೋಡುತ್ತಿವೆ. ಉದಾಹರಣೆಗಾಗಿ ತಮಿಳು ವಿದ್ವಾಂಸ ಆನಂದರಂಗ ಪಿಳ್ಳೆಯ ದಿನಚರಿಯ ಕೃತಿಯಲ್ಲಿ ಕೆಳದಿ ಇತಿಹಾಸವಲ್ಲದೆ ಕರ್ನಾಟಕದ ಬಹುಭಾಗದ ಐತಿಹಾಸಿಕ ಸಂಗತಿಗಳಿದ್ದರೂ ಆ ರಾಜ್ಯದ ವಿದ್ವಾಂಸ ಡಾ. ವೃದ್ಧಗಿರೀಶನ್‌ರವರಿಗೂ ಗೋಚರಿಸದೇ ಕೈಬಿಟ್ಟು ಹೋದುದು ವಿಪರ್ಯಾಸ.[1] ಕೊನೆಯ ಪಕ್ಷ ಮುಂದಿನ ಸಂಶೋಧನೆಗಳಿಗೆ ಸಾಹಸೀ ಮನೋಭಾವದ ತಜ್ಞ ವಿದ್ವಾಂಸರಿಂದ ಇವುಗಳ ಸೂಚಿ (ಕ್ಯಾಟಲಾಗ್)ಯನ್ನಾದರೂ ಸಿದ್ಧಪಡಿಸಿ ಪ್ರಕಟಿಸುವುದು ಆದ್ಯ ಕರ್ತವ್ಯ.[2] ಪ್ರಕೃತ ಈ ಪ್ರಬಂಧದಲ್ಲಿ ಕರ್ನಾಟಕದ ಚರಿತ್ರೆಯಲ್ಲಿ ಕೆಳದಿ ಇತಿಹಾಸದ ಪ್ರಾಮುಖ್ಯತೆಯನ್ನು ಆಧರಿಸಿ

ಹೊರನಾಡಿನಲ್ಲಿ ಲಭಿಸುವ ಆಕರಗಳ ಮಾಹಿತಿಯನ್ನು ಸ್ಥೂಲವಾಗಿ ವಿದ್ವಾಂಸರ ಗಮನಕ್ಕೆ ತರಲು ಪ್ರಯತ್ನಿಸಲಾಗಿದೆ.

**ಆಕರಗಳು**

ಹೊರನಾಡಿನ ಕೆಳದಿ ಇತಿಹಾಸ ಕುರಿತ ಆಕರಗಳನ್ನು ಅಂತರ್ದೇಶಿಯ ಮತ್ತು ವಿದೇಶೀ ಮೂಲ ಸಾಮಗ್ರಿಗಳಾಗಿ ವಿಂಗಡಿಸಬಹುದು. ದೇಶೀಯ ಐತಿಹಾಸಿಕ ಆಕರ ಸಾಮಗ್ರಿಗಳು ಈ ಕೆಳಗಿನಂತೆ ಉಪಲಬ್ಧವಿದೆ.

೧. ಆರ್ ಸತ್ಯನಾಥ ಅಯ್ಯರ್‌ರವರ ಮಧುರಾ ನಾಯಕರ ಚರಿತ್ರೆ

೨. ವೃದ್ಧಗಿರೀಶನ್ ವಿರಚಿತ ತಂಜಾವೂರಿನ ನಾಯಕರು.

೩. ಸಿ.ಎಸ್. ಶ್ರೀನಿವಾಸಚಾರಿಯವರ ಜಿಂಜೀ ಆಡಳಿತ ಚರಿತ್ರೆ.

೪. ಗೋವಾ ಮತ್ತು ತಲಚೇರಿ ಪತ್ರಾಗಾರದ ಸಂಗ್ರಹಗಳು

೫. ಬೊಂಬಾಯಿಯಲ್ಲಿರುವ ಸೇಂಟ್ ಕ್ಸೇವಿಯರ್ಸ್ ಕಾಲೇಜಿನ ಅಪ್ರಕಟಿತ ಸಾಮಗ್ರಿಗಳು.

೬. ಆನಂದರಂಗ ಪಿಳ್ಳೆಯ ತಮಿಳು ದಿನಚರಿ.

೭. ಪೇಷ್ವೆದಫ್ತರಗಳು, ರುಮಾಲುಗಳು(ರುಜಕರ್ಡ್) ಹಾಗೂ ರಾಜಾರಾಮ ಚರಿತಮು ಸುಭಾಷಿತ ಸುರದ್ರುಮ.

೮. ತಮಿಳುನಾಡಿನ ಪ್ರಾಚ್ಯ ಸಂಶೋಧನಾ ಸಂಸ್ಥೆಯ ಸಂಗ್ರಹಗಳು.

೯. ಅಲಹಾಬಾದ್ ಮತ್ತು ತಂಜಾವೂರಿನಲ್ಲಿರುವ ಸಂಸ್ಕೃತ ಹಸ್ತಪ್ರತಿಗಳು(ಗೀತಗೌರೀವರ)[೫] ಇತ್ಯಾದಿ.

೧೦. ಬೆನಾರೆಸ್‌ನಲ್ಲಿರುವ ಕೆಳದಿ ಅರಸರ ಶಾಸನ ಸಾಮಗ್ರಿಗಳು.

೧೧. ಗ್ರಾಂಟ್ ಡಫ್‌ನಲ್ಲಿರುವ ಮರಾಠಾ ಚಾರಿತ್ರಿಕ ಆಕರಗಳು.

೧೨. ರಾಬರ್ಟ್ ಸಿವೆಲ್‌ರವರ ಅಪ್ರಕಟಿತ ಶಾಸನ ಸೂಚೀ ವರದಿಗಳು

೧೩. Nagam Aiy-travancore State Mannual.

**ವಿದೇಶೀಯ ಆಕರಗಳು**

೧. ಲಂಡನ್ ಇಂಡಿಯಾ ಆಫೀಸ್ ಲೈಬ್ರೇರಿಯಲ್ಲಿರುವ ಕೆಳದಿ ನೃಪವಿಜಯ ಹಸ್ತಪ್ರತಿ ಹಾಗು ಡಾ. ಶ್ರೀನಿವಾಸ ಹಾವನೂರ್ ರವರು ಹೇಳಿದ ಕೆ.ನೃ.ವಿ. ಇಂಗ್ಲೀಶ್ ಭಾಗ.

೨. Proceedings of Indian History Records commisssion

೩. Journal of Royal Asiatic Society 1911

೪. History of Christianity in canara by S.Silva.

೫. Letters and despatches of Duke of Vellington.

೬. Heras Henry Sangrahagalu.

೭. G.M. Moraes-Mangalor- A Historical Sketch-New Delhi

**ಅಪ್ರಕಟಿತ ದಿನಚರಿಗಳು**

Dom Duarte Menezes (1584-88)

Conde Linhares Naronha (1629-1635)

Marques of Alorna (1744-1750)

Public Department Dairy (1730-1763)

English Records (English Factories in India (Un published)[9]

Bombay Factory Records

Carwar Factory Records

Secretariat Inward Letter Book

Secretariat Outward Letter Book

Ethal Bruce Sainsbury-Notes by Foster, Calendar of the court Minutes of the East India Company (1635-35)

Dairy of Tellicherry Factory

Carwar Factory outward letter Book

Logan; Malaba-A collection of treaties (wilks History) wilks History

De-al-Tour

Hyder namah: Captain Fracies Robson-Life of Hyder Ally.

Burhans Tuzuk-- Walajahi

Buchana-Journey through Madras[10]

Kirmani: Mir Hussain Ali Khan: The History of Hyder Naik (The Neshammi Hyduri): Col W Miles Translation, London 1842. Michaud J. Historre des progres et dela chute de L' Emphire de Mysore sons Les regnes d' Hyder Aly et Tippoo Saib (Paris).

**ವಿದೇಶೀಯ ಪ್ರವಾಸೀ ಕಥನಗಳು**

೧. The Travels of Pietro Della Valle (Italian TRavellor) 1623[11]

೨. The Travels of Peter Mundi in Europa and Asia (1637) Vol. III.

೩. Dr John Fryer Account of India englishman (London 1873)

೪. Hamilton Alexander: A new Account of the East Indies.

೫. Francois Pyrard- The voyages to the East Indies (London).

೬. Muhammad Husyan Namar Arabs Geographers knowledge of Southern India (Madras 1942)

೭. Nambirajan 'Goa enterning point of Arab Merchants into Deccan and South India-Marine Acrchaeology. proceedings 1992 Dona Paula.

೮. Purchas Pilgrims.

ಇದಲ್ಲದೆ ಅಬೇಕರಿ, ಜಾಕೋಬುಸ್ ಕ್ಯಾಟರ್ ವಿಶ್ಕಾರ್, ರಾಬರ್ಟ ಮನ್ರೋ ಮುಂತಾದವರ ವರದಿಗಳೂ ಗಮನಾರ್ಹವಾಗಿದ್ದು ಅಧ್ಯಯನ ಯೋಗ್ಯವಾಗಿವೆ.

**ಪೋರ್ತುಗೀಸ್ ದಾಖಲೆಗಳು**[೨]

೧. Moncoes do Reino(Unpublished)

೨. Instrancoe-Reghmientos (Unpublished)

೩. Pazes -E- Tratados[13]

೪. Briggs: Ferista- Travelognes?

೫. Archivo Portuguese Oriental.

೬. Gracia de Orta: Tratado delasgrogas.

೭. Bulhao-Pato: Documentos

೮. Feria-- Souza-Asia Portuguesa-Commentaries do grande Alfonso de Alburqurque.

೯. Asia Portugues-Fari-a-Souza

೧೦. Danvers F.C: portuguese in India

೧೧. Correa: Lendas da India

೧೨. Linafelner: subsidos

೧೩. Gubernatis: Storia dei Viaggiatori

೧೪. Burgess- Consens

೧೫. Pyard de Laval

೧೬. Reis Vizinhos, Livro de (Unpublished)

೧೭. OS Portuguezes

೧೮. La das Moncoes.

೧೯. La dos Reis Vizinhos.

೨೦. Danvers: The Portuguese in Malabar.

೨೧. Pinkerton Voyages

೨೨. Francois Pyrard-The voyages to East Indies, Ed: Foster, London.

೨೩. The Portuguese in Kanara(unpublished-Dr. B.S. Shastry.

೨೪. Pearson M.N. The portuguese in India

೨೫. Antony Disne-Count of Linhares and Twlight of the pepper Empire. the portuguese trade in the early 17th Century.

೨೬. Cartazes livro de (Unpublished)

೨೭. Canara Livro da Correspondencia do (Unpublished)

೨೮. Casados (ಈ ಕುರಿತು ಅನುಬಂಧ ನೋಡಿರಿ)

**ಡಚ್ ಮತ್ತು ಇತರೆ ಆಕರಗಳು**

೧. ಬಾಟವಿಯ ಡಾಗ್ ರಿಜಿಷ್ಟರ.

೨. Secret Military Department Diary(Madras)

೩. Ethal Bruce, Sainbury, Notes by Foster, Calender of the court minutes of etc., of the East India Company 1635, Oxford 1907

೪. Fawcett charles- The English factories in India

೫. Boxer C.R. A glimpse of the Goa Archives.

೬. Menezes W.J. Canara and the Portuguese. (Unpublished) theisis Bombay-1953)

೭. Casados.

ಇವಲ್ಲದೆ ಫ್ರೆಂಚ್, ಅರೇಬಿಯಾ ಚಂದಾಸಾಹೇಬ ಕುರಿತು ಪಾಂಡಿಚೆರಿ ಪತ್ರಾಗಾರ ಮುಂತಾದೆಡೆಗಳಲ್ಲಿ ಲಭಿಸುವ ಕೆಳದಿ ಇತಿಹಾಸದ ಆಕರಗಳು ಗಮನಾರ್ಹವಾದುವುಗಳು.

## ಉಪಸಂಹಾರ

ಕೆಳದಿ ಇತಿಹಾಸದ ಆಕರಗಳು ದೇಶ ವಿದೇಶಗಳಲ್ಲಿ ವಿಪುಲವಾಗಿದ್ದು ಚದುರಿ ಹೋಗಿವೆ. ಇಂಗ್ಲೀಶ್, ಮರಾಠಿ, ಫ್ರೆಂಚ್, ಪೋರ್ತುಗೀಸ್, ಪರ್ಷಿಯ,[೧] ಡಚ್ ಭಾಷೆಗಳನ್ನು ಅಧ್ಯಯನ ಮಾಡುವ ಮೂಲಕ ಸಾಹಸೀ ಮನೋಭಾವದ ಸಂಶೋಧಕರು ಈ ದಿಸೆಯಲ್ಲಿ ಸಂಶೋಧನೆ ನಡೆಸಿದಲ್ಲಿ ಅಧ್ಯಯನಕ್ಕೆ ವಿಪುಲ ಅವಕಾಶಗಳಿವೆ.[೨] ಇದಕ್ಕೆ ನೂರಾರು ವರ್ಷಗಳ ಹಾಗು ಆರ್ಥಿಕ ಬಲವುಳ್ಳ, ಸುದೀರ್ಘ ಯೋಜನೆ ಅಗತ್ಯ. ಕಂಪ್ಯೂಟರ್ ವಿಜ್ಞಾನಯುಗದ ಈ ಕಾಲದಲ್ಲಿ ಕೊನೆಯ ಪಕ್ಷ ಹೊರನಾಡಿನಲ್ಲಿ ಲಭಿಸುವ ಇಂತಹ ಆಕರಗಳನ್ನು ಸಮೀಕ್ಷಿಸಿ ಸೂಚಿಯನ್ನು (ಕ್ಯಾಟಲಾಗ್)ಸಿದ್ಧಪಡಿಸುವಲ್ಲಿ ಕೆಳದಿ ಸಂಶೋಧನಾಲಯಕ್ಕೆ ವಿಶ್ವವಿದ್ಯಾಲಯದ ಧನಸಹಾಯ ಆಯೋಗ ಅಥವಾ ಸರಕಾರ ಎಲ್ಲ ಪ್ರೋತ್ಸಾಹ ನೀಡುವುದು ಆದ್ಯ ಕರ್ತವ್ಯ.

ವಿಶೇಷ ಸಂಶೋಧನಾ ಯೋಜನೆಗಳಿಗೆ ಇಂತಹ ವಿಕೇಂದ್ರೀಕರಣ ಗ್ರಾಮಾಂತರ ಕ್ಷೇತ್ರಗಳಲ್ಲಿ ನಿರುದ್ಯೋಗಿ ಸ್ನಾತಕೋತ್ತರ ವಿದ್ವಾಂಸರನ್ನು ಬಳಸಿಕೊಂಡು ಸ್ಥಳೀಯ ಇತಿಹಾಸ- ಸಂಸ್ಕೃತಿಗಳನ್ನು ಕುರಿತು ಅಧ್ಯಯನ ಕೈಗೊಳ್ಳಲು ವಿಪುಲ ಅವಕಾಶಗಳಿವೆ. ಕೆಳದಿ ಸಂಶೋಧನಾಲಯ ದೇಶದಲ್ಲಿಯೇ ಇಂತಹ ಮಾದರೀ ಅಧ್ಯಯನಾದಿ ಪ್ರಯೋಗಾಲಯವಾಗಿರುವುದನ್ನು ದೇಶ-ವಿದೇಶೀಯ ತಜ್ಞರು ಗಮನಿಸಿದ್ದು ಸರಕಾರವು ಇದಕ್ಕೆ ಸಹಮತವಿತ್ತಿದೆ.

೧. ಸಿರ್ಸಿಯಲ್ಲಿ ಜರುಗಿದ ಕರ್ನಾಟಕ ಇತಿಹಾಸ ಅಕಾಡೆಮಿ ಸಭೆಯಲ್ಲಿ ಸಾದರಪಡಿಸಿದ ಈ ಕುರಿತ ನನ್ನ ಪ್ರಬಂಧ ಅವಲೋಕಿಸಬಹುದಾಗಿದೆ.

೨. ಐ.ಸಿ.ಹೆಚ್.ಆರ್. ನೆರವಿನಿಂದ ಡಾ. ವೆಂಕಟೇಶ್ ಈ ಕುರಿತು ಬಿಬ್ಲಿಯೋಗ್ರಫಿ ಸಿದ್ಧಪಡಿಸುತ್ತಿದ್ದಾರೆ.

೩. ಕೆಳದಿ ಮತ್ತು ಕೇರಳ ಗಡಿ ಒಪ್ಪಂದದ ಅಪೂರ್ವ ದಾಖಲೆಯೊಂದು ತಲಚೇರಿ ಪತ್ರಾಗಾರದಲ್ಲಿದೆ.

೪. ಅಲಹಾಬಾದಿನ ಗಂಗಾನಾಥ ಝಲಾ ಕೇಂದ್ರೀಯ ಸಂಸ್ಕೃತ ವಿದ್ಯಾಪೀಠದ ಪ್ರಿನ್ಸಿಪಾಲ್ ಡಾ.ಜಿ.ಸಿ.ತ್ರಿಪಾಠಿಯವರು ಗೀತಗೌರಿವರ ಕುರಿತು ಸಂಶೋಧನೆ ಕೈಗೊಂಡಿದ್ದು ಅಲ್ಲಿನ ಗ್ರಂಥಭಂಡಾರದಲ್ಲಿಯೂ ಹಸ್ತಪ್ರತಿ ಇರುವುದನ್ನು ತಿಳಿಸಿದ್ದಾರೆ.

೫. ಈ ಕುರಿತು ಹಸ್ತಪ್ರತಿಯನ್ನು ಡಾ. ಕಲ್ಬಾಪುರೆ ಸಂಶೋಧನೆ ನಡೆಸಿದ್ದಾರೆ.

೬. ಸಿವೆಲ್ ರಾಬರ್ಟ್: ಲಿಸ್ಟ್ ಆಫ್ ಇನ್ಸ್ಕ್ರಿಪ್ಷನ್ ಮತ್ತು ಸ್ಕೆಚಸ್ ಆಫ್ ಸದರನ್ ಸೌತ್ ಇಂಡಿಯನ್ ಇನ್ಸ್ಕ್ರಿಪ್ಶನ್.

೭. ನಾಯಕಾಸ್ ಆಫ್ ಇಕ್ಕೇರಿ-ಡಾ. ಸ್ವಾಮಿನಾಥನ್ ಪು ೭ (ಮದ್ರಾಸ್ ವಿ.ವಿ.)

೮. ಕ.ಇ.ಅ. ಸಂ. ೧೧: ೧೯೯೯ ಪು ೨೬೪ ನೋಡಿರಿ.

೯. ಕೆಳದಿ ವೀರಭದ್ರ ನಾಯಕನು ೧೬೩೭ರಲ್ಲಿ ಇಂಗ್ಲೀಷರಿಗೆ ಬರೆದ ಪತ್ರ ಕನ್ನಡ ಭಾಷೆಯಲ್ಲಿ ಬೋಡ್ಲೀನ್ ಗ್ರಂಥಾಲಯದಲ್ಲಿದೆ.-ಮಹಾರಾಷ್ಟ್ರ ಪತ್ರಾಗಾರ, ಬಾಂಬೆ

೧೦. ಈ ಆಕರದಲ್ಲಿ ದಿವಾನ್ ಪೂರ್ಣಯ್ಯನವರು ಕೆಳದಿ ರಾಯಪದ್ಧತಿ ಹಸ್ತಪ್ರತಿಯನ್ನು ಬಂಗಾಳ ಸರಕಾರಕ್ಕೆ ಸಲ್ಲಿಸಿದ್ದು ಈವರೆಗೂ ಪತ್ತೆಯಾಗಿಲ್ಲ. ಎ.ಅರ್.ಕೃ.ರವರ ಕೆಳದಿ ನೃಪವಿಜಯ ಉಪೋದ್ಘಾತ ನೋಡಿರಿ.

೧೧. ಇಟಲಿಯ ತ್ರಿಯೇಸ್ತೆ ವಸ್ತು ಸಂಗ್ರಹಾಲಯದಿಂದ ಕೆಳದಿ ಸಂಶೋಧನಾಲಯಕ್ಕೆ ತರಿಸಿ ಪ್ರದರ್ಶನದಲ್ಲಿರಿಸಿದೆ. ರಾಯಚೂರಿನಲ್ಲಿ ಜರುಗಿದ ಆ ಸಭೆಯ ನನ್ನ ಪ್ರಬಂಧವನ್ನು ಗಮನಿಸಬಹುದಾಗಿದೆ. ಕ.ಇ..ಅ.ಸಂಪುಟ ನೋಡಿರಿ.

೧೨. ಕೆಳದಿ ಚೆನ್ನಮ್ಮಾಜಿಯ ಅಂತ್ಯಕಾಲವು ಈ ಆಕರದಲ್ಲಿದ್ದು ದಿ. ೨೯-೩-೧೬೯೭ಕ್ಕೆ ಸ್ವಲ್ಪ ಮುಂಚೆ ಎಂದು ಉಲ್ಲೇಖಿಸುತ್ತದೆ.

೧೩. ಈ ಆಕರಗಳು ಅಭ್ರೋಡ ಸೆಂಟರಿಯ ಜೆರಲ್ ಡೂ ಗೊವೆರ್ನೊ, ಪಣಜಿ ಮತ್ತು ಲಿಸ್ಬನ್‌ನಲ್ಲಿವೆ.

೧೪. ಕೆಳದಿ ಅರೆಬಿಯಾ ವಾಣಿಜ್ಯ ಇತಿಹಾಸ ಕುರಿತು ಇ. ಅ. ಯಲ್ಲಿ ಸಾದರಪಡಿಸಿದ ನನ್ನ ಪ್ರಬಂಧ ಅವಲೋಕಿಸಬಹುದು.

೧೫. ಹಯವದನರಾವ್ ಗೆಜೆಟಿರಿಗಿಂತಲೂ ಹೆಚ್ಚು ಬೃಹತ್ ಸಂಪುಟಗಳನ್ನು ಸಿದ್ಧಪಡಿಸಲು ಯೋಗ್ಯವಾದ ಈ ಅಧ್ಯಯನಕ್ಕೆ ಲ್ಯೂಯಿೀ ರೈಸ್ ರಂತೆಯೇ.

## ಈ ಸಂಚಿಕೆ ಲೇಖಕರು

೧. ಪ್ರೊ. ಓ. ಎಲ್. ನಾಗಭೂಷಣಸ್ವಾಮಿ ನಂ ೧೧೫,೧೩ನೇ ಕ್ರಾಸ್, ವಿಲ್ಸನ್ ಗಾರ್ಡನ್, ಬೆಂಗಳೂರು-೫೬೦ ೦೨೭
*ವೆಂಕಟೇಶ ಮೂರ್ತಿ, ಸಂಶೋಧನಾ ವಿದ್ಯಾರ್ಥಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ*

೨. ಕುಂ. ವೀರಭದ್ರಪ್ಪ, ಅಧ್ಯಾಪಕ, ಹಿರೇಹಾಳ್, ಅನಂತಪುರ ಜಿಲ್ಲೆ

೩. ಡಾ. ಎಂ. ಉಷಾ, ಅಧ್ಯಾಪಕರು, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪. ಮಲ್ಲಿಕಾರ್ಜುನ ವಣೇನೂರು, ಸಂಶೋಧನ ಸಹಾಯಕರು, ಮ್ಯೂಸಿಯಂ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫. ಡಾ. ಆ. ಸುಂದರ, ನಿವೃತ್ತ ಪ್ರಾಧ್ಯಾಪಕರು, 'ಸೌಂದರ್ಯಶ್ರೀ', ಭಾರತೀನಗರ, ಧಾರವಾಡ-೫೮೦ ೦೦೧

೬. ದಿ.ಬಿ.ಎಂ ಶ್ರೀಕಂಠಯ್ಯನವರು

೭. ದಿ. ಇಬ್ರಾಹೀಂ ಮಹಮ್ಮದ್ ಜುಬೇರಿ

೮. ಡಾ. ಕೃಷ್ಣಕೊಲ್ಹಾರ ಕುಲಕರ್ಣಿ, ಗೋಡಬೋಲೆ ಚಾಳ, ಕಾಳಮ್ಮಗುಡಿ ಹತ್ತಿರ, ಬಿಜಾಪುರ-೫೮೬ ೧೦೧

೯. ಮಾಧವ ಪೆರಾಜೆ, ಅಧ್ಯಾಪಕರು, ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೦. ಡಾ. ಭಾಲಚಂದ್ರ ಜಯಶೆಟ್ಟಿ, 'ನಮ್ಮ ಮನೆ', ಜಯನಗರ, ಸೇಡಂ ರಸ್ತೆ, ಗುಲಬರ್ಗಾ-೫೮೫ ೧೦೫

೧೧. ಜಿ.ವಿ.ಆರ್. ನರಸಿಂಹಮೂರ್ತಿ 'ಅನುಪಮ', ದುರ್ಗಿಗುಡಿ ಬಡಾವಣೆ, [illegible]
[illegible]

೧೨. ಡಾ. ಶಾಂತಿನಾಥ ದಿಬ್ಬದ, ರೀಡರ್, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯದ ಸ್ನಾತಕೋತ್ತರ ಕೇಂದ್ರ, ನಂದಿಹಳ್ಳಿ-೫೮೩೧೧೯, ಸೊಂಡೂರು

೧೩. ಡಾ. ಪುರುಷೋತ್ತಮ ಬಿಳಿಮಲೆ. Deputy Director, American Institute of Indian Studies, 22, Sector-32, GURGAON-122001 (HARYANA)

೧೪. ಮುದೇನೂರು ಸಂಗಣ್ಣ, ಚಿಗಟೇರಿ-೫೮೩ ೧೨೭, ದಾವಣಗೆರೆ ಜಿಲ್ಲೆ
*ಐ.ಜಿ. ಮ್ಯಾಗೇರಿ, ಸಂಶೋಧನಾ ವಿದ್ಯಾರ್ಥಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ*

೧೫. ಕೆಳದಿ ಗುಂಡಾಜೋಯಿಸ್, ಕೆಳದಿ ಇತಿಹಾಸ ಸಂಶೋಧನ ಸಂಸ್ಥೆ, ಕೆಳದಿ-೫೭೭ ೪೦೧, ಶಿವಮೊಗ್ಗ ಜಿಲ್ಲೆ

